

# ಶಾಶ್ವತ ಅರ್ಥಶಾಸ್ತ್ರ

(ಗಾಂಧೀ ಆರ್ಥಿಕ ದರ್ಶನ)



ಜೆ. ಸಿ. ಕುಮಾರಪ್ಪ

ಸಂಪಾದಕ: ಸಿದ್ದವನಹಳ್ಳಿ ಕೃಷ್ಣಶರ್ಮ



# ಶಾಶ್ವತ ಅರ್ಥಶಾಸ್ತ್ರ




ಜೆ. ಸಿ. ಕುಮಾರಪ್ಪ



ಗಾಂಧೀ ಸ್ಮಾರಕ ನಿಧಿ (ಮೈಸೂರು ಶಾಖೆ)

ಬೆಂಗಳೂರು-೩.

# ಮುನ್ನುಡಿ

ಸೇವಾಗ್ರಾಮ
ವರ್ಧಾ, (ಮ. ಪ್ರ)

ಡಾ. ಕುಮಾರಪ್ಪನವರ 'ಶಾಶ್ವತ ಅರ್ಥಶಾಸ್ತ್ರ' ಜೈಲಿನಲ್ಲಿ ಬರೆದುದು. ಅರ್ಥಮಾಡಿಕೊಳ್ಳಲು ಸುಲಭವಲ್ಲ. ಇದರ ಸ್ವಾರಸ್ಯ ತಿಳಿಯಲು ೨-೩ ಸಲ ಗಮನವಿಟ್ಟು ಓದಬೇಕು. ಹಸ್ತಪ್ರತಿಯನ್ನು ಕೈಗೆ ತೆಗೆದುಕೊಂಡಾಗ ಇದರಲ್ಲಿ ಏನಿದೆಯೋ ಎಂದು ನಾನು ಕುತೂಹಲಗೊಂಡೆ. ಮೊದಲನೆಯ ಪ್ರಕರಣವೇ ನನಗೆ ಸಮಾಧಾನ ಕೊಟ್ಟಿತು. ಅನಾಯಾಸವಾಗಿ ಕೊನೆಯವರೆಗೂ ಓದಿದೆ. ಲಾಭವೇ ಆಯಿತು. ಈಗ ನಮ್ಮ ಸುತ್ತಲೂ ಕಾಣುವ ಕ್ಷಣಭಂಗುರ ಆರ್ಥಿಕ ವಿಧಾನದ ಬದಲು ಶಾಶ್ವತ ಆರ್ಥಿಕವ್ಯವಸ್ಥೆ ಬರಬೇಕಾದರೆ ಗ್ರಾಮೋದ್ಯೋಗಗಳೇ ಮಾರ್ಗ ಎನ್ನುತ್ತಾರೆ ಈ ಡಾಕ್ಟರ್. ಈ ದೇಹ ಆತ್ಮವನ್ನು ಅದುಮಿ ಅಟ್ಟಹಾಸದಿಂದ ಮೆರೆಯಲೋ ಅಥವಾ ಆತ್ಮ ಈ ದೇಹವನ್ನು ಗೆದ್ದು, ಅದಕ್ಕೆ ಬೇಕಾದಷ್ಟನ್ನು ಮಾತ್ರ ಕೊಟ್ಟು ಪಳಗಿಸಿ, ನಾಶವಂತವಾದ ಅದರ ಮೂಲಕವೇ ಅವಿನಾಶಿಯಾದ ತನ್ನ ಕಾರ್ಯವನ್ನು ಸಾಧಿಸಲೋ? – ಈ ಪ್ರಶ್ನೆಯನ್ನು ಬಿಡಿಸಿದಾರೆ. ಇದೇ 'ಉದಾತ್ತ ವಿಚಾರದ ಸರಳ ಜೀವನ.'

ಬೊಂಬಾಯಿಗೆ ಹೋಗುವ ರೈಲಿನಲ್ಲಿ
20-8-1945

ಮೋ. ಕ. ಗಾಂಧಿ

# ಪ್ರಾಸ್ತಾವಿಕ

ಯಾವುದು ಶಾಶ್ವತ? ಯಾವುದು ಕ್ಷಣಿಕ?

ದೇವರೊಬ್ಬನಲ್ಲದೆ ಮತ್ತಾವುದೂ ಶಾಶ್ವತವೆನ್ನಲು ಬರುವಂತಿಲ್ಲ. ದೇವರೊಬ್ಬನೇ ಕೊನೆ-ಮೊದಲು ಇಲ್ಲದವನು. ಅನಂತವಾದುದನ್ನು, ಪೂರ್ಣಾರ್ಥದಲ್ಲಿ ಸಂಪೂರ್ಣವಾಗಿ ಅರಿಯಲು ಮಾನವ ಬುದ್ಧಿಗೆ ಅಸಾಧ್ಯ. ಮಾನವ ಬುದ್ಧಿ ಪರಿಮಿತವಾದುದು. ಈ ಅರಿವು ಕಾಲಾದೇಶಾತೀತವಾದುದು. ದೇವರ ನಿಯಮಗಳಾದ ಸತ್ಯ ಪ್ರೀತಿಗಳು ಸೂಕ್ಷ್ಮಾತಿಸೂಕ್ಷ್ಮ ಅರ್ಥದಲ್ಲೂ ಶಾಶ್ವತ, ಅಪರಿವರ್ತನೀಯ. .ಆದುದರಿಂದ ಅನಂತ ಸತ್ಯ.

ಕಾಲ ದೇಶದ ಮಿತಿಯಲ್ಲಿ ಸಂಪೂರ್ಣ ಶಾಶ್ವತತೆಯಿಲ್ಲ. ಎಲ್ಲವೂ ಎಲ್ಲೋ ಮೊದಲಾಗಿ ಯಾವಾಗಲೋ ಕೊನೆಗಾಣುತ್ತವೆ. ಈ ಕೊನೆ-ಮೊದಲುಗಳೆರಡನ್ನು ಬೇರೆಬೇರೆಯಾಗಿಸುವ, ನಡುವಿನ ಕಾಲವೂ ಒಂದೇ ಅಳತೆಯದಲ್ಲ. ಕೆಲವು ವೇಳೆ ಅತ್ಯಲ್ಪ. ಕೆಲವು ವೇಳೆ ಅತಿ ದೀರ್ಘ. ಬೆಳಗ್ಗೆ ಅರಳಿ, ಸಂಜೆಗೆಲ್ಲ ಬಾಡಿ ಉದುರಿಹೋಗುತ್ತದೆ ಹೂ. ಅದರ ಬಾಳು ಕೆಲವೇ ಗಂಟೆ. ಆಮೆ ನೂರಾರು ವರ್ಷ ಬದುಕುತ್ತದೆಯಂತೆ. ನಮ್ಮ ಜಗತ್ತಿನ ವಯಸ್ಸನ್ನು ಲೆಕ್ಕ ಹಾಕಲು ಹೊರಟರೆ ಕೋಟಿಗಟ್ಟಲೆ ವರ್ಷಗಳ ಅಂಕೆಯೂ ಸಾಲದು. ಹೂವಿನ ಆಯುಸ್ಸಿಗೆ ಹೋಲಿಸಿದರೆ ಆಮೆ ದೀರ್ಘಾಯು; ಜಗತ್ತು ಶಾಶ್ವತ. ಇದೆಲ್ಲವೂ ಸಾಪೇಕ್ಷ, ಪರಸ್ಪರ ಹೋಲಿಕೆಯ ಮಾತು.

ದೇವರೇ ಪ್ರಕೃತಿ ಎಂದರೆ ಬೇರೆ. ಹಾಗೆನ್ನದಿದ್ದರೆ ಪ್ರಕೃತಿ ಕಾಲ ದೇಶಾಧೀನ. ಹಿಂದೆ ಯಾವಾಗಲೋ ಹುಟ್ಟಿತು; ಮುಂದೆ ಯಾವಾಗಲೋ ಇಲ್ಲದಂತಾಗುತ್ತದೆ. ಮಾನವಜೀವನ ನೂರುವರ್ಷದ ಗೆರೆ ಮುಟ್ಟುವುದೂ ಅಪರೂಪವೆ ಹೀಗಿರುವಾಗ ಪ್ರಕೃತಿಯ ಆಯುಸ್ಸನ್ನು ಅಳೆಯಲು ಜ್ಯೋತಿಷ ಶಾಸ್ತ್ರದ ಸಂಖ್ಯಾಸಂಕೇತಗಳೇ ಬೇಕು. ಅಂತೇ ಪ್ರಕೃತಿ ಶಾಶ್ವತ; ಅದರ ಮುಂದೆ ಮಾನವ ಜೀವನ ಕ್ಷಣಿಕ ಎನ್ನುತ್ತಾರೆ. ಈ ತುಲನೆಯ ಸಾಪೇಕ್ಷಾರ್ಥದಲ್ಲೇ 'ಶಾಶ್ವತ ಅರ್ಥಶಾಸ್ತ್ರ' ಎಂಬುದು.

ಜೆ. ಸಿ. ಕೆ.

# ಶಾಶ್ವತ ಅರ್ಥಶಾಸ್ತ್ರ

## ಪ್ರಕರಣ ೧

### ೧ ಪ್ರಕೃತಿ

ನಿರ್ಜೀವವಾಗಿ ಕಾಣುವ ಪದಾರ್ಥ ಎಷ್ಟೋ ಇವೆ ಪ್ರಕೃತಿಯಲ್ಲಿ. ಅವು ಬೆಳೆಯುವು, ಹೆಚ್ಚವು. ಇದ್ದಷ್ಟೇ ಇರುತ್ತವೆ. ಅವನ್ನು ಬಳಸಿದರೆ ಅವು ಕ್ಷೀಣವಾಗುತ್ತವೆ, ಮುಗಿದುಹೋಗುತ್ತವೆ. ಜಗತ್ತಿನಲ್ಲಿ ಇಂಥ ಪದಾರ್ಥಗಳ ರಾಶಿ, ಸಂಗ್ರಹ ಕೆಲವು ಮಟ್ಟಿಗೆ ಇದೆ. ಉದಾಹರಣೆ: ಕಲ್ಲಿದ್ದಲು, ಪೆಟ್ರೋಲು, ಕಬ್ಬಿಣ, ತಾಮ್ರ ಬಂಗಾರದಂಥ ಲೋಹಗಳು ಇತ್ಯಾದಿ. ಇವು ಒಂದು ನಿಶ್ಚಿತ ಪ್ರಮಾಣದಲ್ಲಿ ಸಿಗುತ್ತವೆಯಾದ್ದರಿಂದ ಇವನ್ನು ಕ್ಷಣಿಕ ಎನ್ನುತ್ತಾರೆ. ಅದೇ ಹರಿವ ನದಿಯ ನೀರನ್ನೂ ದಿನ ದಿನವೂ ಬೆಳೆಯುತ್ತಲೇ ಇರುವ ಅಡವಿಯನ್ನೂ 'ಶಾಶ್ವತ' ಎನ್ನುತ್ತಾರೆ. ಏಕೆಂದರೆ ಮನುಷ್ಯ ಅದರ ಪ್ರವಾಹವನ್ನಾಗಲಿ ಇದರ ಬೆಳವಣಿಗೆಯನ್ನಾಗಲಿ ಮಾತ್ರವೇ ಬಳಸಿದರೆ ಅವುಗಳ ರಾಶಿ ಕ್ಷೀಣವಾಗಲೇ ಆಗದು.

ಜನ್ಮಚಕ್ರವೇ ಪ್ರಾಣಿಕೋಟಿಯಲ್ಲಿ ಪ್ರಕೃತಿಯ ಶಾಶ್ವತೆಯ ರಹಸ್ಯ. ಹಲವಾರು ಅಂಶಗಳು ಸೇರಿ, ಪರಸ್ಪರ ಸಹಕರಿಸಿ, ಅಖಂಡ ಪ್ರಾಣ ಪ್ರವಾಹವನ್ನು ನಿರಂತರವಾಗಿ ಸಾಗಿಸುತ್ತಿವೆ. ತಾಯಿಗಿಡದಿಂದ ಒಂದು ಬೀಜ-ಕಾಳು ಕೆಳಗೆ ನೆಲದ ಮೇಲೆ ಬೀಳುತ್ತದೆ. ಆ ಕಾಳು ಮಣ್ಣಲ್ಲಿ ಹೂತು ನೆಲದೊಳಗೆ ಬೇರಿಳಿಯುಬಿಟ್ಟು ಆ ಬೇರಿನ ಮೂಲಕ ಸೂರ್ಯನ ಶಾಖ, ಗಾಳಿಯ ತಂಪು ತೇವಗಳ ನೆರವು ಪಡೆದು, ಪುಷ್ಟಿಕರ ಪದಾರ್ಥಗಳನ್ನು ಹೀರಿಕೊಳ್ಳುತ್ತದೆ. ಈ ರೀತಿ ಅದು ಮೊಳಕೆಯಾಗಿ ಎಲೆ ಚಿಗುರಿಸಿ, ಬೇರಿನ ಮೂಲಕ ನೆಲದಿಂದ ಆಹಾರ ಹೀರುವಂತೆ, ಎಲೆಗಳ ಮೂಲಕವೂ ಆಹಾರ ಹೀರಿಕೊಳ್ಳುತ್ತದೆ. ಈ ಎಲೆ ಸತ್ತರೆ ನೆಲಕ್ಕೆ ಬಿದ್ದು, ತಾಯಿಗಿಡ ಯಾವ ಪದಾರ್ಥಗಳನ್ನು ನೆಲದಿಂದ ಗಾಳಿ ಬೆಳಕಿನಿಂದ ಮೊದಲು

ಹೀರಿತ್ತೋ ಆಯಾ ಪದಾರ್ಥವಾಗಿ ವಿಂಗಡಿಸಿ ಹೋಗುತ್ತದೆ. ಆ ಪದಾರ್ಥಗಳು ಮತ್ತೆ ಇನ್ನೊಂದು ವರಸೆ ಗಿಡಗಳಿಗೆ ಅನ್ನವಾಗಬೇಕು. ಈ ಗಿಡಗಳ ಮಕರಂದವನ್ನು ಜೇನನ್ನು ತಮ್ಮ ಹೊಟ್ಟೆಗಾಗಿ ಹೀರುವಾಗ ದುಂಬಿಗಳು ಆ ಹೂಗಳಲ್ಲಿ ಫಲೋತ್ಪತ್ತಿಗೆ ಕಾರಣವಾಗುತ್ತವೆ. ಈ ಹೂ ಕಾಳಾಗಿ ಮುಂದಿನ ಪೀಳಿಗೆಯ ಗಿಡಗಳಿಗೆ ಬೀಜವಾಗುತ್ತದೆ. ಪಕ್ವವಾದಾಗ ಈ ಬೀಜ ನೆಲಕ್ಕೆ ಬಿದ್ದು, ಅದಕ್ಕೆ ಮೊದಲೇ ತರತರಗಳಾಗಿ ಗಿಡದೆಲೆ ಉದುರಿಬಿದ್ದು ಹುಲುಸುಗೊಂಡ ನೆಲದ ಸಹಾಯದಿಂದ ಜನ್ಮಧಾರಣೆ ಮಾಡುತ್ತದೆ. ಹೀಗೆ ಮತ್ತೊಂದು ಸಲ ಜನ್ಮಚಕ್ರ ಪ್ರಾರಂಭ. ಏನೂ ಅಡ್ಡಿ ಆತಂಕ ಬಾರದಿರುವವರೆಗೆ ಪ್ರಕೃತಿಯು ಈ ಕೆಲಸ ನಿರಂತರವಾಗಿ ನಡೆದು ಪ್ರಕೃತಿಯನ್ನು ಶಾಶ್ವತವಾಗಿಸುತ್ತದೆ.

ಈ ಜನ್ಮಚಕ್ರದ-ಪ್ರಾಣಪ್ರವಾಹದ ಭಾವವನ್ನು ಹಿಂದಿನ ಕಾಲದ ಶ್ಲೋಕವೊಂದು ಬಹಳ ಸುಲಭವಾಗಿಯೂ ರಮ್ಯವಾಗಿಯೂ ತಿಳಿಸುತ್ತದೆ.

**ಪುನರಪಿ ಜನನಂ ಪುನರಪಿ ಮರಣಂ ।**
**ಪುನರಪಿ ಜನನೀ ಜಠರೇ ಶಯನಂ ॥**

---

## ೨ ಕೆಲಸ-ಕೂಲಿ

ಕೆಲಸ ಎಂದರೆ ಈ ಪ್ರಾಣಪ್ರವಾಹವನ್ನು ನಿರಂತರವಾಗಿ ಹರಿಯಿಸಲು, ಈ ಜೀವನಚಕ್ರ ಪ್ರವರ್ತನೆ ಮಾಡಲು, ನೆರವಾಗುವ ಸಜೀವ ನಿರ್ಜೀವ ಸಮಸ್ತ ವಸ್ತುಗಳೂ ಮಾಡುವ ಪ್ರಯತ್ನ-ಕೃಷಿ. ತಿಳಿದೋ ತಿಳಿಯದೆಯೋ ಈ ಪ್ರವಾಹವನ್ನು ಯಾವಾಗಲಾದರೂ ಯಾವ ಸ್ಥಿತಿಯಲ್ಲಾದರೂ ಅಡ್ಡಗಟ್ಟಿದರೆ, ಈ ಜೀವನಚಕ್ರ ಪ್ರವರ್ತನವನ್ನು ನಿಲ್ಲಿಸಿದರೆ, ಅದರ ಪರಿಣಾಮ ಹಿಂಸೆ. ಹಿಂಸೆ ಅಡ್ಡಬಂದರೆ ಬೆಳವಣಿಗೆ-ಪ್ರಗತಿ ನಿಂತುಹೋಗಿ ಎಲ್ಲವೂ ವ್ಯರ್ಥ, ನಾಶ ಆಗುತ್ತದೆ. ಪ್ರಕೃತಿ ಬಹು ಕಠೋರ, ಕ್ಷಮಾಶೂನ್ಯ. ಅಂತೇ ಸ್ವಹಿತ-ಆತ್ಮರಕ್ಷಣೆಗಳಿಗಾಗಿ ಪೂರ್ಣ ಅಹಿಂಸೆ, ಸಹಕಾರ, ಪ್ರಕೃತಿ ನಿಯಮಾನುಸರಣಗಳು ಅತ್ಯಗತ್ಯ. ಹಾಗಾದರೆ ಪ್ರಾಣಪ್ರವಾಹ ಅಬಾಧಿತವಾಗಿ ಸಾಗುತ್ತಿರುತ್ತದೆ. ಜೀವನದ

ತೊರೆ ಬತ್ತದೆ ಇಂಗದೆ ಹರಿಯುತ್ತದೆ. ಇಲ್ಲವಾದರೆ ವಿದ್ಯುತ್ ಪ್ರವಾಹ ಹ್ರಸ್ವವಾಗಿ ಸರ್ವ ನಾಶವಾಗುವಂತೆ ಜೀವನ ಪ್ರವಾಹದಲ್ಲೂ ಆಗುತ್ತದೆ.

ಬದುಕಬೇಕೆಂದರೆ ಸಜೀವ ಪ್ರಾಣಿಗಳೂ ಕೂಡ ಪ್ರಕೃತಿ ನಿಯಮಗಳಿಗಧೀನವಾಗಿ ತಮ್ಮ ತಮ್ಮ ಕ್ಷೇತ್ರದಲ್ಲಿ ಸರಿಯಾಗಿ ನಡೆದುಕೊಳ್ಳಲೇ ಬೇಕು. ಮಣ್ಣುಹುಳು ತನ್ನ ಚಲನವಲನಗಳಿಂದ ಮಣ್ಣನ್ನು ಸಡಿಲಗೊಳಿಸಿ, ಆ ಮಣ್ಣು ಗಾಳಿ ನೀರುಗಳನ್ನು ಹೀರಿಕೊಳ್ಳುವಂತೆ ಅಣಿ ಮಾಡುತ್ತದೆ. ಸಸ್ಯಪದಾರ್ಥ ಮಿಶ್ರಿತವಾದ ಮಣ್ಣನ್ನು ತಿನ್ನುವಾಗ ಮಣ್ಣುಹುಳು ಅದರಲ್ಲಿನ ಬೇರೆಬೇರೆ ಪದಾರ್ಥಗಳನ್ನು ತನ್ನ ಹೊಟ್ಟೆಯಲ್ಲಿ ಚೆನ್ನಾಗಿ ಬೆರೆಸಿ ಕಲೆಸಿ ಸೊಗಸಾಗಿ ಅಣಿಮಾಡಿದ ಹೊಸ ಹುಲುಸು ಮಣ್ಣನ್ನು ಹೊರಕ್ಕೆ ಉಗುಳುತ್ತದೆ. ಈ ಮಣ್ಣಿನಿಂದ (Worm Casts) ತಮಗೆ ಬೇಕಾದ ಅನ್ನವನ್ನೂ ಪುಷ್ಟಿಯನ್ನೂ ಹೀರಿಕೊಳ್ಳಲು ಗಿಡಗಳಿಗೆ ಸರಾಗ, ಬಹು ಸುಲಭ.*

ದುಂಬಿಗಳು ಚಿಟ್ಟೆಗಳು ಗಿಡದ ಹೂವನ್ನು ಗಬ್ಬಮಾಡವೆ? ನೆಲ ಗಿಡ ಜಂತುಗಳೂ ಅದೇ ರೀತಿ ಸಹಕರಿಸುತ್ತವೆ. ಅದಕ್ಕೆ ಇದೊಂದು ದೃಷ್ಟಾಂತ.

ಹೀಗೆ ಎಸಗಿದ ಸೇವೆಗೆ, 'ಕೆಲಸಕ್ಕೆ', ಆಯಾ ಕೆಲಸಗಾರನಿಗೆ ಸಿಗುವ ಪ್ರತಿಫಲ ಹೊಟ್ಟೆ ತುಂಬಾ ಅನ್ನ. ಪ್ರಕೃತಿ ಬಹು ಪ್ರಾಮಾಣಿಕವಾದುದು. ಗಾಳಿ ನೀರುಗಳ ನೆಪದಲ್ಲಿ, ಸಜೀವ ನಿರ್ಜೀವ ಪ್ರಾಣಿಗಳೊಳಗೆ ಸಾಮರಸ್ಯ ತರಲು ತನಗೆ ದೊರೆತ ಸರ್ವ ಸಹಕಾರಕ್ಕೂ ಪ್ರತಿಯೊಂದು ಕ್ರಿಯೆಗೂ ಪ್ರಕೃತಿ ಪ್ರಾಮಾಣಿಕವಾಗಿ ಅನ್ನದ ರೂಪದಲ್ಲಿ ಕೂಲಿ ಕೊಡುತ್ತದೆ.

---

* ಈ ಸಜೀವ ಗೊಬ್ಬರದ ಬದಲು ರಾಸಾಯನಿಕ ಗೊಬ್ಬರವನ್ನು ಬಳಸಿದರೆ ಕೆಲವು ಕಾಲ ಬೆಳೆ ಹೆಚ್ಚು ದೊರೆತೀತಾಗಲಿ, ಅದನ್ನೇ ಬಳಸುತ್ತ ಬಂದರೆ ಕೆಲವು ಕಾಲದ ಮೇಲೆ ಆ ಗೊಬ್ಬರವೆ ಮಣ್ಣುಹುಳುಗಳನ್ನು ನಾಶಮಾಡುತ್ತದೆ. ಆ ಹುಳುಗಳು ರಾಸಾಯನಿಕ ಪದಾರ್ಥಗಳನ್ನು ತಿಂದು ಬದುಕಲಾರವು. ಮಣ್ಣುಹುಳುಗಳು ಇಲ್ಲದಾದರೆ ನೆಲ ಗಡುಸಾಗಿ ಸಾರಗೆಟ್ಟು ಬಂಜೆಯಾಗುತ್ತದೆ. ಸಹಜವಾದ ದನಗೊಬ್ಬರ ಎಲೆಗೊಬ್ಬರಗಳನ್ನು ಕೈಬಿಟ್ಟುದರಿಂದ ಪ್ರಕೃತಿಯ ಜೀವಚಕ್ರದ ಚಲನಕ್ಕೆ ಅಡ್ಡಿಯಾಗುತ್ತದೆ. ಅದರಿಂದ ಶಾಶ್ವತತೆಯ ಅರ್ಥವ್ಯವಸ್ಥೆಯ ಭಂಗಕ್ಕೆ ಅವಕಾಶವಾಗುತ್ತದೆ.

ಸಸ್ಯ ಲೋಕದಲ್ಲಿ ಪ್ರಾಣ ಸ್ಥಿರ, ಅಚಲರೂಪಿ. ಮೇಲಿಂದ ನೇರಾಗಿ ಕೆಳಗೆ, ತಾಯಿಗಿಡದ ಬಳಿಯಲ್ಲೇ ಬೀಳುತ್ತದೆ ಬೀಜ. ಎಲ್ಲಾ ಬೀಜಗಳೂ ಗಿಡದ ಅಡಿಯಲ್ಲೇ ಬಿದ್ದು ಮೊಳೆತರೆ ಅಲ್ಲಿ ನಿಬಿಡವಾಗಿ ಉಸಿರುಗಟ್ಟಿದಂತಾಗುತ್ತದೆ. ಆ ಬೀಜಗಳನ್ನು ದೂರ ಒಯ್ದು ಅಲ್ಲಲ್ಲಿ ಚೆಲ್ಲಬೇಕು. ಈ ಕೆಲಸಕ್ಕೆ ಪ್ರಕೃತಿ ಹಕ್ಕಿಗಳನ್ನು, ಪ್ರಾಣಿಗಳನ್ನು ಉಪಯೋಗಿಸುತ್ತದೆ. ಈ ಸಂದರ್ಭದಲ್ಲಿ ಚರಪ್ರಾಣಿಗಳು ವಿಶಿಷ್ಟವಾದ ಕೆಲಸವೊಂದನ್ನು ಮಾಡುತ್ತವೆ. ಹಕ್ಕಿ ಒಂದು ಹಣ್ಣನ್ನು ತಿಂದು ಎಲ್ಲೋ ಗಾವುದ ದೂರದಲ್ಲಿ ಅದರ ಬೀಜವನ್ನು ಹಾಕಬಹುದು. ಈ ಸಮೀಕರಣ ಕಾರ್ಯ ಯಾರ ಉಪಕಾರಕ್ಕಾಗಿಯೂ ಮಾಡಿದುದಲ್ಲ; ತಾನು ಬದುಕಲು ಮಾಡಿದ ಕೆಲಸ. ತನ್ನ ಹಸಿವನ್ನು ಹಿಂಗಿಸಲು ತಾನು ತಿನ್ನುತ್ತದೆ. ತನ್ನ ಈ ಪ್ರಥಮ ಕರ್ತವ್ಯವನ್ನು ನೆರವೇರಿಸುವಾಗ ಜೀವಚಕ್ರ ಪ್ರವರ್ತನದಲ್ಲಿ ತನ್ನ ಪಾಲಿನ ಕೆಲಸವನ್ನು ತಾನು ಮಾಡುತ್ತದೆ; ಅಷ್ಟೆ.

ಹೀಗೆ ಪ್ರಕೃತಿ ತನ್ನ ವಿವಿಧ ಅಂಗಾಂಗಗಳನ್ನೂ ಪರಸ್ಪರ ಸಹಕಾರಕ್ಕಾಗಿ ಅಣಿಮಾಡಿಕೊಳ್ಳುತ್ತದೆ. ಪ್ರತಿಯೊಂದು ಅಂಗವೂ ತನ್ನ ತನ್ನ ಕೆಲಸ ಮಾಡುತ್ತ, ಅದರಿಂದಲೇ ಇತರ ಅಂಗಗಳು ತಮ್ಮ ಕೆಲಸ ತಾವು ಮಾಡಲು ದಾರಿ ಮಾಡುತ್ತ, ಚರಕೋಟಿ ಅಚರಕೋಟಿಗೆ, ಸಜೀವ ವರ್ಗ ನಿರ್ಜೀವ ವರ್ಗಕ್ಕೆ ನೆರವಾಗುತ್ತವೆ. ಹೀಗೆ ಒಂದೇ ಉದ್ದೇಶ್ಯ ಸಾಧನೆಗಾಗಿ ಪ್ರಕೃತಿಯೆಲ್ಲವೂ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಇದರಲ್ಲಿ ಯಾವುದೂ ಕೇವಲ ತನಗಾಗಿಯೇ ಬದುಕುತ್ತಿಲ್ಲ. ಈ ಚಕ್ರ ಸರಾಗವಾಗಿ ಸಮರಸವಾಗಿ ತಿರುಗಿದರೆ, ಇದನ್ನು ಹಿಂಸೆ ಮುರಿಯದಿದ್ದರೆ, ಶಾಶ್ವತ ಅರ್ಥವ್ಯವಸ್ಥೆ ಲಭಿಸುತ್ತದೆ; ಪುರುಷಾರ್ಥ ಸಾಧನೆಯಾಗುತ್ತದೆ.

---

## ೩ ಪ್ರಕೃತಿಯ ವಿವಿಧ ಆರ್ಥಿಕ ವಿಧಾನ

ಈ ಬಗೆಯ ಬೇರೆಬೇರೆ ಜೀವಿಗಳ ಸಂಪೂರ್ಣ ಅಹಿಂಸಾತ್ಮಕ ಸಹಕಾರ ಸದಾ ಕಾಲವೂ ಎಲ್ಲಾ ಜೀವರಾಶಿಗಳಲ್ಲೂ ಕಾಣಬಾರದು. ಬೇರೆ

ಬೇರೆ ಮೂಲಧಾತುಗಳಿಂದಲೂ ಅಚೇತನ ಪ್ರಕೃತಿಯಿಂದಲೂ ಯಥಾ ಕ್ರಮವಾಗಿ ಅನ್ನವನ್ನು ಗಳಿಸುವ ಬದಲು, ಇತರ ಪ್ರಾಣಿಗಳನ್ನು ಕೊಂದು ತಿಂದು ಕೆಲವು ಪ್ರಾಣಿಗಳು ಆ ದೀರ್ಘ ಕ್ರಮವನ್ನು ಮೊಟಕಿಸುತ್ತವೆ. ಇಲ್ಲೂ ಹಿಂಸೆ ತಲೆಹಾಕಿ ವಿನಾಶಕ್ಕೆ ಕಾರಣವಾಗುತ್ತದೆ.

ಪರೋಪಜೀವಿ ವರ್ಗ : ಕೆಲವು ಗಿಡಗಳು ಇತರ ಗಿಡಗಳ ಮೇಲೆಯೆ ಆಧಾರಗೊಂಡು ತಮ್ಮ ಬದುಕನ್ನು ಸಾಗಿಸುತ್ತವೆ. ಹೀಗೆ ಇವಕ್ಕೆ ಆಹಾರವನ್ನು ನೀಡಿದ ಪುಣ್ಯಕ್ಕೆ ಫಲವಾಗಿ ಆ ಪೋಷಕ-ಸಸ್ಯ ಬಾಡಿ ಸತ್ತುಹೋಗುವುದುಂಟು. ತನ್ನ ಬೇರುಗಳಿಂದ ತಾನು ಹೀರಿಕೊಂಡ ಆಹಾರ ತನ್ನ ಎಲೆ ಕೊಂಬೆಗಳಿಗೆ ಸಿಗುವ ನಡುವೆಯೇ ಈ ಅತಿಥಿ-ಸಸ್ಯ ಕಸಿದುಕೊಂಡುದರಿಂದ, ತನಗೇ ಸೊನ್ನೆ ಬೀಳುತ್ತದೆ. ಅದರಿಂದ ತನಗೆ ಪೋಷಣೆ ಸಿಗದೆ ತಾನು ಸಾಯುತ್ತದೆ ಮೂಲವೃಕ್ಷ. ಈ ಪರೋಪಜೀವನ ಹಿಂಸೆಗೆ ಕಾರಣ, ಸಾವಿಗೆ ದಾರಿ. ಪ್ರಾಣಿಗಳಲ್ಲಿಯೂ ಕುರಿ ಹುಲ್ಲುತಿಂದು ನೀರು ಕುಡಿದು ಅಹಿಂಸೆಯಿಂದ ಬಾಳುತ್ತದೆ. ಹುಲಿ ಕುರಿಯನ್ನು ಕೊಂದು ತಿಂದು, ಅದರ ನೆತ್ತರು ಕುಡಿದು ಹಿಂಸೆಯಿಂದ ಬದುಕುತ್ತ ಪ್ರಕೃತಿಯ ಕ್ರಮವನ್ನು ಮೊಟಕಿಸಿ, ನಿಯಮ ಮೀರಿ ನಡೆಯುತ್ತದೆ. ಹುಲಿಯ ಬದುಕಿಗೆ ಹಿಂಸೆಯೆ ಮುಖ್ಯಾಧಾರ.

ಪರಾಪಹಾರಿ ವರ್ಗ : ಪ್ರಕೃತಿಯಲ್ಲಿ ಒಂದು ಭಾಗ ಇನ್ನೊಂದು ಭಾಗಕ್ಕೆ ಏನೂ ಪ್ರತ್ಯುಪಕಾರ ಮಾಡದೆ ತನ್ನ ಲಾಭವನ್ನು ಮಾತ್ರ ತಾನು ನೋಡಿಕೊಂಡರೆ ಅದು ಪರಾಪಹಾರ; ಪರರದನ್ನು ಅಪಹರಿಸುವುದು. ಮಾವಿನ ತೋಟವನ್ನು ಒಬ್ಬರು ಬೆಳೆಸಿದರು. ನೆಲ ಅಗೆಯಲಿಲ್ಲ, ಗಿಡ ನೆಡಲಿಲ್ಲ, ನೀರು ಹಾಕಲಿಲ್ಲ; ಏನಾದರೂ ಕೆಲಸ ಮಾಡಿ ಆ ತೋಟ ಬೆಳೆಸುವುದರಲ್ಲಿ ಯಾವ ರೀತಿಯಲ್ಲೂ ನೆರವಾಗದ ಕೋತಿಯೊಂದು ಆ ತೋಟಕ್ಕೆ ನುಗ್ಗಿ ಗಿಡದಲ್ಲಿನ ಮಾವಿನ ಹಣ್ಣನ್ನು ಕಿತ್ತು ತಿನ್ನುತ್ತದೆ. ಬಿತ್ತಲಿಲ್ಲ, ಬೆಳಸಲಿಲ್ಲ; ಕಾಳನ್ನು ಮಾತ್ರ ತಿಂದುಹೋಗುತ್ತವೆ ಹಕ್ಕಿಗಳು. ಲವಲೇಶವೂ ದುಡಿತವಿಲ್ಲ, ಫಲ ಮಾತ್ರ ಬೇಕು ಎನ್ನುವ ಸ್ವಾರ್ಥ ಇದು. ಹುಲಿಯ ಜಾತಿಗಿಂತ ಈ ಜಾತಿ ಕಡಮೆ ಹಿಂಸಕವೆನಿಸಬಹುದು. ಆದರೆ ಇದೂ ವಿಧ್ವಂಸಕ ಜಾತಿಯೆ.

ಪ್ರಯತ್ನಶೀಲ ವರ್ಗ: ಕೆಲವು ಪ್ರಾಣಿಗಳು ಪರರಿಗೆ ಏನಾದರೂ ಪ್ರಯೋಜನ ಮಾಡಿಕೊಡುತ್ತಾ ಆ ಕೆಲಸದಲ್ಲಿಯೇ ತಮಗೆ ಬೇಕಾದು ದನ್ನು ಅವರಿಂದ ಪಡೆದುಕೊಳ್ಳುತ್ತವೆ. ಹೀಗೆ ಹೊಸದೊಂದನ್ನು ರಚನೆ ಮಾಡಿ ತಮ್ಮ ರಚನೆ ಪ್ರಯತ್ನಗಳ ಫಲವನ್ನು ತಾವು ಅನುಭವಿಸು ತ್ತವೆ. ದುಂಬಿಯ ದೃಷ್ಟಾಂತ ತೆಗೆದುಕೊಳ್ಳಿ. ಹೂವಿನಿಂದ ದುಂಬಿ ಮಕರಂದವನ್ನೂ ಪರಾಗವನ್ನೂ ತೆಗೆದುಕೊಳ್ಳುವಾಗ ಆ ಹೂವಿಗೆ ಪರಾಗ ಸ್ಪರ್ಶಲಾಭವನ್ನು ಮಾಡಿಕೊಡುತ್ತದೆ. ಅದರಿಂದ ಆ ಹೂ ಅರಳಿ ಬದುಕಲು ದಾರಿ ಮಾಡುತ್ತದೆ. ತಾನು ತಂದ ಮಕರಂದವನ್ನು ಜೇನುತುಪ್ಪವಾಗಿ ಮಾಡಿ, ಅದನ್ನು ತುಂಬಿಡಲು ತನ್ನ ಉಗುಳಿನಿಂದ ಮೇಣ ಮಾಡಿ, ಆ ಮೇಣದಿಂದ ಜೇನುಹುಟ್ಟನ್ನು ಕಟ್ಟುತ್ತದೆ. ಈ ಪ್ರಾಣಿ ಪರೋಪಜೀವಿಯಲ್ಲ. ತಾನು ಯಾರಿಂದ ಲಾಭ ಪಡೆಯಿತೋ ಅವರನ್ನು ಕೊಲ್ಲದು; ಅಷ್ಟೇ ಅಲ್ಲ, ಅವರಿಗೂ ಪ್ರಯೋಜನವಾಗುವಂತೆ ಮಾಡುತ್ತದೆ. ತನ್ನ ಪ್ರಯತ್ನಶೀಲತೆಯ ಫಲವನ್ನು ಅದು ಭೋಗಿಸು ತ್ತದೆ. ಪರಾಪಹಾರಿ ಜೀವಿಯೂ ಅಲ್ಲ. ತನಗೆ ಬೇಕಾದುದನ್ನು ಗಳಿಸಲು ತಾನು ಪ್ರಯತ್ನ ಮಾಡುತ್ತದೆ. ಈ ಗುಣ ಅದಕ್ಕೆ ಸ್ವಾಭಾವಿಕ. ಇವು ರಚನಾತ್ಮಕ, ಕ್ರಿಯಾಶೀಲ ಪ್ರಕೃತಿಗಳು.

ಸಂಘಜೀವಿ ವರ್ಗ: ದುಂಬಿ ಕೇವಲ ತನಗಾಗಿಯೇ ತನ್ನ ಲಾಭ ಕ್ಕಾಗಿಯೇ ಕಷ್ಟಪಡದು. ಇಡೀ ದುಂಬಿವಿಂಡಿಗಾಗಿ, ತಮ್ಮ ಗುಂಪಿನ ಪ್ರಯೋಜನಕ್ಕಾಗಿ ದುಡಿಯುತ್ತದೆ. ಇದು ಗಮನೀಯ. ಸ್ವಪ್ರಯೋಜ ನದ ಆಸೆ ಇಲ್ಲಿ ಸಂಘದ ಪ್ರಯೋಜನಾಪೇಕ್ಷೆಯಾಗಿ ಬೆಳೆಯಿತು. ಆ ಗಳಿಗೆಗೆ ಬೇಕಾದುದನ್ನು ಗಳಿಸುವ ತಾತ್ಕಾಲಿಕ ಬುದ್ಧಿಗೆ ಬದಲು ಮುಂದೆ ಬೇಕಾಗುವುದನ್ನು ಗಳಿಸುವ ಭವಿಷ್ಯದ್-ಯೋಜನಾ ಬುದ್ಧಿ ಬೆಳೆಯಿತು.

ಪರಹಿತಕಾರಿ ವರ್ಗ: ಅತ್ಯುತ್ತಮವಾದ ಆರ್ಥಿಕವಿಧಾನ ಪರಹಿತ ಕಾರಿ ವಿಧಾನ. ಅದೇ ಶ್ರೇಷ್ಠತಮ ಆರ್ಥಿಕ ವ್ಯವಸ್ಥೆ. ತಾಯಿ ಮಕ್ಕಳ ಸಂಬಂಧ ಇದಕ್ಕೆ ಉತ್ತಮ ಉದಾಹರಣೆ. ಕಾಡನ್ನೆಲ್ಲ ಅಲೆದು ಸುತ್ತಿ ತನ್ನ ಮರಿಗೆ ಆಹಾರ ತರುತ್ತದೆ ತಾಯಿಹಕ್ಕಿ. ಹಗೆಗಳ ಬಾಧೆಯಿಂದ ಮರಿಯನ್ನು ಕಾಪಾಡಲು ತನ್ನ ಪ್ರಾಣವನ್ನೇ ಅಸಡ್ಡೆ ಮಾಡುತ್ತದೆ.

ಅವಕ್ಕೆ ಇವೊತ್ತಿನ ಆತುರವೂ ಇಲ್ಲ, ನಾಳಿನ ಚಿಂತೆಯೂ ಇಲ್ಲ. ಈ ಕೆಲಸದಲ್ಲಿ ತಾತ್ಕಾಲಿಕ ವೃತ್ತಿಯೂ ಇಲ್ಲ, ಭವಿಷ್ಯದ ಯೋಜನೆಯೂ ಇಲ್ಲ. ಮುಂದಿನ ಪೀಳಿಗೆ, ಮುಂಬರುವ ಪೀಳಿಗೆಗಳಿಗಾಗಿ ಪ್ರತಿಫಲಾಪೇಕ್ಷೆಯಿಲ್ಲದೆಯೆ ದುಡಿಯುತ್ತದೆ. ತನ್ನ ತಾಯ್ತನದ ಪ್ರೀತಿಯಿಂದ ನಿಷ್ಕಾಮವಾಗಿ, ಸ್ವಾರ್ಥರಹಿತವಾಗಿ, ಸ್ವಪ್ರಯೋಜನ ಏನೂ ಇಲ್ಲದೆಯೆ, ತನ್ನ ಕರ್ಮ ನಡೆಸುತ್ತದೆ. ಶಾಶ್ವತ ಅಹಿಂಸಕ ಅರ್ಥವಿಧಾನಕ್ಕೆ ಈ ವಿಧಾನ, ಈ ರೀತಿ ಎಲ್ಲಕ್ಕಿಂತ ಹತ್ತಿರ.

ಈ ವಿಧಾನ ಈ ರೀತಿಗಳನ್ನು ಇಲ್ಲಿ ಶಾಶ್ವತತೆ, ಅಹಿಂಸೆಗಳ ವೃದ್ಧಿ ಕ್ರಮದಲ್ಲಿ ನಿರೂಪಿಸಿದೆ.

ಈ ಐದು ಸಾಮಾನ್ಯ ಲಕ್ಷಣಗಳು ಜೊತೆಗೂಡಿ, ಬೆರೆತು, ಬೇರೆ ಬೇರೆ ಸಂಕೀರ್ಣ ವಿಧಾನಗಳಾಗುತ್ತವೆ.

---

# ಪ್ರಕರಣ ೨

## ೪ ಮನುಷ್ಯ-ವ್ಯಕ್ತಿ

### ಮನುಷ್ಯ : ಇಚ್ಛಾಶಕ್ತಿ

ನಮ್ಮ ಜಿಜ್ಞಾಸೆಯಲ್ಲಿ ಪ್ರಕೃತಿಯು ಇತರ ಜೀವರಾಶಿಗಳ ಆರ್ಥಿಕ ವ್ಯವಸ್ಥೆಯನ್ನು ಕುರಿತು ಯೋಚಿಸಬೇಕಾಗಿಲ್ಲ. ಪ್ರಕೃತಿಯು ವ್ಯವಸ್ಥಾ ಕ್ರಮವನ್ನು ನಡೆಸಲೂಬಲ್ಲ ಮುರಿಯಲೂಬಲ್ಲ ಮಾನವ ಪ್ರಾಣಿಯೊಬ್ಬನ ಜೀವನವನ್ನು ಪರಿಶೀಲಿಸಿದರೆ ಸಾಕು. ಇವನಿಗೊಬ್ಬನಿಗೇ ಈ ಉಭಯ ಸಾಮರ್ಥ್ಯ. ಆದರೇನು? ಪ್ರಕೃತಿಯು ಅನಂತ ಶಕ್ತಿಗೆ ಮನುಷ್ಯ ಮಾಡ ಬಹುದಾದ ಹಾನಿ, ಅವ್ಯವಸ್ಥೆ ಗಣನೀಯವೇ ಅಲ್ಲ. ಕೇವಲ ಕ್ಷಣಿಕ. ಕಡೆಗೆ ಪ್ರಕೃತಿಯೇ ಗೆದ್ದೀತು, ಅದು ತನ್ನ ನಿಯಮವನ್ನೇ ನಡಸೀತು. ಆದರೆ ಮನುಷ್ಯನ ಅಧಿಕಪ್ರಸಂಗದಿಂದ ಪ್ರಕೃತಿಯ ಗಂಭೀರ ಗಮನದಲ್ಲಿ ಆಗೊಂದು ಈಗೊಂದು ಕುಲುಕಾಟವಾದೀತು. ಹೊನ್ನಿನ ಮಹಾ ಯುದ್ಧದಂಥ ಅಪಶ್ರುತಿ ಒಮ್ಮೊಮ್ಮೆ ಹೊರಟೀತು.

ಪ್ರಕೃತಿಯ ನಿಯಮಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಅರ್ಥ ಮಾಡಿಕೊಂಡರೆ ಪ್ರಕೃತಿಯ ವ್ಯವಸ್ಥೆಯೊಂದಿಗೆ ಇನ್ನೂ ತೃಪ್ತಿಕರವಾಗಿ ಸಹಕರಿಸಲು ಸಾಧ್ಯವಾದೀತು. ಅದರಿಂದ ಈ ಅನವಶ್ಯಕ ಹಿಂಸೆ ತಪ್ಪಿ ಶಾಶ್ವತ ಆರ್ಥಿಕವ್ಯವಸ್ಥೆಯನ್ನು ಸಾಧಿಸುವ ಪ್ರಯತ್ನವನ್ನಾದರೂ ಮಾಡಬಹುದು.

ಉಳಿದ ಪ್ರಾಣಿಗಳೆಲ್ಲ ಸ್ವಲ್ಪ ಹೆಚ್ಚು ಕಡಿಮೆ ಪ್ರಕೃತಿ ನಿಯಮ ಗಳನ್ನು ಅನುಸರಿಸಿಯೇ ನಡೆಯುತ್ತವೆ. ಚಾಚೂ ತಪ್ಪವು. ಅವಕ್ಕೆ ಸ್ವಪ್ರಯತ್ನದ ಅವಕಾಶ ಕಡಮೆ. ಅವುಗಳ ಸ್ವಭಾವವೇ ಅವಕ್ಕೆ ಪ್ರಕೃತಿಯ ಮಾರ್ಗವನ್ನು ತಿಳಿಸುತ್ತದೆ. ಸ್ವಭಾವ ಆಡಿಸಿದಂತೆ ಅವು ಆಡುತ್ತವೆ. ರೈಲಿನ ಓಟದಂತೆ ಅವುಗಳ ಬಾಳು. ರೈಲು ಕಂಬಿ ಎತ್ತ ಸಾಗಿದರೆ ರೈಲು ಅತ್ತ ಓಡಬೇಕು. ಈ ಪ್ರಾಣಿಗಳು ತಮ್ಮ ಸ್ವಭಾವ

ಸೆಳೆದತ್ತ ತಿರುಗಲೇ ಬೇಕು. ನಡುವೆ ಏನೂ ಅಡ್ಡ ಬಾರದಿದ್ದರೆ ಹಗಲು ಇರುಳು ಓಡಿ ಕಾಡಿನಲ್ಲಿ ಬಯಲಿನಲ್ಲಿ, ಗುಡ್ಡದ ನಡುವೆ ಕೊಳ್ಳದಲ್ಲಿ, ಸಾಗಿ ರೈಲು ತನ್ನ ಗುರಿಯನ್ನು ಮುಟ್ಟುತ್ತದೆ.

ಮೊಟ್ಟೆಯೊಡೆದು ಹೊರಗೆ ಬಂದಕೂಡಲೆ ಕೋಳಿ ಮರಿ ಆಹಾರಕ್ಕಾಗಿ ಓಡುತ್ತದೆ. ತನ್ನ ಪೋಷಣೆಗೆ ಬೇಕಾದ ಕಾಳನ್ನು ಹುಡುಕುತ್ತದೆ. ಹೊಟ್ಟೆ ತುಂಬಿದ ಮೇಲೆ ತಾಯಿಹಕ್ಕಿಯ ರೆಕ್ಕೆಗಳ ನಡುವೆ ಅಡಗಿಕೊಂಡು ತನಗೆ ಬೇಕಾದ ಶಾಖವನ್ನು ಪಡೆಯುತ್ತದೆ. ಅಪಾಯ ಬಂದರೆ ಅದಕ್ಕೆ ಸಹಜವಾಗಿಯೆ ತಿಳಿಯುತ್ತದೆ. ಕೂಡಲೆ ಯಾವುದಾದರೂ ಆಸರೆಗೆ ಓಡುತ್ತದೆ. ತಿಂಡಿ ರುಚಿಯಾಗಿದೆ ಎಂದು ಅದು ಎಂದೂ ಮಿತಿಮೀರಿ ತಿನ್ನದು. ಇಂದ್ರಿಯಗಳಿಗೆ ತೃಪ್ತಿಬೇಕು ಎಂದು ಸುಖವನ್ನು ಅರಸಿಕೊಂಡು ಹೋಗದು. ಇಂಥ ಜೀವರಾಶಿಯೆಲ್ಲ ಸ್ವಭಾವಾಧೀನ. ಅದಕ್ಕೆ ಸಂಕಲ್ಪಶಕ್ತಿ, ಇಚ್ಛಾಶಕ್ತಿ ಇಲ್ಲ.

ಪ್ರಕೃತಿಗೆ ಅನುಸಾರ ಬಾಳುವ ಪ್ರಾಣಿಗಳಿಗೆ ಸಾಧಾರಣವಾಗಿ ರೋಗ ಬರುವುದೇ ಇಲ್ಲ. ಯಾವಾಗಲಾದರೂ ಅಜೀರ್ಣ ಸಂಬಂಧ ವ್ಯಾಧಿ ಬಂದರೂ ಯಾವುದೋ ಸೊಪ್ಪೋ ಬೇರೋ ತಿಂದು, ವಾಂತಿ ಮಾಡಿಕೊಂಡೋ ಭೇದಿ ಮಾಡಿಕೊಂಡೋ, ಅವು ಗುಣ ಮಾಡಿಕೊಳ್ಳುತ್ತವೆ.

ಮನುಷ್ಯನಿಗೆ ಬಂದಿರುವ ಮುಖ್ಯವಾದ ತೊಂದರೆ, ಅವರಿಗಿರುವ ಸಂಕಲ್ಪಶಕ್ತಿ, ಇಚ್ಛಾಬಲ ; ಅದರ ಪ್ರಯೋಗಕ್ಕೆ ಅವನಿಗಿರುವ ವಿಶಾಲ ಲೀಲಾರಂಗ. ಈ ಇಚ್ಛಾಬಲದ ಪ್ರಯೋಗವನ್ನೇ ಪುರುಷಪ್ರಯತ್ನವೆನ್ನುತ್ತಾರೆ. ಈ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿದರೆ ಪ್ರಕೃತಿಯ ಬೇರೆ ಬೇರೆ ಭಾಗಗಳನ್ನು, ಅಂಗಗಳನ್ನು ಮೇಳಯಿಸಿ ಒಂದಕ್ಕೊಂದು ನೆರವಾಗುವಂತೆ ಅವನು ಮಾಡಬಲ್ಲಷ್ಟು ಕೆಲಸವನ್ನು ಮತ್ತಾವ ಜೀವಿಯೂ ಮಾಡಲಾರದು. ಆ ಶಕ್ತಿಯನ್ನು ತಪ್ಪಾಗಿ ಉಪಯೋಗಿಸಿದರೆ ಪ್ರಕೃತಿಯ ವ್ಯವಸ್ಥೆಯನ್ನು ಧ್ವಂಸಮಾಡಿ ಕಡೆಯಲ್ಲಿ ತಾನೂ ನಾಶವಾಗುತ್ತಾನೆ.

ಸ್ವಭಾವವನ್ನು ರೈಲುಕಂಬಿಗಳಿಗೆ ಹೋಲಿಸಿತು. ರೈಲುಗಾಡಿಯನ್ನು ದಾರಿ ಬಿಡದಂತೆ ಬಿಗಿಹಿಡಿದು, ತಾನು ಮಾಡಿಕೊಟ್ಟ ದಾರಿ

ಯಲ್ಲೇ ಹೋಗುವಂತೆ ಮಾಡುವುದು ಕಂಬಿಗಳ ಗುಣ. ಇಚ್ಛಾಶಕ್ತಿ ಹಾಗಲ್ಲ. ಚಲನವಲನ ಸ್ವಾತಂತ್ರ್ಯವನ್ನು ಕೊಡುತ್ತದೆ. ಆದರೆ ಎಲ್ಲಾ ಚಲನೆಯೂ ಸ್ವೇಚ್ಛಾಪೂರ್ಣವಲ್ಲ. ಬೈಸಿಕಲ್ ಸವಾರಿ ತೆಗೆದುಕೊಳ್ಳಿ. ಬೈಸಿಕಲ್ ಸವಾರ ಮನಸ್ಸು ಬಂದಲ್ಲಿ ಹೋಗಬಹುದು ಎನ್ನುತ್ತೇವೆ. ಅದರ ಪಿಡಿ ಅವನ ಕೈಯೊಳಗೇ ಇರುತ್ತದೆ. ಆದರೂ ಆ ಯಂತ್ರದ ಮಿತಿ, ಅವನ ವಿವೇಕದ ಇತಿ-ಗಳಿಗೆ ಅಧೀನ ಅವನ ಚಲನಸ್ವಾತಂತ್ರ್ಯ. ಬೈಸಿಕಲ್ ಹತ್ತಿ ಗಾಳಿಯಲ್ಲಿ ಹಾರಲು ಬಂದೀತೆ? ನೆಲದ ಮೇಲೂ ಎಲ್ಲಾ ಕಡೆಗೂ ಹೋಗಲಾರ. ಹತ್ತು ಜನ ತುಳಿದ ಹಾದಿಯಲ್ಲೇ ಹೋಗಬೇಕು. ಉಳುಮೆಯಾದ ಹೊಲಗಳಲ್ಲಿ ಅಡ್ಡತುಳಿದರೆ ಬೈಸಿಕಲ್ಲಿನ ಮುಂದಿನ ಗಾಲಿ ಅವನನ್ನು ಮೇಲಕ್ಕೆ ಚಿಮ್ಮಿ ಮುಂದಕ್ಕೆ ಜಿಗಿಸಿ, ಮಣ್ಣಿನಲ್ಲೋ ಕೆಸರಿನಲ್ಲೋ ಕೆಡವೀತು. ಮುಳ್ಳಿನ ಮೇಲೆ ಹೋದರೆ ಟೈರು ತೂತುಬೀಳುತ್ತದೆ. ತತ್ವದಲ್ಲೇನೋ ಸವಾರನಿಗೆ ಸಂಪೂರ್ಣ ಸ್ವಾತಂತ್ರ್ಯವಿದ್ದರೂ ವ್ಯವಹಾರದಲ್ಲಿ ಅದಕ್ಕೆ ಪರಿಮಿತಿ ಇದ್ದೇ ಇದೆ. ವಿವೇಕಿಯಾದ ಸವಾರ ಆ ಮಿತಿಗಳನ್ನು ಅನುಸರಿಸುತ್ತಾನೆ. ಈ ಮಿತಿಗಳನ್ನು ತಾನೇ ಅರಿತುಕೊಂಡು ಅನುಸರಿಸಿ ನಡೆಯಲು ಜ್ಞಾನ-ಸಂಯಮ ಅಗತ್ಯ. ಇಲ್ಲದಿದ್ದರೆ ಅವನಿಗೆ ನೆರವಾಗಲೆಂದು ತಂದ ಯಂತ್ರ ಅವನಿಗೆ ಅಪಾಯಕರವಾದೀತು. ತಿಳಿದ ಹಾದಿಯಲ್ಲಿ ಹಗಲುಹೊತ್ತಿನಲ್ಲಿ ಬೈಸಿಕಲ್ ತುಳಿವವನು ಕಾಲುನಡಿಗೆಗಿಂತ ಎಷ್ಟೋ ಹೆಚ್ಚು ವೇಗವನ್ನು ಸಾಧಿಸಬಲ್ಲ.

ಇದೇ ರೀತಿ, ಮನುಷ್ಯ ತನ್ನ 'ಇಚ್ಛಾಬಲ'ವನ್ನು ಯೋಗ್ಯ ಕ್ಷೇತ್ರದಲ್ಲಿ ಉಪಯೋಗಿಸಿದರೆ, ತನ್ನ ಭಾವನೆ ಬಯಕೆಗಳ ಹಿಂದೆ, ಇಂದ್ರಿಯಗಳ ಹಿಂದೆ ಓಡಲು ಬಿಡದಂತೆ ಆತ್ಮನಿಗ್ರಹ ಮಾಡಲು ಕಲಿತರೆ, ಆಗ ಸ್ವಭಾವಾಧೀನವಾದ ಪ್ರಾಣಿಗಳಿಗಿಂತ ಹೆಚ್ಚಿನದನ್ನು ಏನನ್ನಾದರೂ ಸಾಧಿಸಬಲ್ಲ. ತನ್ನೊಳಗಣ ಸ್ವಾಭಾವಿಕ ಬುದ್ಧಿಯ ಬೆಳಕನ್ನು, ಅದಕ್ಕೆ ಜೊತೆಯಾಗಿ ಒಳಗಣ ದಿವ್ಯಜ್ಯೋತಿಯನ್ನು, ಹಿಂಬಾಲಿಸಿ ಸಫಲತೆಯನ್ನೋ ನಾಶವನ್ನೋ ಸಾಧಿಸಬಲ್ಲ; ಅಂತೂ ತನ್ನ ಅದೃಷ್ಟಕ್ಕೆ ತಾನೇ ಕಾರಣನಾಗಬಲ್ಲ. ಹಾಗಲ್ಲದೆ ಕತ್ತಲೆಯಲ್ಲಿ ಹಳ್ಳತಿಟ್ಟಿನಲ್ಲಿ ಬೈಸಿಕಲ್ ತುಳಿವ ಸಾಹಸಮಾಡುವ ಸವಾರನಂತೆ ಆದರೆ, ದುಃಖದ ಪಾಲಾಗಿ ತನ್ನ

ಅಂತರಾತ್ಮಕ್ಕೂ ತನ್ನ ಪ್ರಕೃತಿಗೂ ವಿರುದ್ಧ ನಡೆದುದರ ಫಲವನ್ನು ಉಣ್ಣ ಬೇಕಾದೀತು. ತನಗೆ ಮನ್ನಣೆ ಮಾಡಿದವರಲ್ಲಿ ಪ್ರಕೃತಿಗೆ ವಿಶ್ವಾಸ. ಅವರಿಗೆ ಅಧೀನವಾಗಿ ನಡೆಯುತ್ತದೆ. ತಮ್ಮ ಇಚ್ಛಾಸ್ವಾತಂತ್ರ್ಯದಿಂದ ಪ್ರಕೃತಿಯ ಅಗತ್ಯಗಳನ್ನು ಅಸಡ್ಡೆ ಮಾಡಿದವರಿಗೆ, ನ್ಯಾಯಕ್ಕಿಂತ ನಿಷ್ಠುರವಾಗಿ ಅವರ ಅಪಚಾರಕ್ಕೆ ಪ್ರತಿಯಾಗಿ, ಹಿಂಸೆ ಸಾವುಗಳ ಶಿಕ್ಷೆಯನ್ನು ತಪ್ಪದೆ ಕೊಡುತ್ತದೆ. ಮುಂದಿನ ಅಧ್ಯಾಯದಲ್ಲಿ ಇದಕ್ಕೆ ದೃಷ್ಟಾಂತಗಳನ್ನು ಪರಿಶೀಲಿಸೋಣ.

---

## ೫ ಇಚ್ಛಾಬಲದ ಉಪಯೋಗ-ದುರುಪಯೋಗ

ಮನುಷ್ಯನ ಬಾಳು ಈಗ ಬಹಳ ತೊಡಕಿನ ಬಲೆಯಾಗಿ ಹೋಗಿದೆ. ಇಚ್ಛಾಬಲದ ಮೂಲಕ ಮನುಷ್ಯ ಮಾಡುವ ಕಾರ್ಯಕಲಾಪಗಳನ್ನೆಲ್ಲಾ ವಿಸ್ತಾರವಾಗಿ ಪರಿಶೀಲಿಸಲು ಈ ಪುಸ್ತಕದಲ್ಲಿ ಸಾಧ್ಯವಿಲ್ಲ. ಮನುಷ್ಯನ ಪ್ರಾಥಮಿಕ ಆವಶ್ಯಕತೆಗಳಾದ ಹಸಿವು ನೀರಡಿಕೆ ಮುಂತಾದವುಗಳಿಂದ ಹುಟ್ಟುವ ಕೆಲವು ಮುಖ್ಯ ಕಾರ್ಯಕಲಾಪಗಳನ್ನು ಮಾತ್ರ ಸ್ಥೂಲವಾಗಿ ಪರಿಶೀಲಿಸಲು ಸಾಧ್ಯ. ಇನ್ನುಳಿದ ಪ್ರಸಂಗಗಳಲ್ಲಿ ಇಚ್ಛಾಶಕ್ತಿಯನ್ನು ಹೇಗೆ ಉಪಯೋಗಿಸಬೇಕೋ, ದುರುಪಯೋಗ ಮಾಡಿದರೆ ಏನು ಫಲವಾದೀತೋ ಓದುಗರು ತಾವೇ ನಿರ್ಧರಿಸಿಕೊಳ್ಳಬೇಕು.

**ಹಸಿವು :** ಎಲ್ಲಕ್ಕಿಂತ ಪ್ರಾಥಮಿಕವಾದ ತೀವ್ರ ಅನಿವಾರ್ಯ ಆವಶ್ಯಕತೆ ಹಸಿವು. ಪ್ರಾಣಿಗಳ ದೇಹ ಒಂದು ಯಂತ್ರದ ಹಾಗೆ ಇದೆ. ಆ ಯಂತ್ರ ನಡೆಯಲು ಅದಕ್ಕೆ ಉರವಲನ್ನು ಹಾಕಬೇಕು. ಆಗಾಗ ಯಂತ್ರ ಕೆಟ್ಟಾಗ ಅದನ್ನು ಸರಿಪಡಿಸಿ, ಸವೆದು ಹಳತಾದಾಗ ಹೊಸದನ್ನು ಜೋಡಿಸುವುದಿಲ್ಲವೆ? ಯಂತ್ರದ ಬೇರೆ ಬೇರೆ ಭಾಗಗಳು ಒಂದಕ್ಕೊಂದು ಉಜ್ಜಿಕೊಂಡು ಸವೆಯದಂತೆ ಕೆಡದಂತೆ, ಯಂತ್ರಕ್ಕೆ ಪದೇ ಪದೇ ಎಣ್ಣೆ ಕುಡಿಸಬೇಕು. ದೇಹಯಂತ್ರಕ್ಕೂ ಇವೆಲ್ಲ ಕ್ರಿಯೆಯೂ ಆಗಬೇಕು. ಈ ಕ್ರಿಯೆ ಈಗ ಆಗಬೇಕು ಎಂದು ದೇಹ ನಮಗೆ ತಿಳಿಸಲು ಹಸಿವು

ಸಾಧನ. ಹಸಿವಾಗಿದೆ ಎಂದರೆ ದೇಹಯಂತ್ರಕ್ಕೆ ಉರುವಲು ಬೇಕು ಎಂದು. ಆಗ ದೇಹಕ್ಕೆ ಯಾವ ಪದಾರ್ಥವನ್ನು ಕೊಟ್ಟರೆ ದೇಹ ಆರೋಗ್ಯವಾಗಿದ್ದು ತನ್ನ ಕೆಲಸವನ್ನು ಸರಾಗವಾಗಿ ಮಾಡಬಲ್ಲದೋ ತಿಳಿಸುವುದು ವಾಸನೆ - ರುಚಿ, ಮೂಗು - ನಾಲಗೆ.

ಸಾಧಾರಣವಾಗಿ ಪ್ರಕೃತಿಯ ಕ್ರಮವನ್ನು ಅನುಸರಿಸಿ ಬದುಕುವ ಪ್ರಾಣಿಗಳೆಲ್ಲ ತಮ್ಮ ಸ್ವಭಾವಾನುಸಾರ ನಡೆಯುತ್ತವೆ. ಮನುಷ್ಯನೂ ಹಾಗೇ ಮಾಡಬಹುದು. ಆದರೆ ದೌರ್ಭಾಗ್ಯದಿಂದ ಮನುಷ್ಯ ಅನೇಕ ವೇಳೆ ಹಸಿವನ್ನು ಹಿಂಗಿಸುವುದನ್ನು ಬಿಟ್ಟು ರುಚಿರುಚಿಯಾದ ಮಸಾಲೆ ಹಾಕಿದ ತಿಂಡಿಗೆ ಆಸೆಪಟ್ಟು, ಆ ಚಪಲ ತೀರಿಸಿಕೊಳ್ಳಲು ತನ್ನ ಇಚ್ಛಾಶಕ್ತಿಯನ್ನು ಉಪಯೋಗಿಸುತ್ತಾನೆ. ರುಚಿಯ ಚಪಲ ತೀರಿಸಿಕೊಳ್ಳಲು ಅಳತೆಮೀರಿ ತಿಂಡಿ ತಿನ್ನುತ್ತಾನೆ. ತಿಂಡಿಪ್ರೀತನಾಗುತ್ತಾನೆ. ನಾಲಗೆಯ ಚಪಲಕ್ಕೆ ಹೀಗೆ ಇಚ್ಛಾಶಕ್ತಿಯನ್ನು ದುರುಪಯೋಗ ಮಾಡುವುದೇ ಈಗಿನ ಕಾಲದಲ್ಲಿ ಮನುಷ್ಯ ಪಡುತ್ತಿರುವ ನಾನಾ ಬಾಧೆಗಳಿಗೆ ಕಾರಣ. ಅಳತೆಗೆಟ್ಟು ತಿಂದರೆ ಜೀರ್ಣಾಂಗಗಳಿಗೆ ಕಷ್ಟವಾಗಿ ಹೊಟ್ಟೆ ಕೆಡುತ್ತದೆ. ಅದರಿಂದ ಒಳ್ಳೆಯ ಪುಷ್ಟಿಕರವಾದ ಆಹಾರವೂ ಕೂಡ ದೇಹಕ್ಕೆ ವಿಷವಾಗಿ ಪರಿಣಮಿಸಿ, ಹಲವು ರೋಗಗಳಿಗೆ ಕಾರಣವಾಗಿ ವಿಶೇಷ ಬಾಧೆ ಕೊಡುತ್ತದೆ. ಕೆಲವು ವೇಳೆ ಅಕಾಲಮರಣಕ್ಕೂ ಕಾರಣವಾಗುತ್ತದೆ.

ನೀರಡಿಕೆ: ಅನ್ನ ಅರಗಿದರೆ ದ್ರವವಾಗುತ್ತದೆ. ಮೈಯೊಳಗಿನ ರಕ್ತ ಆ ದ್ರವದೊಳಗಿನ ಪುಷ್ಟಿಕರ ಪದಾರ್ಥವನ್ನು ಎಲ್ಲೆಲ್ಲಿಗೆ ಬೇಕೋ ಅಲ್ಲಲ್ಲಿಗೆ ಸಾಗಿಸಿಕೊಂಡು ಹೋಗುತ್ತದೆ. ರಕ್ತ ದೇಹದ ನರಗಳಲ್ಲಿರುವ ನಿಸ್ಸಾರ ಪದಾರ್ಥವನ್ನೆಲ್ಲ ಶ್ವಾಸಕೋಶಗಳಿಗೆ ಹೊತ್ತು ತರುತ್ತದೆ. ನಾವು ಉಸಿರಾಡುವಾಗ ಒಳಕ್ಕೆ ತೆಗೆದುಕೊಳ್ಳುವ ಗಾಳಿಯಲ್ಲಿರುವ ಆಮ್ಲಜನಕ, ಅಲ್ಲಿ ಆ ನಿಸ್ಸಾರ ಪದಾರ್ಥವನ್ನೆಲ್ಲ ಸುಟ್ಟು ಕಳೆದುಹಾಕುತ್ತದೆ. ಈ ಎಲ್ಲ ಕೆಲಸ ನಡೆವಾಗ ರಕ್ತದಲ್ಲಿರುವ ನೀರು ಬಹಳಮಟ್ಟಿಗೆ ನಮ್ಮ ಉಸಿರಿನ ತೇವವಾಗಿ, ಮೈಯ ಬೆವರಾಗಿ ಹೊರಗೆ ಹೋಗುತ್ತದೆ. ಹೀಗೆ ಬೆವರು ನಮ್ಮ ದೇಹದ ಶಾಖವನ್ನು ಸಮಸ್ಥಿತಿಯಲ್ಲಿಡುತ್ತದೆ. ಒಳಗೆ ಹೀಗೆ ರಕ್ತ ಇಂಗಿದರೆ ನಮಗೆ ನೀರಡಿಕೆಯಾಗುತ್ತದೆ. ಅದೇ ಸೂಚನೆ. ಆಗ ಧಾರಾಳ

ವಾಗಿ ನಿರ್ಮಲೋದಕವನ್ನು ಕುಡಿಯಬೇಕು. ಅದು ಆಹಾರವನ್ನು ದೇಹದ ಎಲ್ಲ ಮೂಲೆಗಳಿಗೂ ಸಾಗಿಸಲು ಸಾಧನ; ರಕ್ತದ ಕೊಳೆಯನ್ನೆಲ್ಲ ಕೊಚ್ಚಿಕೊಂಡು ಹೋಗಲು ಸಾಧನ. ಮೂತ್ರದ ಮೂಲಕ ಆ ಕೆಲಸ ಆಗುತ್ತದೆ. ಚರ್ಮದ ಸಹಾಯದಿಂದ ದೇಹವನ್ನು ಸಮಸ್ಥಿತಿಯಲ್ಲಿಡುತ್ತದೆ.

ಆದರೆ ಮನುಷ್ಯ ತನ್ನ ಇಚ್ಛಾಶಕ್ತಿಯ ದುರುಪಯೋಗ ಮಾಡುತ್ತಾನೆ. ನೀರು ಕುಡಿಯುವ ಈ ಸ್ವಾಭಾವಿಕ ಕ್ರಿಯೆ ಮಾಡದೆ ನೀರಡಿಸಿದಾಗ ಇತರ ಮಾದಕ ಪಾನೀಯಗಳನ್ನು ಕುಡಿಯುತ್ತಾನೆ. ಅವು ದೇಹದಲ್ಲಿ ಹಲವು ವಿಷಗಳನ್ನು ಬೆರೆಸಿ, ನರಗಳನ್ನು ನಿಶ್ಚೇತನಗೊಳಿಸಿ, ಮನಶ್ಶಕ್ತಿಯನ್ನು ಕುಂದಿಸಿ ಆರೋಗ್ಯವನ್ನು ಕೆಡಿಸುತ್ತವೆ. ಇದರಿಂದ ಆ ವ್ಯಕ್ತಿಗೆ ಅಗೌರವ, ಕುಟುಂಬಕ್ಕೆ ದುರ್ಗತಿ. ಆಧುನಿಕ ಸಮಾಜದಲ್ಲಿ ಕಾಣಬರುವ ಅನೇಕ ದುರ್ಗುಣ-ದೌರ್ಬಲ್ಯಗಳಿಗೆ ಕುಡಿತ, ಮಾದಕ ಪದಾರ್ಥ ಸೇವನೆ ಕಾರಣ.

ವಾಸನೆ: ಆಹಾರ ಪರೀಕ್ಷೆಗೆ ಮೂಗು ಮುಖ್ಯ ಸಾಧನ. ನಶ್ಯ, ಬೀಡಿ ಸಿಗರೇಟುಗಳ ಮೂಲಕ ಹೊಗೆಸೊಪ್ಪನ್ನು ಸೇವಿಸಿದರೆ, ಆ ಗಳಿಗೆಗೆ ಏನೋ ಉತ್ತೇಜನ ಕಂಡರೂ ಮನುಷ್ಯನ ಮೂಸುವ ಶಕ್ತಿಗೆ ಅದು ಬಾಧಕ. ಹೃದಯ, ಮೆದುಳುಗಳಿಗೂ ಇದರಿಂದ ಅಪಾಯವುಂಟು.

ಮೈಥುನ: ಪ್ರಾಣಿವರ್ಗದ ಚಟುವಟಿಕೆಗಳ ಬಹಳ ಬಲವಾದ ಪ್ರೇರಕಶಕ್ತಿ ಮೈಥುನ; ಪ್ರಾಣಪ್ರವಾಹವನ್ನು ಅಖಂಡವಾಗಿ ಮುಂದೆ ಸಾಗಿಸುವಂತೆ ಸಂತಾನವನ್ನು ಪಡೆಯಲು, ಪ್ರಾಣಿಗಳಿಗೆ ಮಿಥುನಗೂಡಲು ಇರುವ ಪ್ರಬಲ ಆಕಾಂಕ್ಷೆ. ಅನೇಕ ಪ್ರಾಣಿಗಳು ಪಕ್ಷಿಗಳು ಈ ಸ್ವಭಾವವನ್ನು ಅನುಸರಿಸಿ ಮಿಥುನಗೂಡಿ ಜೊತೆಕಟ್ಟಿ ಹಾಯಾಗಿ ಬದುಕುತ್ತವೆ. ತಮ್ಮ ಮರಿಗಳನ್ನು ಜೊತೆಯಾಗಿ ಕಾಪಾಡುತ್ತವೆ. ಆದರೆ ಪ್ರಕೃತಿಯಲ್ಲಿ ಗಂಡು ಹೆಣ್ಣು ಜೊತೆಗೂಡುವುದು ಗೊತ್ತಾದ ಕಾಲಗಳಲ್ಲಿ ಮಾತ್ರವೇ. ಅದೂ ಸಂತಾನೋತ್ಪತ್ತಿಗಾಗಿಯೇ.

ಮನುಷ್ಯನಿಗೆ ಇಚ್ಛಾಬಲವಿದೆಯಲ್ಲ. ಅದರಿಂದ ಸಂತಾನೋತ್ಪತ್ತಿಯ ಆಸೆ ಉದ್ದೇಶ್ಯ ಇಲ್ಲದೆಯೆ, ಬರೀ ಇಂದ್ರಿಯಚಾಪಲ್ಯಕ್ಕಾಗಿ

ಮನುಷ್ಯ ಮಿಥುನಗೂಡುತ್ತಾನೆ. ಪ್ರಾಣಿಗಳಿಗಿಂತ ಕೀಳಾಗಿದಾನೆ. ಮಕ್ಕಳಿಗಾಗಿ ಹೆಣ್ಣುಗಂಡು ಬೆರೆಯುತ್ತಿಲ್ಲ. ಹೆಣ್ಣುಗಂಡು ಬೆರೆತಾಗ ಮಕ್ಕಳು ಆಗುತ್ತವೆ. ಹೀಗಾಗಿ ಎಷ್ಟೋ ಸಲ ಆ ಮಕ್ಕಳು ಇವರಿಗೆ ಬೇಡವಾದ ಆಕಸ್ಮಿಕ ಘಟನೆ. ತನ್ನ ನಿಯಮವನ್ನು ಮೀರಿ ನಡೆದುದಕ್ಕೆ ಪ್ರಕೃತಿ ಮನುಷ್ಯನಿಗೆ ಶಿಕ್ಷೆ ಕೊಡಲು ಮೇಹ ಮುಂತಾದ ರೋಗಗಳನ್ನು ತಂದೊಡ್ಡುತ್ತದೆ. ತಪ್ಪು ಮಾಡಿದವರನ್ನು ಶಿಕ್ಷಿಸಿದರೆ ತೃಪ್ತಿಯಿಲ್ಲ ಪ್ರಕೃತಿಗೆ. ಮಿತಿ ತಪ್ಪಿ ನಡೆದವರ ಮಕ್ಕಳನ್ನೂ ಶಿಕ್ಷೆಗೆ ಗುರಿ ಮಾಡುತ್ತದೆ.

ಭಾವನಾಶಕ್ತಿ : ಕಣ್ಣಿಗೆ ಕಾಣದ ಲೋಕಗಳಲ್ಲಿ ವಿಹರಿಸಿ, ಭಾವನಾ ಬಲದಿಂದ ಕಲೆಯನ್ನು ಸೃಷ್ಟಿಮಾಡಬಲ್ಲ ಶಕ್ತಿ ಮತ್ತಾವ ಪ್ರಾಣಿಗೂ ಇಲ್ಲ, ಮನುಷ್ಯನಿಗೊಬ್ಬನಿಗೇ. ಈ ಭಾವನಾಶಕ್ತಿಯನ್ನು ಸಹಜ ರೀತಿಯಲ್ಲಿ ಉಪಯೋಗಿಸದೆ ಮನುಷ್ಯ ನೇರವಾಗಿ ತನಗೆ ಉತ್ತೇಜಕ ಮಾದಕ ಆದ ಪದಾರ್ಥಗಳನ್ನು ಬಳಸುತ್ತಾನೆ. ಅದರಿಂದ ಒಂದು ಗಳಿಗೆ ಒಂದು ಬಗೆಯ ಕೃತ್ರಿಮ ಉಲ್ಲಾಸವಾದೀತು. ಹೆಂಡದ ಹಾಗೇ ಈ ದುರಭ್ಯಾಸ ಮನುಷ್ಯನನ್ನು ನಿರ್ವೀರ್ಯ, ನಿಷ್ಪ್ರಯೋಜಕ ಆಗಿ ಮಾಡಿ ಅವನನ್ನೂ ಅವನ ಮನೆಯನ್ನೂ ಹಾಳುಮಾಡುತ್ತದೆ.

ಸೃಷ್ಟಿಶಕ್ತಿ : ತನ್ನ .ಉಪಯೋಗಕ್ಕಾಗಿ ಯಾಂತ್ರಿಕ ಬಲವನ್ನು ಮನುಷ್ಯ ಉಪಯೋಗಿಸುವಾಗ ಸೃಷ್ಟಿಕರ್ತನಾದ ಭಗವಂತನ ಛಾಯೆ ಅವನ ಮೇಲೆ ಬಿದ್ದಿರುತ್ತದೆ. ಆ ಸೃಷ್ಟಿಶಕ್ತಿ ವಿನಾಶಕಾರಣವಾಗದೆ ಆನಂದದಾಯಕವಾಗಲು ಅವನು ಪ್ರಕೃತಿಯ ರೀತಿಯನ್ನು ಅನುಸರಿಸಿ ಅದನ್ನು ಉಪಯೋಗಿಸಬೇಕು. ನಮ್ಮ ದಾರಿಯನ್ನೇ ನಾವು ತುಳಿದರೆ ಪ್ರಕೃತಿಯ ಸಹಕಾರ ನಮಗೆ ದೊರೆಯುವು. ಹಾಗೇನಾದರೂ ಮಾಡಿದರೆ ಅದರ ಫಲ ಸರ್ವನಾಶವೇ.

ಸೂರ್ಯನ ಶಾಖದಿಂದ ಸಮುದ್ರದ ನೀರು ಆವಿಯಾಗುತ್ತದೆ. ಉಪ್ಪನ್ನು ತಳದಲ್ಲಿಯೇ ಬಿಟ್ಟು ತಿಳಿನೀರಿನ ಆವಿ ಮೇಲೆ ಮುಗಿಲಿನ ಕಡೆ ಏರುತ್ತದೆ. ಅದರಲ್ಲಿ ಸೂರ್ಯನ ಶಕ್ತಿ ತುಂಬಿರುತ್ತದೆ. ಆ ಆವಿ ಮೋಡಗಳಾಗಿ ಹೆಪ್ಪುಗಟ್ಟಿಕೊಂಡು ಶೀತಲ ವಾಯು ಸೋಕಿದಾಗ ಮಳೆಯಾಗಿ

ಸುರಿಯುತ್ತದೆ. ಗುಡ್ಡ ಬೆಟ್ಟಗಳ ಮೇಲೆ ಬಿದ್ದ ಮಳೆನೀರಿಗೆ ಹೆಚ್ಚು ಶಕ್ತಿ. ಅಷ್ಟು ಎತ್ತರದ ಮೇಲೆ ಬಿದ್ದ ನೀರನ್ನು ಭೂಮಿಯ ಗುರುತ್ವಾಕರ್ಷಣ ಶಕ್ತಿ ಕೆಳಕ್ಕೆ ಎಳೆಯುತ್ತದೆ. ಭೂಮಿಯ ವಾಟ ಸಮುದ್ರದ ಕಡೆಗೇ ತಾನೆ. ಅದರಿಂದ ಆ ನೀರೆಲ್ಲಾ ಸಮುದ್ರದ ಕಡೆಗೆ ಹರಿಯುತ್ತದೆ. ಆ ಮಳೆಯ ನೀರು ಹೊಳೆಯಾಗಿ ಕಡಲಿಗೆ ಹರಿಯುತ್ತಿರುವಾಗ ಮನುಷ್ಯ ತನ್ನ ಬುದ್ಧಿ - ಸಂಕಲ್ಪ ಬಲದಿಂದ ಆ ಹೊಳೆಯ ನೀರಿನ ಶಕ್ತಿಯನ್ನು ಉಪಯೋಗಿಸಿಕೊಳ್ಳುವ ಉಪಾಯವನ್ನು ಹುಡುಕಬಲ್ಲ. ನದಿಯ ಪ್ರಾರಂಭದಲ್ಲಿಯೆ ಅದಕ್ಕೆ ಅಣೆಕಟ್ಟು ಕಟ್ಟಬಲ್ಲ. ಅದರಿಂದ ಶಕ್ತಿಯನ್ನು ಸಂಗ್ರಹಿಸಿ ಉಪಯೋಗಿಸಬಲ್ಲ. ನಮ್ಮ ಗುಡ್ಡದ ಸೀಮೆಗಳಲ್ಲಿ ಮಾಡು ವಂತೆ ಹಿಟ್ಟು ಬೀಸಲು ಜಲಯಂತ್ರವನ್ನು ರಚಿಸಬಲ್ಲ. ಅಥವಾ ಭಾರಿ ಯೋಜನೆ ಹಾಕಿ ವಿದ್ಯುತ್ತನ್ನೆ ಉತ್ಪತ್ತಿಮಾಡಿ ಅದನ್ನು ತಂತಿಗಳ ಮೂಲಕ ನೂರಾರು ಮೈಲಿ ದೂರ ಸಾಗಿಸಬಲ್ಲ. ಅದರಿಂದ ಪಟ್ಟಣ ಗಳಲ್ಲಿ ಹಳ್ಳಿಗಳಲ್ಲಿ ಬೆಳಕು ಆದೀತು. ಬಾವಿಯ ನೀರೆತ್ತುವ ಪಂಪನ್ನು ನಡಸುವ ಶಕ್ತಿಯಾದೀತು. ಇಷ್ಟೆಲ್ಲ ಮಾಡಿಯೂ ಆ ನೀರನ್ನು ಕಾಲುವೆ ಗಳಲ್ಲಿ ಹರಿಯಿಸಿ ಗದ್ದೆಗೆ ಹಾಯಿಸಬಹುದು. ಚಿಕ್ಕ ಪುಟ್ಟ ದೋಣಿಗಳನ್ನು ನಡಸಬಹುದು. ಹೀಗೆ ನೀರಿನ ಪ್ರವಾಹವನ್ನು ತಡೆಗಟ್ಟಿ ಪ್ರಕೃತಿಗೆ ಅಡ್ಡ ನಿಲ್ಲದೆ, ಅದರ ನಿಯಮಕ್ಕೆ ಭಂಗ ತಾರದೆ ನೂರಾರು ಜನಕ್ಕೆ ಸಂತೋಷ ಸಮಾಧಾನ ಕೊಡಬಹುದು.

ಪ್ರಕೃತಿ ತನ್ನ ನಿಯಮಾನುಸಾರ ನಡೆದು ಮನುಷ್ಯನೊಡನೆ ಸಹ ಕರಿಸುವಂತೆ, ಇಂಥ ಪರಿಸ್ಥಿತಿಯನ್ನು ಕಲ್ಪಿಸಿದ, ಮಾನವನ ಇಚ್ಛಾಬಲದ ಉಪಯೋಗ ಸರಿ, ಶ್ಲಾಘ್ಯ. ಹೀಗಾದರೆ ಪ್ರಕೃತಿ ಮನುಷ್ಯನಿಗೆ ಉತ್ತಮ ಜೀವನವನ್ನು ಅನುಗ್ರಹಿಸುತ್ತದೆ.

ಹೀಗಲ್ಲದೆ, ಎಷ್ಟೋ ಸಲ ಮನುಷ್ಯ ತನ್ನ ಇಚ್ಛಾಬಲವನ್ನು ಪ್ರಕೃತಿಯ ಕೆಲಸಕ್ಕೆ ಅಡ್ಡಿಯಾಗುವಂತೆ ಉಪಯೋಗಿಸುತ್ತಾನೆ. ಪ್ರಕೃತಿ ನಿಯಮಗಳಿಗೆ ಕಿಂಚಿತ್ತೂ ಗಮನ ಕೊಡದೆ ತನ್ನ ಸುಖ - ಸಂತೋಷ ಗಳಿಗಾಗಿ ದಾರಿಬಿಟ್ಟು ನಡೆಯುತ್ತಾನೆ. ಉದಾಹರಣೆಗೆ: ಬೆಳ್ಳಗೆ ಮಲ್ಲಿಗೆ ಹೂವಿನಂತೆ ಮುತ್ತಿನಂತೆ ಕಂಡರೆ ಅನ್ನ ಬಹಳ ಅಂದ ಎಂಬ ಭ್ರಾಂತಿ

ಯಿಂದ ಅಕ್ಕಿಯನ್ನು ಬೆಳ್ಳಗೆ ಗಿರಣಿಯಲ್ಲಿ ತೊಳಿಸುತ್ತಾನೆ. ಅಂದ ಚೆಂದದ ಬಗ್ಗೆ ಅವನಿಗಿರುವ ಅಭಿಪ್ರಾಯವೇ ತಪ್ಪು. ಹೀಗೆ ಅಕ್ಕಿಯನ್ನು ಬೆಳ್ಳಗೆ ತೊಳಿಸಿ ಪ್ರಕೃತಿಯ ವ್ಯವಸ್ಥೆಯನ್ನು ಭಗ್ನಮಾಡುತ್ತಾನೆ. ಒಂದೊಂದು ಅಕ್ಕಿಯ ಕಾಳಿನಲ್ಲೂ ಪುಷ್ಟಿದಾಯಕವಾದ ತಿರುಳನ್ನೂ ಜೀರ್ಣಕ್ಕೆ ಅನುಕೂಲಮಾಡಲು ತೌಡಿನ ಹೊದಿಕೆಯನ್ನೂ ಇಟ್ಟಿದೆ ಪ್ರಕೃತಿ. ಗಿರಣಿಯಲ್ಲಿ ತೊಳಿಸಿದಾಗ ಅಕ್ಕಿಯ ಈ ಎರಡು ಮುಖ್ಯ ತತ್ವಗಳೂ ನಾಶವಾಗುತ್ತವೆ. ಗಿರಣಿಯಲ್ಲಿ ತೊಳಿಸಿದ ಇಂಥ ಅಕ್ಕಿಯನ್ನು ತಿಂದು ನಿಯಮತಪ್ಪಿ ನಡೆವ ಜನರಿಗೆ ಪ್ರಕೃತಿ ಶಿಕ್ಷೆ ಕೊಡುತ್ತದೆ. ಅವರಿಗೆ ಬಹಳ ಸಂಕಟಕರ ಅಪಾಯಕರ ಆದ ಬೆರಿಬೆರಿ ರೋಗ ಬರುತ್ತದೆ.

ಪ್ರಕೃತಿ ನಮಗೆ ಯಥೇಷ್ಟವಾಗಿ ಸೇಬು, ಖರ್ಜೂರ, ದ್ರಾಕ್ಷಿ ನಾನಾ ಬಗೆಯ ಫಲಗಳನ್ನು ಕೊಡುತ್ತದೆ. ಆ ಹಣ್ಣನ್ನು ಹಾಗೆಯೆ ತಿನ್ನದೆ ಮನುಷ್ಯ ಅವನ್ನು ಹಿಂಡಿ ರಸತೆಗೆದು ಅದನ್ನು ಹುಳಿಯಿಸಿ ಮದ್ಯ, ದ್ರಾಕ್ಷಾರಸಗಳನ್ನು ಮಾಡಿ ಕುಡಿದು ಕೃತ್ರಿಮ ಉಲ್ಲಾಸವನ್ನು ಪಡೆಯುತ್ತಾನೆ. ಇಲ್ಲಿಯೂ ಅಷ್ಟೆ, ತನ್ನ ದಾರಿಬಿಟ್ಟು ನಡೆವವರಿಗೆ ಪ್ರಕೃತಿ ತೀವ್ರಶಿಕ್ಷೆ ವಿಧಿಸುತ್ತದೆ.

ಗರ್ಭನಿರೋಧಕ ಪದಾರ್ಥಗಳನ್ನು ಬಳಸುವ ತಯಾರಿಸುವ ಮನುಷ್ಯ ಪ್ರಕೃತಿಯ ವ್ಯವಸ್ಥೆಗೆ ವಿರುದ್ಧ ತನ್ನ ಸೃಷ್ಟಿಶಕ್ತಿಯನ್ನು ಉಪಯೋಗಿಸುತ್ತಾನೆ; ಪ್ರಕೃತಿಯ ನಿಯಮದಂತೆ ನಡೆಯಲಿಕ್ಕಲ್ಲ. ತನ್ನ ಸಂತೋಷಕ್ಕಾಗಿ ಹಾಗೆ ಮಾಡುತ್ತಾನೆ. ಆದರೆ ಪ್ರಕೃತಿ ಅವನನ್ನು ಸುಮ್ಮನೆ ಬಿಟ್ಟೀತೆ? ನಿರ್ದಯೆಯಿಂದ ಶಿಕ್ಷಿಸುತ್ತದೆ. ಪ್ರಜೋತ್ಪಾದನ ಶಕ್ತಿಯನ್ನು ಹೀಗೆ ಅತಿಯಾಗಿ ಬಳಸಿದವನು ಆಸಕ್ತಿ ಕಳೆದುಕೊಂಡು ನಿರ್ವೀರ್ಯನಾಗಿ ನಾನಾ ಬಗೆಯ ನರಗಳ ದೌರ್ಬಲ್ಯಕ್ಕೆ ತುತ್ತಾಗುತ್ತಾನೆ. ಹುಚ್ಚೂ ಹಿಡಿದೀತು.

ಪ್ರಕೃತಿನಿಯಮಗಳಿಗೆ ತಪ್ಪಿನಡೆದ, ಇದಿರುನಡೆದ ಇಂಥ ದೃಷ್ಟಾಂತಗಳನ್ನು ಬೇಕಾದಷ್ಟು ಹೇಳಬಹುದು. ಆಧುನಿಕ ಜೀವನದಲ್ಲಿ ಈ ದೃಷ್ಟಾಂತಗಳು ಹೇರಳವಾಗಿವೆ.

ಮನುಷ್ಯನ ಅಸಾಧಾರಣ ಸಾಮರ್ಥ್ಯ ಸಾಹಸ ಇಂದ್ರಿಯಸುಖ ಕ್ಷಣಿಕ ಸಂತೋಷಗಳನ್ನು ಹಿಂಬಾಲಿಸಿ ಓಡಲು ಉಪಯೋಗವಾಗುತ್ತಿದೆ. ಮುಂದೆ ಆಳವಾದ ಕಮರಿ. ಅದರಲ್ಲಿ ಬೀಳಲು ವೇಗವಾಗಿ ಕೋಡುಗಲ್ಲಿನ ಕಡೆ ಓಡುತ್ತಿದಾನೆ. ಹೀಗೆ ಸರ್ವನಾಶಕ್ಕೆ ದಾರಿಮಾಡುವ ತೆರದಲ್ಲಿ ತನ್ನ ಇಚ್ಛಾ ಬಲವನ್ನು ಉಪಯೋಗಿಸಿದರೆ ಮನುಷ್ಯ ಕ್ಷಣಭಂಗುರ ಜೀವನ ನಡೆಸುತ್ತಾನೆ. ಪ್ರಕೃತಿಯ ನಿತ್ಯನಿರಂತರೋದ್ದೇಶ್ಯಕ್ಕೆ ಅದು ವಿರುದ್ಧ ; ಪ್ರಕೃತಿಯ ಶಾಶ್ವತ ವ್ಯವಸ್ಥೆಗೆ ಭಗ್ನಕಾರಿ.

ಮನುಷ್ಯನಲ್ಲಿರುವ ಅತ್ಯುತ್ತಮ ಗುಣ ಪ್ರೇಮ. ಅದನ್ನು ತನ್ನ ಸುತ್ತಲಿನವರ ಸೇವೆಯಲ್ಲಿ ಮನುಷ್ಯ ಪ್ರಕಟಿಸುತ್ತಾನೆ. ಪ್ರಕೃತಿಯ ಮಾತೃಪ್ರೇಮದಲ್ಲಿ ನಮಗಿದರ ಕಿಂಚಿದ್ದರ್ಶನವಾಗುತ್ತದೆ. ಹಾಗೆ ಲೋಕಸೇವೆ ಮಾಡುವಾಗ ಉತ್ತಮೋತ್ತಮ ರೀತಿಯ ಜೀವನ ನಡೆಸುತ್ತಾನೆ ಮನುಷ್ಯ ; ದೈವೀ ಜ್ಯೋತಿಯನ್ನು ಈ ಭೂಮಿಯಲ್ಲಿ ಬೆಳಗಿಸುತ್ತಾನೆ. ತನ್ನ ಶಕ್ತಿ ಸಾಮರ್ಥ್ಯಗಳನ್ನು ಸೇವಾಯೋಗ್ಯರ ಉಪಕಾರ ಪಾತ್ರರ ಸುಖ ಸಂತೋಷಗಳಿಗಾಗಿ ಉಪಯೋಗಿಸುತ್ತಾನೆ. ಈ ಸಾಮರ್ಥ್ಯ ಅವರ ಯೋಗಕ್ಷೇಮವಾಗಿ ಪರಿಣಮಿಸುತ್ತದೆ.

ಇಚ್ಛಾಶಕ್ತಿಯ ದುರುಪಯೋಗದಿಂದ ಈ ಗುಣ ಕೂಡ ಪ್ರೀತಿಯ ಶಾಶ್ವತಾನಂದವನ್ನು ಕೊಡದೆ, ಸಂಗ್ರಹದ ಆಸೆಯಿಂದ ಸ್ವಾರ್ಥ-ಲೋಭ ಆಗಿಬಿಡುತ್ತದೆ. ಕೂಡಿಟ್ಟ ಹಣದಂತೆ ಮನುಷ್ಯನ ವಿಶೇಷ ಸಾಮರ್ಥ್ಯವೂ ಸ್ವಾರ್ಥಕ್ಕಾಗಿಯೆ ಉಪಯೋಗವಾಗುತ್ತದೆ. ವಿಲಾಸಜೀವನವನ್ನು ಪ್ರಾರಂಭಿಸಿದರಂತೂ ಆತ್ಮನಾಶವೇ. ಒಂದು ವೇಳೆ ಸೊತ್ತು-ಹಣ ಗಳಿಸಿಟ್ಟರೆ ದಾಯಾದಿ ಕಲಹ ಬರುತ್ತದೆ. ಅದರಿಂದ ಅನೇಕ ವೇಳೆ ವಿನಾಶ ಖಂಡಿತ.

---

## ೬ ಮನುಷ್ಯನ ವಿಕಾಸ-ವ್ಯಕ್ತಿ

ಸಸ್ಯಗಳಲ್ಲಿ ಪ್ರಾಣಿಗಳಲ್ಲಿ, ಸಚೇತನ ಸೃಷ್ಟಿಯಲ್ಲಿ, ಕಾಣಬರುವ ಬೇರೆಬೇರೆ ಬಗೆಯ ಆರ್ಥಿಕ ರೀತಿಗಳನ್ನು ಹಿಂದಿನ ಅಧ್ಯಾಯ ಒಂದರಲ್ಲಿ

ಗಮನಿಸಿದೇವೆ. ಅವೇ ಸೂತ್ರಗಳನ್ನು ಮನುಷ್ಯನಿಗೆ ಅನ್ವಯಿಸಿ ಆಳತೆ ಮಾಡಿ ನೋಡೋಣ-ಮನುಷ್ಯ ಯಾವ ವಿಧಾನಕ್ಕೆ ಹೇಗೆ ಹೊಂದಿ ಕೊಳ್ಳುತ್ತಾನೋ!

ಪ್ರಾಣಿಗಳು ಸ್ವಭಾವಾಧೀನ. ತಮ್ಮ ತಮ್ಮ ಪ್ರಕೃತಿಗೆ ಅನುಸಾರ ವಾಗಿ ಬದುಕಲೇ ಬೇಕು. ಒಂದು ಜಾಡು, ಒಂದು ಚೌಕಟ್ಟು ಅವಕ್ಕೆ ಇದೆ. ಒಂದು ಬಗೆಯ ಆರ್ಥಿಕ ವಿಧಾನದಿಂದ ಇನ್ನೊಂದು ಆರ್ಥಿಕ ರೀತಿಗೆ ತಮ್ಮ ಪ್ರಯತ್ನದಿಂದ ಅವು ಏರಲಾರವು. ಹುಟ್ಟಿದ ಗಳಿಗೆಯಿಂದ ಸಾಯುವವರೆಗೆ ಅವು ಹೀಗೇ ನಡೆಯಬೇಕು ಎಂಬ ನಿರ್ಧಾರವಿದೆ. ಪರೋಪಜೀವಿ ವರ್ಗದ ಒಂದು ಜೀವ ಕಡೆತನಕವೂ ಪರೋಪಜೀವಿ ಯಾಗಿಯೇ ಉಳಿಯಬೇಕು. ಅದಕ್ಕೆ ಆತ್ಮೋದ್ಧಾರ ಸಾಧ್ಯವಿಲ್ಲ. ಚಿರತೆಗೆ ತನ್ನ ಮೈಮೇಲಿನ ಚುಕ್ಕೆಗಳನ್ನು ಅಳಿಸಿಕೊಳ್ಳಲು ಎಷ್ಟು ಅಸಾಧ್ಯವೋ ತನ್ನ ಸ್ವಭಾವವನ್ನು ತಿದ್ದಿಕೊಳ್ಳಲೂ ಅಷ್ಟೇ ಮಟ್ಟಿಗೆ ಅಸಾಧ್ಯ. ಅದು ಇತರ ಪ್ರಾಣಿಗಳನ್ನು ಕೊಂದು ತಿನ್ನಲೇಬೇಕು. ಇಲ್ಲದಿದ್ದರೆ ಸಾವೇ ಗತಿ. ಅದರ ಬದುಕಿನ ಆ ರೀತಿಗೆ ಅದು ಹೊಣೆಯಲ್ಲ. ತಾನಾಗಿ ಬಯಸಿ ಅದು ಹಾಗೆ ಬದುಕುತ್ತಿಲ್ಲ. ಪ್ರಯತ್ನಶೀಲ ಪ್ರಾಣಿ ಯಾಗಿ ಅಥವಾ ಸಂಘಜೀವಿಯಾಗಿ ಅದು ಮುಂಬರಿಯಲಾರದು; ಅದಕ್ಕೆ ಅದು ಅಸಾಧ್ಯ.

ಮನುಷ್ಯನಿಗೆ ಮಾತ್ರ ಇಚ್ಛಾಶಕ್ತಿ – ಸಂಕಲ್ಪಬಲ ಇದೆ. ಬುದ್ಧಿ ಬಲವಿದೆ. ತನ್ನ ಬುದ್ಧಿಬಲದಿಂದ, ಇಚ್ಛಾಶಕ್ತಿಯ ಉಪಯೋಗದಿಂದ ಮನುಷ್ಯ ತನ್ನ ಪರಿಸ್ಥಿತಿ-ವಾತಾವರಣಗಳನ್ನು ಬದಲಾಯಿಸಬಲ್ಲ. ಇತರ ವಿಧಾನಗಳ ಜೀವಿಗಳಿಗೂ ಮನುಷ್ಯನಿಗೂ ಇರುವ ಭೇದವೇ ಇದು.

ಪರೋಪಜೀವಿಯಾದ ಒಬ್ಬ ಕಳ್ಳ, ದರೋಡೆಗಾರ, ತನ್ನ ಬಾಳಿನ ರೀತಿಯನ್ನು ಬದಲಿಸಬಲ್ಲ. ತನ್ನ ಹಿಂಸಾಪ್ರವೃತ್ತಿಯನ್ನು ತಗ್ಗಿಸಿ ಜಮೀನುದಾರನಾಗಿ ನೆಲೆಸಿ, ಒಂದು ತೃಣವೂ ಕೆಲಸಮಾಡದೆ ದುಡಿಮೆ ಎಳ್ಳಷ್ಟೂ ಇಲ್ಲದೆಯೆ ತನ್ನ ಗುತ್ತಿಗೆಯನ್ನೋ ಗೇಣಿಯನ್ನೋ ವಸೂಲು

ಮಾಡಿಕೊಳ್ಳುತ್ತ ಬದುಕಬಹುದು. ಹೀಗೆ ಪರೋಪಜೀವಿ ವಿಧಾನದಿಂದ ಮುಂದಿನ ಪರಾಪಹಾರಿ ವರ್ಗಕ್ಕೆ ಏರಬಲ್ಲ.

ಅಥವಾ, ಬೇಸಾಯಗಾರನಾಗಿ, ಚಿಕ್ಕಪುಟ್ಟ ಕಸಬುದಾರನಾಗಿ ನೆಲೆಸಿ ತನ್ನ ಕೃಷಿಯಿಂದ ತನ್ನ ವೈಯ ಜಿವರಿನಿಂದ ಪ್ರಾಮಾಣಿಕ ಜೀವನ ನಡೆಸಲೂ ಬಹುದು. ಹಾಗೆ ಮಾಡಿದರೆ-ಅವನು ಮೂರನೆಯ ವಿಧಾನವಾದ ಪ್ರಯತ್ನಶೀಲ ವರ್ಗಕ್ಕೆ ಏರಿದಂತಾಯಿತು.

ಅಥವಾ, ಹಿಂದೂ ಅವಿಭಕ್ತ ಕುಟುಂಬದ ಸದಸ್ಯನಾಗಿ ಕುಟುಂಬ ದವರೆಲ್ಲರಿಗಾಗಿ ದುಡಿಯುತ್ತ ತನ್ನ ಸಂಪಾದನೆಯನ್ನು, ದುಡಿತದ ಫಲ ವನ್ನು ಎಲ್ಲರೊಡನೆ ಹಂಚಿಕೊಂಡು ಬದುಕಬಹುದು. ಆಗ ಅವನು ಸಂಘಜೀವಿಯಾದ.

ಇನ್ನೂ ಒಂದು ಹೆಜ್ಜೆ ಮುನ್ನಡೆದು ತನ್ನ ಜೊತೆಯ ಮನುಷ್ಯ ವರ್ಗವನ್ನು ಪ್ರೀತಿಸಿ, ಆ ಪ್ರೇಮದ ಪ್ರೇರಣೆಯಿಂದ ದೇಶಸೇವಕನಾಗಿ ಪರಿವರ್ತನಗೊಂಡು ಸರಳಜೀವನ ನಡೆಸಿಯಾನು. ಮಿತಾಹಾರ ವಿಹಾರ ಗಳಿಂದ ಸೇವಾದೀಕ್ಷೆಯಲ್ಲಿ ಬಾಳನ್ನು ಸವೆಸಿಯಾನು. ಆಗ ಅವನು ಈ ಆರ್ಥಿಕ ರೀತಿಗಳ ಮೇಲಿನ ಹಂತಕ್ಕೆ, ಪರಹಿತಕಾರಿ ವರ್ಗಕ್ಕೆ ಏರಬಲ್ಲ.

ಆತ್ಮಸಂಯಮ, ತಪಸ್ಸು ಇದ್ದರೆ ತನ್ನ ಜೀವನಧರ್ಮವನ್ನು ಅರಿತು ಅದರಂತೆ ನಡೆದರೆ, ಮನುಷ್ಯನಿಗೆ ಇವೆಲ್ಲವೂ ಸಾಧ್ಯವೇ. ಉತ್ತ ಮೋತ್ತಮವನ್ನು ಸಾಧಿಸುವ ಹಂಬಲ, ಅದಕ್ಕಾಗಿ ಇಚ್ಛಾಶಕ್ತಿಯ ಯೋಜನೆ ಅಗತ್ಯ.

ಈ ಆರ್ಥಿಕ ವಿಧಾನಗಳನ್ನು ಮನುಷ್ಯನಿಗೆ ಅನ್ವಯಿಸಿದಾಗ ಆಯಾ ವರ್ಗದ ವಿಶೇಷ ಲಕ್ಷಣಗಳು ಹೇಗಿರುತ್ತವೋ ಸ್ಥೂಲವಾಗಿ ನೋಡೋಣ.

**ಪರೋಪಜೀವಿ ವಿಧಾನ:** ಗುರುತು – ಒಡವೆಯ ಆಸೆಗಾಗಿ ಮಗುವನ್ನೇ ಕೊಲ್ಲುವ ಕೊಲೆಗಡುಕ ಕಳ್ಳ.

೧. ಲೋಭ-ದುರಾಸೆಗಳಿಂದ ಬಂದ ಸ್ವಾರ್ಥ.



ಕತ್ತಿನ ಸರಕ್ಕಾಗಿ ಮಗುವನ್ನು ಕೊಲ್ಲುವ ಕಳ್ಳ

೨. ಉದ್ದೇಶ್ಯ–ತನ್ನ ಕೃತಿಯಿಂದ ಯಾರಿಗೆ ಏನೇ ಹಾನಿಯಾಗಲಿ ತನಗೆ ಲಾಭವಾದರಾಯಿತು.

೩. ತನಗೆ ಲಾಭಕೊಟ್ಟ ಮೂಲವಸ್ತುವನ್ನೇ ನಾಶಮಾಡುವುದು; ಕನಿಷ್ಠ ಪಕ್ಷ ಗಾಸಿಗೊಳಿಸುವುದು.

೪. ಕೇವಲ ತನ್ನ ಹಕ್ಕು–ಅಧಿಕಾರದ ಮೇಲೇ ಗಮನ.

೫. ತನ್ನ ಕರ್ತವ್ಯಗಳೂ ಇವೆ ಎಂಬುದರ ಗಣನೆಯೆ ಇಲ್ಲ.

೬. ಪರೋಪಕಾರಬುದ್ಧಿ ಶೂನ್ಯತೆ.

೭. ಹಿಂಸಾಜನಕ ಕಾರ್ಯ.

**ಮುಖ್ಯ ಲಕ್ಷಣ :** ಲಾಭಕೊಟ್ಟ ವಸ್ತುವನ್ನೇ ನಾಶಮಾಡುವುದು.

**ಪರೋಪಹಾರಿ ವಿಧಾನ:** ಗುರುತು ಗೊತ್ತೇ ಆಗದ ಹಾಗೆ ಜೇಬಿನಿಂದ ಹಣವನ್ನು ಕತ್ತರಿಸುವ ಜೇಬುಕಳ್ಳ.

೧. ದುರಾಶೆಯಿಂದ ಬಂದ ಸ್ವಾರ್ಥ.

೨. ಸ್ವಭಾವವೇ ಮುಖ್ಯ; ಕೈಗೆ ಸಿಕ್ಕವನಿಗೆ ಹೆಚ್ಚು ಹಿಂಸೆ ಕೊಡದೆ ಕೆಲಸ ಸಾಧಿಸುವಂತಿದ್ದರೆ ಸಾಧಿಸಿಕೊಳ್ಳುತ್ತಾನೆ.

೩. ಹಕ್ಕು, ಸ್ವಂತ ಅಧಿಕಾರದ ಮೇಲೇ ಗಮನ.

೪. ಕರ್ತವ್ಯ ಜ್ಞಾನ ಶೂನ್ಯತೆ.

೫. ಪರಹಿತಕಾರಿತನದ ಅಭಾವ.

೬. ಹಿಂಸಾಜನಕ ಕಾರ್ಯ.

ಮುಖ್ಯ ಲಕ್ಷಣ: ದುಡಿಯದೆ ಫಲ ಬೇಕು.



ಜೇಬುಗಳ್ಳ

**ಪ್ರಯತ್ನ ಶೀಲ ವಿಧಾನ**: ಗುರುತು – ರೈತ ನೆಲವನ್ನು ಉತ್ತು ಗೊಬ್ಬರ ಚೆಲ್ಲಿ ನೀರು ಹರಿಯಿಸಿ ಆರಿಸಿದ ಬೀಜ ಬಿತ್ತಿ ಪೈರನ್ನು ಕಾದು ಸುಗ್ಗಿಯಲ್ಲಿ ಬೆಳೆ ಕೊಯಿದುಕೊಳ್ಳುತ್ತಾನೆ.

೧. ಯೋಗ್ಯಸ್ವಾರ್ಥ, ಆಶೆ – ಆಕಾಂಕ್ಷೆಗಳ ಪ್ರೇರಣೆ.

೨. ಅವನ ಆತ್ಮಾಭಿಮಾನ ಅವನಿಂದ ಸ್ವಂತವಾಗಿ ಕೃಷಿಮಾಡಿಸುತ್ತದೆ; ವಿಚಾರ, ಪ್ರಯತ್ನ ಮಾಡಿಸುತ್ತದೆ; ಅದರ ಫಲವಾಗಿ ಬಂದುದನ್ನು ಮಾತ್ರ ಅವನು ತೆಗೆದುಕೊಳ್ಳುತ್ತಾನೆ.

೩. ಪ್ರಯತ್ನಪಡುವ ವೃತ್ತಿ, ಅಪಾಯಕ್ಕೆ ನಷ್ಟಕ್ಕೆ ಎದೆಗೊಡುವ ಸಿದ್ಧತೆ.



ಪರಸ್ಪರ ಸಹಕರಿಸಿ ಹೊಲ ಉಳುವ ರೈತರು.

೪. ಸಂಗಾತಿಗಳಿಗೆ, ಸಾಧ್ಯವಿದ್ದರೆ ಇತರರಿಗೂ ಪ್ರಯೋಜನವಾಗಲಿ ಎಂಬ ಬಯಕೆ.

೫. ಎಲ್ಲರ ಹಕ್ಕುಗಳನ್ನೂ ಸಮರಸವಾಗಿ ತೂಗುವ ವೃತ್ತಿ.

೬. ಇತರರಿಗೆ ಸಲ್ಲಿಸಬೇಕಾದ ಋಣಗಳ ಭಾವನೆಯ ಬೆಳವಣಿಗೆ.

೭. ನ್ಯಾಯ – ಧರ್ಮಗಳ ಆಧಾರ.

೮. ಹಿಂಸೆ ಮಾಡಲೂ ಬಹುದು ಒಮ್ಮೊಮ್ಮೆ.

ಮುಖ್ಯ ಲಕ್ಷಣ: ದುಡಿತದಿಂದ ಪಡೆತ, ಲಾಭನಷ್ಟ – ಜಯಾಪಜಯಗಳಿಗೆ ಸಿದ್ಧ.

**ಸಂಘಜೀವಿ ವರ್ಗ**: ಗುರುತು – ಇಡೀ ಕುಟುಂಬದ ಹಿತಕ್ಕಾಗಿ ಕೆಲಸ ಮಾಡುವ ಅವಿಭಕ್ತ ಕುಟುಂಬದ ಸದಸ್ಯ. ಹಳ್ಳಿಗಾಗಿ, ಒಂದು ಜನ ಸಮುದಾಯಕ್ಕಾಗಿ ಕೆಲಸಮಾಡುವ ಒಂದು ಗ್ರಾಮ ಪಂಚಾಯತಿ ಅಥವಾ ಸಹಕಾರ ಸಂಘ.

೧. ವೈಯಕ್ತಿಕ ಸ್ವಾರ್ಥವಲ್ಲ ಉದ್ದೇಶ್ಯ, ಸಂಘ – ಸಮುದಾಯದ ಹಿತ.

೨. ಸಂಘದ ಇಚ್ಛೆಗೆ ಅಧೀನ. ಸ್ವಂತ ಹಿತವನ್ನು ತ್ಯಜಿಸಿ ಸಂಘಕ್ಕೆ ವಿಧೇಯವಾಗುವಷ್ಟು ಸ್ವಾರ್ಥತ್ಯಾಗ.*

೩. ಸಾಂಘಿಕ ಕರ್ತವ್ಯದಲ್ಲಿ ಶ್ರದ್ಧೆ.

೪. ತನಗೆ ಸಲ್ಲಬೇಕಾದ ಲಾಭಕ್ಕಿಂತ ತಾನು ಸಲ್ಲಿಸಬೇಕಾದ ಕರ್ತವ್ಯವೇ ಅಧಿಕವೆಂಬ ಭಾವನೆ.

೫. ಪರಹಿತದ ವೃತ್ತಿ.

೬. ಸಂಘದ ಹೊರಗಿನವರಿಗೆ ಒಮ್ಮೊಮ್ಮೆ ಹಿಂಸೆಯಾದರೂ ಆಗಬಹುದು.

---

*ತ್ಯಜೇತ್ ಕುಲಾರ್ಥೇ ಪುರುಷಂ
ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ
ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥
—ಮಹಾಭಾರತ, ಉದ್ಯೋಗಪರ್ವ.



ಪ್ರತಿಫಲ ಬಯಸದೆ ದಾರಿಗನಿಗೆ ಜಲದಾನ

ಮುಖ್ಯ ಲಕ್ಷಣ: ವ್ಯಕ್ತಿಹಿತಕ್ಕಿಂತ ಸಂಘಹಿತ ಮುಖ್ಯ.

**ಪರಹಿತಕಾರಿ ವಿಧಾನ:** ಗುರುತು – ಸಮಾಜ ಸೇವಕ.

೧. ಮೇಲೇ ಸ್ವಹಿತಕ್ಕೆ ಬಾಧಕವಾಗಿ ಕಾಣುತ್ತಿದ್ದರೂ ಪರಹಿತ ಕರವಾದ ಕೆಲಸ ಮಾಡುವ ಉದ್ದೇಶ್ಯ.

೨. ತನ್ನ ಹಕ್ಕುಗಳ ಯೋಚನೆ, ಅರಿವು ಇಲ್ಲದೆಯೆ ತನ್ನ ಕರ್ತವ್ಯವನ್ನು ಮಾಡಲು ಮುನ್ನುಗ್ಗುವವನು.

೩. ಪ್ರತಿಫಲಾಪೇಕ್ಷೆಯಿಲ್ಲದೆ ಕೇವಲ ಸೇವೆ ಮಾಡುವ ಬಯಕೆ.

ಮುಖ್ಯ ಲಕ್ಷಣ: ಲಾಭದೃಷ್ಟಿಯಿಲ್ಲದೆ ಮಾಡಿದ ಸೇವಾಕಾರ್ಯ.

ಮಾನವ ಸಮುದಾಯಗಳಲ್ಲಿ, ಸಂಘ–ರಾಷ್ಟ್ರಗಳಲ್ಲಿ ಈ ವಿವಿಧ ಆರ್ಥಿಕ ವರ್ಗಗಳಿಗೆ ಸೇರಿದ ಜನರು ನಮಗೆ ಕಾಣಬರುತ್ತಾರೆ. ನಮ್ಮ

ದೇಶದಲ್ಲೇ ನಮ್ಮ ಪುರಾತನ ವರ್ಣಾಶ್ರಮಧರ್ಮ ಈ ವಿವಿಧ ಆರ್ಥಿಕ ವರ್ಗಗಳ ಲಕ್ಷಣಗಳನ್ನು ನೋಡಿಯೆ ನೆಲೆಗೊಳಿಸಲ್ಪಟ್ಟಿತ್ತು. ಎಲ್ಲಾ ಪ್ರಾಣಿಗಳಿಗೂ ಸಮಾನವಾದ ಪ್ರಾಥಮಿಕ ದೈಹಿಕ ಅಗತ್ಯಗಳು ತೃಪ್ತಿಯಾಗಿ ನಿರಾತಂಕ ಜೀವನದ ಭರವಸೆ ದೊರೆತರೆ, ಹಾಯಾಗಿ ಸೇವೆ ಮಾಡಿಕೊಂಡು ಇರಲು ಬಯಸುವ ಶೂದ್ರವೃತ್ತಿ ಮೊದಲನೆಯ ಎರಡು ವರ್ಗಗಳದು. ಸಾಹಸಿಗಳಾದ ವೈಶ್ಯರು ಪ್ರಯತ್ನಶೀಲ ವರ್ಗದವರು. ದೇಶಹಿತ, ಸಮಾಜಕಲ್ಯಾಣವೇ ಸರ್ವ ಲಕ್ಷ್ಯವಾಗಿ ಉಳ್ಳ ದೇಶಪ್ರೇಮಿ ಕ್ಷತ್ರಿಯರು ಸಂಘಜೀವಿ ವರ್ಗದವರು. ಸಮಾಜಕ್ಕೆ ನಿಸ್ವಾರ್ಥ ಸೇವೆ ಸಲ್ಲಿಸುತ್ತ ತನಗೆ ಯಾವ ಲಾಭವೂ ಇಲ್ಲದೆ ಜನಕ್ಕೆ ಆದರ್ಶ ಮಾರ್ಗವನ್ನು ತೋರುತ್ತ ಅಸಂಗ್ರಹ ಬುದ್ಧಿಯಿಂದ ಆಸ್ತಿ-ಪಾಸ್ತಿಗಳೇನನ್ನೂ ಕಟ್ಟಿಕೊಳ್ಳದ ಬ್ರಾಹ್ಮಣರು ಕಟ್ಟಕಡೆಯ ವರ್ಗ.

ಈ ಮೂಲವಿಚಾರದ ಆದರ್ಶಗಳ ಮಟ್ಟದಿಂದ ಜಾರಿ ಈಗಿನ ಜಾತಿ ಪದ್ಧತಿ ಬಹಳ ಕೆಳಗೆ ಉರುಳಿದೆ. ಆ ಹಳೆಯ ವರ್ಗ – ಲಕ್ಷಣಗಳನ್ನು ಈಗಿನ ಜಾತಿಗಳಲ್ಲಿ ಕಾಣಲಾಗುವುದಿಲ್ಲ. ಉತ್ತಮ ವರ್ಣೀಯನೆಂಬ ಬ್ರಾಹ್ಮಣನೊಬ್ಬ ಈಗ ಹೈಕೋರ್ಟು ನ್ಯಾಯಾಧೀಶನಾಗಿ ಅಥವಾ ಐ.ಎ.ಎಸ್. ಪದವಿಯಲ್ಲಿದ್ದು ಕೈತುಂಬಾ ಸಂಬಳ ಗಳಿಸಿ ರಾಜಭೋಗ ಪಡುತ್ತಿರಬಹುದು. ಅವನು ದಕ್ಷನಿರಬಹುದು, ಪ್ರಾಮಾಣಿಕನಿರಬಹುದು. ಯಾವ ಚಿಂತೆಯೂ ಇಲ್ಲದೆ ಸ್ಥಿರವಾದ ನೌಕರಿ ಹಿಡಿದು ತಿಂಗಳು ತಿಂಗಳೂ ಸಂಬಳಕ್ಕೆ ಕೈಯೊಡ್ಡಿ ಕುಳಿತಾಗಲೇ ಅವನು ಹಳೆಯ ಶೂದ್ರವರ್ಗಕ್ಕೆ ಸೇರಿದ. ಉದ್ಯೋಗಪತಿಯಾದರೆ ವೈಶ್ಯನಾದ. ಲಾಭಾಲಾಭದ ಗಣನೆಯಿಲ್ಲದ ನಿಸ್ವಾರ್ಥಿ ರಾಜಕೀಯ ನಾಯಕ – ಲೋಕಮಾನ್ಯತಿಲಕರಂಥವನು – ಉತ್ತಮ ಕ್ಷತ್ರಿಯ. ಫಲ ಏನೇ ಬರಲಿ, ಬಾರದಿರಲಿ ಶ್ರದ್ಧೆಯಿಂದ ತನ್ನ ಧ್ಯೇಯ ಸಾಧನೆಮಾಡುವವನು, ಫಲಕ್ಕಿಂತ ಸಾಧನಶುದ್ಧಿಯ ಕಡೆ ಹೆಚ್ಚು ಗಮನ ಕೊಡುವವನು–ಗಾಂಧೀಜಿಯಂಥವರು – ನಿಜವಾದ ಬ್ರಾಹ್ಮಣ.

---

ಆಹಾರ ನಿದ್ರಾ ಭಯ ಮೈಥುನಂಚ ಸಾಮಾನ್ಯಮೇತದ್ ಪಶುಭಿರ್ನರಾಣಾಂ.

ಆಗಿನ ಪರಿಸ್ಥಿತಿಗೆ ಅನುಸಾರವಾಗಿ ವರ್ಣಾಶ್ರಮ ಧರ್ಮವನ್ನು ರೂಪಿಸಿದವರು ಅದನ್ನು ವಂಶಪಾರಂಪರ್ಯವಾಗಿ ಮಾಡಿ ಬಿಕ್ಕಟ್ಟಾಗಿ ಮಾಡಿರಬಹುದು. ಮನುಷ್ಯ ಯಾವ ಕಸಬು-ಉದ್ಯೋಗ ಮಾಡಬೇಕೆಂಬುದರಲ್ಲಿ ಇಚ್ಛಾಬಲದ ಉಪಯೋಗಕ್ಕೆ ಅವಕಾಶವಿಲ್ಲದಂತೆ ಮಾಡಿದರು. ಅವನ ಜನ್ಮ ಅದನ್ನು ನಿರ್ಣಯಿಸಿಬಿಡುತ್ತಿತ್ತು. ಈಗಿನ ಕಾಲದಲ್ಲೋ ಕಸಬು, ಉದ್ಯೋಗ ಯಾವುದೂ ಸ್ಥಿರವಲ್ಲ. ಕೆಲಸಗಾರರು ಒಂದೆಡೆ ನೆಲೆಸರು. ಬಹಳ ವೇಗದ ಸಂಚಾರ. ಕೆಲಸದಲ್ಲಿ ಜಾಣತನ ಸುಟಗಳನ್ನು, ವಿಶ್ವವಿದ್ಯಾನಿಲಯದ ಶಿಕ್ಷಣವನ್ನು, ಪಡೆಯಲು ಧಾರಾಳವಾದ ಸೌಕರ್ಯವಿದೆ. ಇಂಥದರಲ್ಲಿ ಆ ನಿರ್ಬಂಧದ ವರ್ಗೀಕರಣ ಹೊಂದುವುದಿಲ್ಲ. ಆದರೆ ಒಂದು– ಎಂಥ ಪರಿಸ್ಥಿತಿಯೇ ಬರಲಿ, ಈ ಆರ್ಥಿಕ ವರ್ಗೀಕರಣ, ಔದ್ಯೋಗಿಕ ವರ್ಗೀಕರಣ (ಗುಣ–ಕರ್ಮ ವಿಭಾಗಶಃ) ಸಹಜವಾಗಿ ಇದ್ದೇ ಇದೆ.* ಕೆಳಗಿನ ವರ್ಗದವರಿಗೆ ಮೇಲೇರಿ ಬರಲು ಸಾಧ್ಯವಿದ್ದಷ್ಟು ಪ್ರೋತ್ಸಾಹ ಕೊಡಬೇಕು.

ಇಲ್ಲಿ ನಾವು ವರ್ಣಿಸಿದಷ್ಟು ವಿವರಿಸಿದಷ್ಟು ಸ್ಪಷ್ಟವಾಗಿ ಈ ವರ್ಗಗಳು ಬಾಳಿನಲ್ಲಿ ಕಾಣಬರುವುದಿಲ್ಲ. ಒಬ್ಬನೇ ವ್ಯಕ್ತಿ ಆಯಾ ಕಾಲದ ಉದ್ದೇಶ್ಯಕ್ಕನುಗುಣವಾಗಿ ಬೇರೆ ಬೇರೆ ಬಗೆಯಲ್ಲಿ ನಡೆದುಕೊಂಡಾನು. ಅವನ ಕರ್ಮ ಸಮುದಾಯದ ಸ್ವರೂಪದಿಂದ, ಅವನ ಜೀವನ ಸಿದ್ಧಾಂತವನ್ನು ತಿಳಿಸುವ ಅವನ ಧ್ಯೇಯದ ಲಕ್ಷಣದಿಂದ, ಅವನ ವರ್ಗ–ವರ್ಣ ನಿರ್ಧಾರವಾಗುತ್ತದೆ.

---

## ೭. ಮನುಷ್ಯನ ವಿಕಾಸ–ಗುಂಪು, ರಾಷ್ಟ್ರ

ಒಬ್ಬ ವ್ಯಕ್ತಿ ಒಂದು ಆರ್ಥಿಕ ವಿಧಾನದಿಂದ ಇನ್ನೊಂದಕ್ಕೆ ಹೇಗೆ ಏರಬಹುದೋ ಇಳಿಯಬಹುದೋ ಹಾಗೇ ಒಂದು ಗುಂಪೂ ಒಂದು

---

* ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ॥

ರಾಷ್ಟ್ರವೂ ಒಟ್ಟಾಗಿ ಒಂದು ಅರ್ಥಿಕ ವಿಧಾನದಿಂದ ಇನ್ನೊಂದಕ್ಕೆ ಸಾಗಬಹುದು. ತನ್ನ ಸಾಮೂಹಿಕ ಜೀವನದಲ್ಲಿ, ಸಂಘಜೀವನದಲ್ಲಿ ಆ ವಿಧಾನದ ಲಕ್ಷಣಗಳನ್ನು ಸ್ಪಷ್ಟವಾಗಿ ಮೂಡಿಸಬಹುದು. ಇಡೀ ಮಾನವ ಲೋಕವೇ ಹಾಗೆ ಮಾಡಬಹುದು. ಆದುದರಿಂದ ಒಂದು ಗುಂಪಿನ ಅಥವಾ ರಾಷ್ಟ್ರದ ಸಾಂಘಿಕ ಜೀವನದ ಮುಖ್ಯ ಲಕ್ಷಣಗಳನ್ನೂ ಇತರ ಗುಂಪು ಅಥವಾ ರಾಷ್ಟ್ರಗಳೊಡನೆ ಅದು ವ್ಯವಹರಿಸುವ ರೀತಿಯನ್ನೂ ಗಮನಿಸಿ ಅದರ ವಿಕಾಸದ ಹಂತ ಯಾವುದೋ ನಿರ್ಧರಿಸಬಹುದು.

ಮಾನವ ನಾಗರಿಕತೆ ಬಹಳ ಬಳಸಿ ಇಲ್ಲಿಗೆ ಬಂದಿದೆ. ಅದನ್ನು ಮೂರು ಹಂತಗಳಾಗಿ ವಿಂಗಡಿಸಿದರೆ, ನಮ್ಮ ಈ ಜಿಜ್ಞಾಸೆಗೆ ಸಾಕು. ಪ್ರಾಥಮಿಕ ಮೃಗಸ್ಥಿತಿ, ಮಾನವೀಯ ಸ್ಥಿತಿ, ಪ್ರಗತಿಪೂರ್ಣ ಆಧ್ಯಾತ್ಮ ಸ್ಥಿತಿ. ಹಿಂದೆ ನಾವು ಪರಿಶೀಲಿಸಿದ ಐದು ಬಗೆಯ ಆರ್ಥಿಕ ವಿಧಾನಗಳನ್ನು ಈ ಹಂತಗಳಿಗೆ ಹೋಲಿಸಿದರೆ, 'ಪರೋಪಜೀವಿ,' 'ಪರಾಪಹಾರಿ' ವಿಧಾನಗಳೆರಡೂ ಪ್ರಾಥಮಿಕ, ಮೃಗ-ಹಂತದ ಲಕ್ಷಣಗಳು; ಆ ಮುಂದಿನ 'ಪ್ರಯತ್ನಶೀಲ,' 'ಸಂಘಜೀವಿ' ವಿಧಾನಗಳೆರಡೂ ಆಧುನಿಕ ಮಾನವೀಯ ಹಂತದ ಲಕ್ಷಣಗಳು; ಕಟ್ಟಕಡೆಯ 'ಪರಹಿತಕಾರಿ' ವಿಧಾನ ಆಧ್ಯಾತ್ಮ ಹಂತದ ಲಕ್ಷಣ ಎಂದು ತಿಳಿಯುತ್ತದೆ. ಮೊಟ್ಟಮೊದಲನೆಯದು ನಶ್ವರ-ಹಿಂಸಾ ವಿಧಾನ. ಎರಡನೆಯದೂ ಅಶಾಶ್ವತ ವ್ಯವಸ್ಥೆಯೆ. ಅದರಲ್ಲಿ ಅಹಿಂಸೆಯೂ ಹೆಚ್ಚಾಗಿಯೇ ಇದೆ. ಆದರೆ ಶಾಶ್ವತತೆ, ಅಹಿಂಸೆಗಳ ಕಡೆ ಮನಸ್ಸು ಓಡುತ್ತದೆ. ಕಟ್ಟಕಡೆಯ ಹಂತವೇ ಶಾಶ್ವತತೆ, ಶಾಂತಿ, ಅಹಿಂಸೆಗಳನ್ನು ಕೊಡಬಲ್ಲದ್ದು.

**ಪ್ರಾಥಮಿಕ ಅಥವಾ ಮೃಗ-ಹಂತ:** ಈ ಗುಂಪಿನ ಜನ ಇತರ ಗುಂಪುಗಳನ್ನು ರಾಷ್ಟ್ರಗಳನ್ನು ಅವಲಂಬಿಸಿ ಪರೋಪಜೀವಿಗಳಾಗಿ ಬದುಕುತ್ತಾರೆ. ಇತರರ ಹಕ್ಕುಗಳೇನು, ತನಗೆ ಬೇಕಾದುದು ಹೇಗೆ ಸಿಕ್ಕಿತು, ತಾನು ಮಾಡಿದ ಕೆಲಸದ ಫಲಗಳೇನು-ಇವು ಯಾವುದೂ ಪರೋಪಜೀವಿಯ ತಲೆಗೆ ಹತ್ತುವುದೇ ಇಲ್ಲ. ಪ್ರಾಣಿವರ್ಗದಲ್ಲಿ, ಕುರಿಮರಿಯ ಸಂಕಟವೇನು ಎಂಬುವದನ್ನು ತೋಳ ತಾನದರ ಮೇಲೆ ನೆಗೆಯುವಾಗ ಯೋಚಿಸದು. ಆ ಗಳಿಗೆಯಲ್ಲಿ ತನ್ನ ಹಸಿವು ಹಿಂಗಬೇಕು. ಅಷ್ಟೇ

ಅದರ ಉದ್ದೇಶ್ಯ. ಬೇಟೆಗಾರ, ಬೆಸ್ತ ಇಬ್ಬರೂ ತಮ್ಮ ತೃಪ್ತಿಗಾಗಿ ಮಿಕ ವನ್ನು ಕೊಲ್ಲುತ್ತಾರೆ, ಮೀನು ಹಿಡಿಯುತ್ತಾರೆ. ಅವರ ಮನಸ್ಸು ಅಳುಕದು, ಅವರಿಗೆ ಅಂತಃಕರಣವಿಲ್ಲ. ಇದೇ ರೀತಿ ಇನ್ನೊಂದು ಜನಾಂಗವನ್ನು, ರಾಷ್ಟ್ರವನ್ನು ಹಾಳುಮಾಡದೆ ತನ್ನ ಬದುಕನ್ನು ಸಾಗಿಸ ಲಾರದ ದೇಶವೂ ರಾಷ್ಟ್ರವೂ ಪರೋಪಜೀವಿಯೇ. ಅಂಥ ಆರ್ಥಿಕ ವಿಧಾನ ಪರೋಪಜೀವಿ ವಿಧಾನವೇ. ನಿಸ್ಸಂಶಯವಾಗಿ !

ಹಿಂದೆ ಗ್ರೀಕ, ರೋಮಕ ಸಾಮ್ರಾಜ್ಯಗಳು ಅನ್ಯದೇಶಗಳ ಕಪ್ಪ - ಕಾಣಿಕೆಗಳಿಂದ ಪುಷ್ಟವಾಗಿದ್ದವು. ಕೆಲವರನ್ನು ಗುಲಾಮರಾಗಿ ಮಾಡಿ ಅವರ ದುಡಿತದಿಂದ ತಮ್ಮ ವೈಭವವನ್ನು ಮೆರೆಸಿದವು. ಆ ವಿಧಾನ ಪರೋಪಜೀವನದ ವಿಧಾನ.




ದುಡಿಯದೆಯೆ ಕೂತಲ್ಲೇ ಲಾಭ ಗಿಟ್ಟಿಸುವವರು

ಈಗಲೂ ವಸಾಹತುಗಳಿಂದಕಚ್ಚಾ ಮಾಲು ತರಿಸಿಕೊಂಡೋ, ಕೆಲಸಗಾರರನ್ನು ಶೋಷಣೆಮಾಡಿಯೋ, ಬಾಳು ಸಾಗಿಸುವ ಎಲ್ಲಾ ರಾಷ್ಟ್ರಗಳೂ ಪರೋಪಜೀವಿಗಳೇ. ಚೀನಾದೊಡನೆ ಬ್ರಿಟಿಷರು ನಡೆಸಿದ ಅಫೀಮು ವ್ಯಾಪಾರ, ದಕ್ಷಿಣ ಅಮೆರಿಕಾ ರಾಜ್ಯಗಳಲ್ಲಿ ಬ್ರಿಟಿಷರು ಮಾಡುವ ಗುಲಾಮರ ವ್ಯಾಪಾರ, ಪಶ್ಚಿಮ ಆಫ್ರಿಕಾದ ರಾಜ್ಯಗಳಲ್ಲಿ ಲಿಯೊಪಾಲ್ಡ್ ದೊರೆ ನಡೆಸುವ ಶೋಷಣೆ, ಹಿಂದುಸ್ತಾನದ ಗಿರಾಕಿಯನ್ನೇ ನಂಬಿ ಬದುಕುವ ಬ್ರಿಟಿಷ್ ಗಿರಣಿಗಾರರ ರೀತಿ, ಎಲ್ಲವೂ ಪರೋಪಜೀವನ. ಯಾರಿಂದ ಲಾಭ ಪಡೆಯುತ್ತಾರೋ ಅವರನ್ನೇ ಸಮೂಲವಾಗಿ ನಾಶ ಮಾಡುವ ವಿಧಾನ.

ಇನ್ನು ಕೆಲವರು ಕೋತಿಗಳ ಹಾಗೆ. ತಾವು ಬಿತ್ತಿ ಬೆಳೆಸದೆಯೆ, ದುಡಿದು ಸೃಷ್ಟಿಸದೆಯೆ, ಕೈಗೆ ಸಿಕ್ಕ ಫಲವನ್ನು ಅನುಭವಿಸುವವರು. ಆದರೂ ಕೋತಿ ಮರವನ್ನೇನು ಕಿತ್ತುಹಾಕದು. ಮರಕ್ಕೆ ಹಾನಿಯಿಲ್ಲದೆ ಇನ್ನೊಮ್ಮೆ ಅದು ಫಲಬಿಡುವಂತೆ ಕಾಯನ್ನಷ್ಟೇ ಕಿತ್ತುಕೊಳ್ಳುತ್ತದೆ. ಕೋತಿ ಪರಾಪಹಾರಿ.

ಹಿಂದಿನ ಇತಿಹಾಸದಲ್ಲಿ ನಾದಿರ್ ಷಾ ನಂಥವರಿದ್ದರು. ದೇವಾಲಯಗಳನ್ನು ಲೂಟಿ ಮಾಡಿ ಅಲ್ಲಿದ್ದ ಅತುಳೈಶ್ವರ್ಯವನ್ನೊ ಹೊತ್ತುಕೊಂಡು ಹೋದ ನಾದಿರ್ ಷಾ. ಆದರೆ ದೇಶದ ಜನರು ಮಾಡುತ್ತಿದ್ದ ಸಂಪದಭಿವೃದ್ಧಿ ಕಾರ್ಯಕ್ಕೆ ಆತಂಕ ತರಲಿಲ್ಲ. ಅವನ ದಾಳಿಗಳೆಲ್ಲ ಪರಾಪಹಾರದ ಲಕ್ಷಣದವು.

ದಕ್ಷಿಣ ಅಮೆರಿಕಾದ ಪ್ರಜಾರಾಜ್ಯಗಳನ್ನು ತಮ್ಮ ಮುಷ್ಟಿಯಲ್ಲಿ ಹಿಡಿದಿರುವ ನ್ಯೂಯಾರ್ಕಿನ ಬಂಡವಾಳಗಾರ – ಸಾವುಕಾರರೆಲ್ಲ ಈ ವರ್ಗದವರೇ. ಜಾಯಿಂಟ್ ಸ್ಟಾಕ್ ಕಂಪೆನಿಗಳ ಷೇರುದಾರರಾಗಿ ಉತ್ಪಾದನೆಯಲ್ಲಿ ಸ್ವಲ್ಪವೂ ಪ್ರತ್ಯಕ್ಷ ಭಾಗವಹಿಸದೆ ಕೂತಲ್ಲೇ ಲಾಭ ಗಿಟ್ಟಿಸುವ ಜನರೆಲ್ಲರೂ ಪರಾಪಹಾರಿಗಳೇ. ಲಾಭದಲ್ಲಿ ಮಾತ್ರ ಪಾಲು, ದುಡಿತದಲ್ಲಿ ಮಾತ್ರ ಸೊನ್ನೆ. ಹೀಗೇ ಹಲವು ಸಂಸ್ಥೆಗಳು ಕೂಡಿಕೊಂಡು ಬೇರೆ ಬೇರೆ ಹೆಸರುಗಳಿಂದ ಏಕೈಕಾಧಿಕಾರ ಪಡೆದು ಉದ್ಯೋಗ – ವ್ಯಾಪಾರ

ನಡೆಸುವುದು ಕೂಡ ಪರಾಪಹಾರವೇ. ಏಕೆಂದರೆ, ಅವರದು ಕಾಸಿನ ಕಷ್ಟ, ರೂಪಾಯಿಯ ಲಾಭ.

ಆಧುನಿಕ ಮಾನವ ಹಂತ: ಮೊದಲಿನ ಹಂತದಲ್ಲಿ ಬರೀ ಸ್ವಾರ್ಥ. ಕೇವಲ ತನ್ನ ಹಕ್ಕುಗಳದೇ ಜ್ಞಾನ. ಈ ಎರಡನೆ ಹಂತದಲ್ಲಿ ಕರ್ತವ್ಯ ಜ್ಞಾನವಿದೆ. ಹಕ್ಕುಗಳನ್ನೂ ಕರ್ತವ್ಯಗಳನ್ನೂ ತೂಗಿ ನೋಡುವ ಗುಣ ವಿದೆ. ಈ ಹಂತದಲ್ಲಿರುವ ರಾಷ್ಟ್ರಗಳು ನೆರೆಹೊರೆಯ ದೇಶಗಳಿಗೆ ಯಾವ ಬಗೆಯ ತೊಂದರೆಯನ್ನೂ ಕೊಡದೆ ತಾವು ಕಷ್ಟಪಟ್ಟು ಉತ್ಪತ್ತಿ ಮಾಡಿ ದುದನ್ನೆ ಭುಜಿಸುತ್ತವೆ. ಪ್ರತಿಯೊಬ್ಬ ಕಸಬುದಾರನೂ ತನ್ನ ಕೈಗಾರಿಕೆ ಉದರನಿರ್ವಾಹ, ಲಾಭಗಳಿಗಾಗಿ ಶಾಂತವಾಗಿ ನಡೆಯಿಸುತ್ತಿರುವ ಭಾರತ-ಚೀನಾಗಳ ಕರ್ಷಕ ನಾಗರಿಕತೆ ಈ ಪ್ರಯತ್ನಶೀಲ ವಿಧಾನದ ದೃಷ್ಟಾಂತ.

ಬಿಳಿ-ಕರಿ ಕೆಂಪು-ಹಳದಿ ಬಣ್ಣದ ಭೇದವಿಲ್ಲದ, ಜಾತಿ ಭೇದವಿಲ್ಲದ, ರಾಯ ರಂಕ ಎಂಬ ವರ್ಗಭೇದವಿಲ್ಲದ, ಒಂದೇ ಸಾಮಾಜಿಕ ರೀತಿಯ ಐಕಮತ್ಯವುಳ್ಳ ಇಸ್ಲಾಂ ಸಂಸ್ಕೃತಿ ನಿಸ್ಸಂದೇಹವಾಗಿ ಸಂಘಜೀವನದ ರೀತಿ ಯದು. ಈಚಿಗೆ ಈ ವರ್ಗಕ್ಕೆ ಸೇರಿದವರು ನಾಜಿಗಳು, ಫ್ಯಾಸಿಸ್ಟರು. ಈ ಜನಕ್ಕೆ ತಮ್ಮ ಗುಂಪು-ಬಣ ಒಂದೇ ಮುಖ್ಯ. ತಮ್ಮ ಬಣದ ಹೊರಗಿನವರ ಬಗ್ಗೆ ವಿಶೇಷ ಹಿಂಸಾಭಾವನೆ. ಆದರೂ ಅವರ ಮುಖ್ಯ ಲಕ್ಷಣ ಸಂಘಜೀವನ. ತಮ್ಮ ಗುಂಪಿನ ಜನಕ್ಕೆ ತಾವು ಸಲ್ಲಿಸಬೇಕಾದ ಕರ್ತವ್ಯದ ಬಗ್ಗೆ ಅವರಿಗೆ ಬಹಳ ಸೂಕ್ಷ್ಮ, ಉನ್ನತ ದೃಷ್ಟಿ. ಇಡೀ ಗುಂಪಿನ, ಸಂಸ್ಥೆಯ ಹಿತಕ್ಕಾಗಿ ಪ್ರತಿಯೊಬ್ಬನೂ ತನ್ನ ವ್ಯಕ್ತಿತ್ವವನ್ನು ಅದರಲ್ಲಿ ವಿಲೀನಗೊಳಿಸುತ್ತಾನೆ.

ಪ್ರಗತಿಪೂರ್ಣ ಅಧ್ಯಾತ್ಮ ಹಂತ: ಇಲ್ಲಿ ಕೇವಲ ತಮ್ಮ ಗುಂಪಿಗಷ್ಟೇ ಅಲ್ಲ, ಇಡೀ ಜೀವಲೋಕಕ್ಕೇ ತಾವು ಸಲ್ಲಿಸಬೇಕಾದ ಋಣವಿದೆಯೆಂಬ ಭಾವನೆ ತುಂಬಿರುತ್ತದೆ. ಸಾಧಾರಣವಾಗಿ ಎಲ್ಲ ಧರ್ಮಗಳೂ ಈ ಹಂತವನ್ನೇರಲು ಸನ್ನೆಕೋಲು ಇದ್ದಂತೆ. ನೆರೆಹೊರೆಯಲ್ಲಿ ವಿಶ್ವಾಸ, ದೀನ ಸೇವೆಗಳೇ ಎಲ್ಲಾ ಧರ್ಮಗಳು ತಿಳಿಸುವ ಸಂದೇಶ. ಮನುಷ್ಯ ದೇವರ ದಾರಿ ಬಿಟ್ಟು ಅಡ್ಡತುಳಿದು ಪಾಪ ಮಾಡಿದರೆ ಹೇಗೆ ನರಕ



ಜೀವ ವಿಕಾಸದ ಬಗೆ
ಪ್ರಕೃತಿ
ಅಶಾಶ್ವತ – ವಿನಾಶಕ
ಶಾಶ್ವತ – ನಿರ್ಮಾಪಕ
ಸರ್ವಕಲ್ಯಾಣ ಪರಹಿತ ಭಾವಾಭಾವ
ಕೇವಲ ಅಧಿಕಾರ ಪ್ರಧಾನ
ಸರ್ವ ಕಲ್ಯಾಣ – ಜಗದ್ಧಿತಭಾವ
ಕರ್ತವ್ಯ ಪ್ರಧಾನ
ಮನುಷ್ಯ ಸಹಿತ ಸಮಸ್ತ ಪ್ರಾಣಿವರ್ಗ
ಸುಸಂಸ್ಕೃತ ಮನುಷ್ಯ
ಪರೋಪ ಜೀವಿ
ಪರಾಪಹಾರಿ
ಪ್ರಯತ್ನಶೀಲ
ಸಂಘಜೀವಿ
ಸಂಘಜೀವಿ
ಪರಹಿತಕಾರಿ
ದುಡಿತ ಶೂನ್ಯ
ದುಡಿತ ಶೂನ್ಯ
ದುಡಿತ–ಹಂಚಿಕೆ
ಲಾಭದಯೋಚನೆಯೇ
ದುಡಿತಕ್ಕಿಂತ ಹೆಚ್ಚುಲಾಭ
ಪಡೆದುದಕ್ಕಿಂತ ಹೆಚ್ಚು
ಇಲ್ಲದ ಸೇವೆ
ಯೋಜನಕಾರಿಗೇ ಸಾವು
ದುಡಿತ



ಜಗದ್ಧಿತಕ್ಕಾಗಿ ದುಡಿಯುತ್ತಿರುವ ವಿಜ್ಞಾನಿ

ಭಾಜನನಾಗುತ್ತಾನೆಂಬುದನ್ನು ಧರ್ಮಗಳು ತಿಳಿಸುತ್ತವೆ. ಆಸೆಯ ಮಾಯಾಜಾಲದ ಬಗ್ಗೆ, ಕ್ಷಣಿಕವಾದ ಪ್ರಾಪಂಚಿಕ ಸುಖಕ್ಕೆ ಆಸೆಗೊಂಡು ನಮ್ಮ ಇಚ್ಛಾಬಲವನ್ನು ಅದಕ್ಕೆ ಉಪಯೋಗಿಸುವುದರ ಬಗ್ಗೆ ಎಚ್ಚರಿಕೆ ಕೊಡುತ್ತವೆ.

ಈ ಸಾಮಾಜಿಕ ವರ್ಗಕ್ಕೆ ದೃಷ್ಟಾಂತವಾಗಿ ತೋರಿಸಬಹುದಾದ ವಿಸ್ತಾರವಾದ ಗುಂಪು ಯಾವುದನ್ನೂ ನಾವು ಇನ್ನೂ ನಿರ್ಮಿಸಿಲ್ಲ. ಹಿಂದಿನ ಬ್ರಾಹ್ಮಣದ ವರ್ಣದ ಕಲ್ಪನೆ ಈ ಹಂತದ್ದೇ ಆದರೂ ಈಗಿನ ಹೆಸರಿಗೆ ಮಾತ್ರ ಬ್ರಾಹ್ಮಣ ಜಾತಿಗೂ ಆ ಆದರ್ಶಕ್ಕೂ ಭೂಮ್ಯಾಕಾಶಗಳ ಅಂತರ.

ಗಾಂಧೀಜೀ ತಮ್ಮ ಸರ್ವ ಶಕ್ತಿಯಿಂದಲೂ ಮುನ್ನುಗ್ಗಿ ನಡೆಯುತ್ತಿರುವುದು ಈ ಹಂತವನ್ನು ಮುಟ್ಟಲಿಕ್ಕೆ. ಅವರು ನಿರ್ಮಿಸಿದ ಅಖಿಲ

ಭಾರತ ಚರಖಾಸಂಘ, ಅಖಿಲಭಾರತ ಗ್ರಾಮೋದ್ಯೋಗ ಸಂಘ, ಇತ್ಯಾದಿ ಗಳೆಲ್ಲವೂ ಆ ಧ್ಯೇಯವನ್ನು ದಿನಜೀವನದಲ್ಲಿ ವ್ಯಾವಹಾರಿಕವಾಗಿ ರೂಪಿಸುವ ಪ್ರಯತ್ನ. ಅವರು ಸಫಲರಾದರೆ ಅಹಿಂಸೆಯು ಶಾಶ್ವತ ಅರ್ಥ ವಿಧಾನ ಸ್ಥಿರವಾಗಿ, ಸ್ಥಿರಶಾಂತಿಯು ನಾಗರಿಕತೆ ನೆಲೆಗೊಂಡು, ರಾಮ ರಾಜ್ಯ ಸ್ಥಾಪನೆಯಾದೀತು.

---

## ೮. ವಿವಿಧ ಮೌಲ್ಯಗಳು

ಗೊತ್ತಿದ್ದುದಕ್ಕೆ ಹೋಲಿಸಿ ಗೊತ್ತಿಲ್ಲದುದನ್ನು ಅರಿತುಕೊಳ್ಳುವುದು ವಾಡಿಕೆ. ಬೇರೆ ಬೇರೆ ಪದಾರ್ಥಗಳನ್ನು ಬೇರೆ ಬೇರೆ ಬಗೆಯಲ್ಲಿ ಖಚಿತ ಪಡಿಸುತ್ತೇವೆ. ಕೆಲವನ್ನು ಎಣಿಸುತ್ತೇವೆ, ಕೆಲವನ್ನು ಅಳತೆಮಾಡು ತ್ತೇವೆ, ಕೆಲವನ್ನು ತೂಕಮಾಡುತ್ತೇವೆ. ಕಬ್ಬಿಣ, ಬೆಲ್ಲ ಇಂಥ ಪದಾರ್ಥ ಗಳನ್ನು ಮಣ, ಟನ್ನು ಹೀಗೆ ತೂಕಮಾಡುತ್ತೇವೆ. ಮರವನ್ನು ಘನ ಅಡಿಗಳಲ್ಲಿ ಅಳತೆಮಾಡುತ್ತೇವೆ. ಗಳಗಳನ್ನು ಎಣಿಸುತ್ತೇವೆ. ಬಟ್ಟೆಯನ್ನು ಗಜಕಡ್ಡಿಯಿಂದ ಅಳೆಯುತ್ತೇವೆ. ಕಾಗದವನ್ನು ರೀಮು ಗಟ್ಟಲೆ, ಬೀಡಿ ಸಿಗರೇಟನ್ನು ಪೊಟ್ಟಣ-ಪೆಟ್ಟಿಗೆಗಳ ಲೆಕ್ಕದಲ್ಲಿ, ಸೀಮೆ ಯೆಣ್ಣೆಯನ್ನು ಸೇರು-ಪಾವುಗಳ ಅಳತೆಯಲ್ಲಿ, ಹೀಗೆ ನಾನಾ ಬಗೆಯಲ್ಲಿ ಅವುಗಳ ಪ್ರಮಾಣವನ್ನು ಖಚಿತಪಡಿಸಿಕೊಳ್ಳುತ್ತೇವೆ. ಪ್ರತಿಯೊಂದು ವಿಧಾನಕ್ಕೂ ಒಂದು ನಿಶ್ಚಿತ ಪ್ರಮಾಣ-ಪದ್ಧತಿಯಿದೆ. ಆ ಅಳತೆ ತೂಕ ಎಣಿಕೆ ಎಲ್ಲವೂ ಸ್ಪಷ್ಟವಾಗಿ ನಿಶ್ಚಯವಾಗಿದೆ. ಎಲ್ಲರಿಗೂ ಅದು ಮಾನ್ಯ. ಮಂಡಿಯೊಳಕ್ಕೆ ಹೋಗಿ ಯಾರೂ ಸಾವಿರ ಗೋಧಿಕಾಳನ್ನು ಕೊಡಿ ಎಂದು ಕೇಳರು.

ಪದಾರ್ಥಗಳಿಗೂ ನಮಗೂ ಏನು ಸಂಬಂಧ ಎಂದು ಆಲೋಚಿಸಿ ದಾಗ ಅದು ಸ್ವಾರ್ಥ. ಒಂದು ಧ್ಯೇಯಕ್ಕೆ ಇವು ಸಹಾಯಕಾರಿಯೆ ಎಂಬ ಆಲೋಚನೆ ನಿಸ್ವಾರ್ಥ. ಪ್ರಾಣಿಗಳೆಲ್ಲ ತಮ್ಮ ಪಾಡಿಗೆ ತಾವು ಕೆಲಸಮಾಡುತ್ತವೆ. ಇದಿರಿಗಿನ ಪದಾರ್ಥಗಳನ್ನು ತಾವು ಹೇಗೆ ಉಪ

ಯೋಗಿಸಿಕೊಳ್ಳಬೇಕು ಎಂಬುವೇ ಅವುಗಳ ಯೋಚನೆ. ಇದು ಬರೀ ಸ್ವಾರ್ಥ. ಅವಕ್ಕೆ ಜಗದ್ಹಿತವ ಯೋಚನೆಯೇ ಇಲ್ಲ. ಅದೇ ರೀತಿ ಆದಿಮಾನವರಿಗೆ ಪರಹಿತವ ಮೂಲ್ಯಗಳು ಬೇಕಿರಲಿಲ್ಲ. ಸುಸಂಸ್ಕೃತನಾದ ಪ್ರಗತಿಪರ ಮನುಷ್ಯನಿಗೆ ಮಾತ್ರ ಅನಾಸಕ್ತ ಅಥವಾ ನಿಸ್ವಾರ್ಥ ದೃಷ್ಟಿ ಸಾಧ್ಯ. ಮನುಷ್ಯ ಯಾವ ಮೂಲ್ಯಗಳನ್ನು ತನ್ನ ಜೀವನದಲ್ಲಿ ಉಪಯೋಗಿಸುತ್ತಾನೋ ಅದೇ ಅವನ ಲಕ್ಷಣವನ್ನು ತಿಳಿಸುತ್ತದೆ ಎನ್ನಬಹುದು.

## ವೈಯಕ್ತಿಕ-ಸ್ವಾರ್ಥಮಯ ಮೂಲ್ಯಗಳು

**ಮೂಲ್ಯಗಳ ಮಾದರಿಗಳು:** ಬಾಳಿನ ನಾನಾ ರಂಗಗಳಲ್ಲಿ ನಾವು ಹಲವಾರು ಜನರ ಬಗ್ಗೆ, ವಿಷಯಗಳ ಬಗ್ಗೆ ಕೆಲವು ಅಭಿಪ್ರಾಯಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಬಾವಿಯ ನೀರು ಪರಿಶುದ್ಧ ಎನ್ನುತ್ತೇವೆ. ಒಂದು ಹೂ ಅಂದವಾಗಿದೆ ಎನ್ನುತ್ತೇವೆ, ಒಬ್ಬನ ಗುಣ ಉದಾತ್ತ ಎನ್ನುತ್ತೇವೆ. ಹೀಗೆ ತೀರ್ಮಾನಿಸಿ ಹೇಳಿದಾಗ ನಾವು ಏನೋ ಕೆಲವು ಅಳತೆ, ತೂಕ ಮಾಡಿದೇವೆ ಎಂದರ್ಥ. ಯಾವಾಗಲೂ ಸರಿಯಾಗಿಯೆ ತೀರ್ಮಾನಿಸುವವನನ್ನು ವಿವೇಕಶಾಲಿ, ಸರಿಯಾದ ಪ್ರಮಾಣಬದ್ಧವಾದ ತುಲನೆ ಮಾಡುವ ವಿವೇಕ ಉಳ್ಳವನು ಎನ್ನುತ್ತೇವೆ. ಆ ತುಲನೆಯೆ ವಿವೇಕ. ಈ ಅಳತೆಗಳು ಭೌತ, ಮಾನಸಿಕ ಅಥವಾ ಸಾಂಸ್ಕೃತಿಕ, ಆಧ್ಯಾತ್ಮಿಕ ಎಂದು ಮೂರು ಬಗೆ. ಇದೇ ತ್ರಿವಿಧ ವಿವೇಕ.

ವ್ಯಾಪಾರ ಮಾಡಿದರೆ ಈ ಪದಾರ್ಥದಿಂದ ಎಷ್ಟು ಲಾಭ ಬರುತ್ತದೆ ಎಂಬ ವಿವೇಕ ವರ್ತಕನದು. ಹೊಟ್ಟೆಗಿಲ್ಲದೆ ಬಡವನಿಗೆ ಈ ಪದಾರ್ಥ ತನ್ನ ಹಸಿವನ್ನು ಹಿಂಗಿಸೀತೆ, ಆ ಮೈಗೆ ಬಟ್ಟೆಯಾದೀತೆ ಎಂಬ ಅಳತೆ ಮುಖ್ಯ. ಕಲಾವಿದನಿಗೆ ಅಂದಚೆಂದದ ಅಳತೆಯ ಮೇಲೇ ಕಣ್ಣು.

**ಕಾಲ, ಕೀರ್ತಿ, ಸಂಗ್ರಹಗಳ ಅಳತೆ:** ಕೈರೋ ವಸ್ತುಸಂಗ್ರಹಾಲಯದ ಕೆಲಸಗಾರನಿಗೆ ಎಲ್ಲಕ್ಕೂ ಕಾಲದ ಅಳತೆಯೇ. ತುತಖಾಮೇನನ ಈ ದೇಹ ಇಷ್ಟು ಸಾವಿರ ವರ್ಷ ಪುರಾತನವಾದುದು ಎನ್ನುತ್ತಾನೆ. ಇದು ಇಂಥ ಕಾಲದ್ದು ಎಂದು ಹೇಳುತ್ತಾನೆ. ವಸ್ತುಸಂಗ್ರಹಾಲಯ

ವನ್ನು ನೋಡಲು ಬಂದವರು ಆ ಪದಾರ್ಥಗಳ ಪುರಾತನತೆಯನ್ನು ಅರಿತುಕೊಳ್ಳಲಿ ಎಂದು ಅವನ ಆಸೆ.

ರೋಮಿನಲ್ಲಿ ಫ್ಲಾರೆನ್ಸಿನಲ್ಲಿ ಭಿತ್ತಿಚಿತ್ರಗಳನ್ನು ತೋರಿಸಿ ಇದು ಮೈಕೆಲ್ ಏಂಜಿಲೋದು, ಇದು ಇಂಥವರದು ಎಂದು ಹೇಳಿ ಅವು ಉತ್ತಮ ಚಿತ್ರಗಳೆಂದು ತಿಳಿಸುತ್ತಾನೆ.

ಪ್ಯಾರಿಸ್ಸಿನವರಿಗೆ ತಾವು ಉತ್ತಮ ಸೌಂದರ್ಯೋಪಾಸಕರು, ಅತ್ಯುತ್ತಮ ಸಾಹಿತ್ಯ ಕಲೆ, ಸುಂದರವಾದ ವನ-ತೋಟಗಳೆಲ್ಲ ತಮ್ಮಲ್ಲಿವೆ ಎಂಬ ಹೆಮ್ಮೆ.

ಬ್ರಿಟಿಷ್ ವಸ್ತುಸಂಗ್ರಹಾಲಯಕ್ಕೆ ಹೋದರೆ ಅಲ್ಲಿ ಚೀನಾ, ಭಾರತ, ಪರ್ಷಿಯಾ, ಪೆರುಗಳಿಂದ ತಂದಿಟ್ಟ ಅಪೂರ್ವ ವಸ್ತುಗಳನ್ನು ತೋರಿಸುತ್ತಾರೆ. ಜಗತ್ತಿನ ಮೂಲೆಮೂಲೆಗಳಿಂದ ಆಯ್ದು ತಂದ ಬ್ರಿಟಿಷರ ಸಂಗ್ರಹಬುದ್ಧಿಗೆ ಅದು ಗುರುತು.

ನ್ಯೂಯಾರ್ಕಿನ ಬೀದಿಯಲ್ಲಿ ನಿಂತು ಮುಗಿಲು ಮುಟ್ಟುವ ಆ ಕಟ್ಟಡಗಳ ತುದಿಯನ್ನು ನೋಡೋಣವೆಂದು ತಲೆಯೆತ್ತಿದರೆ ಮೇಲಿನಿಂದ ಧ್ವನಿವರ್ಧಕ ಯಂತ್ರ ಈ ಕಟ್ಟಡ ಕಟ್ಟಲು ಆದ ವೆಚ್ಚ ಇಷ್ಟು ಎಂದು ಕೋಟಿಗಟ್ಟಲೆ ರೂಪಾಯಿಗಳ ಸಂಖ್ಯೆಯನ್ನು ಒದರಿ ಹೇಳುತ್ತದೆ. ದಟ್ಟ ದರಿದ್ರನಾದ ಪರದೇಶಿಗೆ ಅಲ್ಲಿ ಕಾಣುವುದು ಅತಿ ಪುರಾತನತೆ, ಶಿಲ್ಪಿ-ಚಿತ್ರಕಾರನ ಅಖಂಡ ಕೀರ್ತಿ, ವಸ್ತು ಸೌಂದರ್ಯ, ಪದಾರ್ಥದ ಅಪೂರ್ವತೆ ಅಲ್ಲ; ಅಪಾರ ಸಂಪತ್ತಿನ ವೈಭವ.

ಯಾವುದರಲ್ಲೂ ಒಂದೇ ಮೂಲ್ಯ, ಒಂದೇ ಅಳತೆ ಇಲ್ಲ. ಆಯಾ ಸಂದರ್ಭದಲ್ಲಿ ಯಾವ ಅಳತೆಗೆ, ಯಾವ ಬೆಲೆಗೆ ಪ್ರಾಧಾನ್ಯ ಕೊಡುತ್ತಾರೋ ಅದಕ್ಕೆ ಹೆಚ್ಚು ಗಮನ ಕೊಟ್ಟು ತೋರಿಸುತ್ತಾರೆ. ತಾಜಮಹಲನ್ನು ನೋಡಲು ಹೋದ ಪ್ರವಾಸಿ ಅದರ ಅಮೃತಶಿಲೆಯ ಗುಣವನ್ನು ಹೊಗಳುವುದಿಲ್ಲ. ಬೇರೆ ಕಡೆ ಅದಕ್ಕಿಂತ ಉತ್ತಮ ಅಮೃತಶಿಲೆಯಿದ್ದೀತು. ತಾಜಮಹಲಿನ ಶಿಲ್ಪಿ ಯಾರೋ ಅವನಿಗೆ ಗೊತ್ತೇ ಇಲ್ಲದಿರಬಹುದು. ಆ ಗಂಭೀರ ಪ್ರಾಸಾದದ ಪುರಾತನತೆಯೂ ಬೆರಗುಗೊಳಿಸುವಂಥದಲ್ಲ. ಆ ಮಹಲನ್ನು ಆ ಪರಿಸರ ಸನ್ನಿವೇಶಗಳಲ್ಲಿ ಕಂಡಾಗ

ಮನಸ್ಸಿನ ಮೇಲೆ ಆಗುವ ಪರಿಣಾಮ ಅದನ್ನು ಸಹಜವಾಗಿಯೆ ಮೆಚ್ಚಿ ಕೊಳ್ಳುವಂತೆ ಮಾಡುತ್ತವೆ. ಅವರ ಗುಣಗಳನ್ನು ಯಾರೂ ನಿಂತು ಹೊಗಳಬೇಕಾಗಿಲ್ಲ.

ಒಬ್ಬ ಚಿನಿವಾಲನ ಅಂಗಡಿಯಲ್ಲಿ ವಜ್ರ ಕಟ್ಟಿದ ಬಂಗಾರದುಂಗುರ ವಿವೆ. ಅವರ ಬೆಲೆ ಕಟ್ಟುವ ರೀತಿಗೂ ಮೇಲಿನ ದೃಷ್ಟಾಂತಗಳಲ್ಲಿ ಬೆಲೆ ಕಟ್ಟುವ ರೀತಿಗೂ ಬಹಳ ವ್ಯತ್ಯಾಸವಿದೆ. ಒಬ್ಬ ಪ್ರಸಿದ್ಧ ಚಿತ್ರಕಾರ ಬರೆದ ಚಿತ್ರದ ಬೆಲೆ ಅದಕ್ಕೆ ಹಿಡಿಸಿದ ಬಣ್ಣ-ಬಟ್ಟೆ, ಅದರ ಚೌಕಟ್ಟು ಗಳ ವೆಚ್ಚವಲ್ಲ. ತಂದೆ ಮೆಟ್ಟುತ್ತಿದ್ದ ಪಾದುಕೆ, ತಾಯಿ ತೊಡುತ್ತಿದ್ದ ಹಳೇ ಪೆಟ್ಟು ಭಾವುಕರಾದ ಮಕ್ಕಳಿಗೆ ಅಮೋಘವಾದ ಸೊತ್ತು. ರಾಮನ ಪಾದುಕೆಗೆ ಭರತ ತೋರಿಸಿದ ಗೌರವವನ್ನು ನೋಡಿ. ಈ ಬೆಲೆ ಗಳೆಲ್ಲ ಪೇಟೆಯ ಧಾರಣೆಯ ಬೆಲೆಗಳಲ್ಲ. ಆಯಾ ವ್ಯಕ್ತಿಗೆ, ಅವನ ಭಾವನೆಗೆ ಅನುಸಾರ ಅದಕ್ಕೆ ಬೆಲೆ.†

ವೈಯಕ್ತಿಕ, ಸ್ವಾರ್ಥಮಯ ಮೂಲ್ಯಗಳಲ್ಲಿ ಎಲ್ಲಾ ಪದಾರ್ಥ ಗಳನ್ನೂ ಎಲ್ಲರೂ ಒಂದೇ ರೀತಿ ಒಂದೇ ಕಾವಿನಿಂದ ಬಯಸುವುದಿಲ್ಲ. ಒಬ್ಬೊಬ್ಬರಿಗೇ ಒಂದೊಂದು ಬೆಲೆ. ಹಣ ಸರ್ವಸಾಮಾನ್ಯವಾದ ಬೆಲೆ ಯುಳ್ಳ ಪದಾರ್ಥ. ರೂಪಾಯಿ ಎಲ್ಲರಿಗೂ ರೂಪಾಯಿಯೇ. ಆದರೂ ಅದರಿಂದ ಒಬ್ಬೊಬ್ಬನಿಗೂ ಆಗುವ ತೃಪ್ತಿ ಮಾತ್ರ ಬೇರೆ ಬೇರೆ. ರೈತನ ಕೈಯಲ್ಲಿ ಒಂದು ರೂಪಾಯಿ ಇದ್ದರೆ ಅದು ಅವನಿಗೆ ಅವನ ಕುಟುಂಬಕ್ಕೆ ಒಂದು ದಿನದ ಅನ್ನ. ಅದೇ ರೂಪಾಯಿ ಪಟ್ಟಣದಲ್ಲಿ ಒಬ್ಬ ಗುಮಾಸ್ತನ ಕೈಯಲ್ಲಿದ್ದರೆ ಒಂದು ಸಿನಿಮಾ ನೋಡಲಿಕ್ಕೆ ಆಯಿತು. ಒಬ್ಬ ಹಣ ಗಾರನ ಕೈಯಲ್ಲಿದ್ದರೆ ಆ ರೂಪಾಯಿ ಹೋಟೆಲು ಮಾಣಿಗೋ ಬಾಡಿಗೆ

---

† 'ತಾಯಿ ಸೊಟ್ಟಸೊಟ್ಟನಾಗಿ ನಾಲ್ಕು ಸಾಲು ಕಾಗದದ ಮೇಲೆ ಬರೆದು ಕಳಿಸಿದಳು ಎನ್ನಿ. ಇನ್ನೊಬ್ಬರು ಐವತ್ತು ಹಾಳೆ ಏನಾದರೂ ಬರೆದು ಅರ್ಥ ಸೇರು ತೂಕದಷ್ಟು ಕಾಗದ ಕಳಿಸಿದರೆ ಅದರ ತೂಕ ಹೆಚ್ಚಾಯಿತೆ ? ತಾಯಿ ಗೀಚಿದ ನಾಲ್ಕು ಸಾಲು ಭಾವನಾ ಭರಿತ, ಪವಿತ್ರ, ಅಮೌಲ್ಯ. ಅದರ ಬೆಲೆ ಉಳಿದ ಕಾಗದಕ್ಕೆ ಬಂದೀತೆ ?'

—ವಿನೋಬಾ : ಗೀತಾಪ್ರವಚನ. ಪು. ೨೬

ಮೋಟಾರು ನಡೆಸುವವನಿಗೋ ಇನಾಂ ಕೊಡಲು ಆಯಿತು. ಇದ ರಿಂದಲೇ ಅರ್ಥವಾಗುತ್ತದೆ-ಭಾಗ್ಯವಂತನ ಕೈಯೊಳಗಿದ್ದ ರೂಪಾಯಿ ಬಡವನ ಕೈಗೆ ಬಂದರೆ ಅದಕ್ಕೆ ತೃಪ್ತಿ ಕೊಡುವ ಸಾಮರ್ಥ್ಯ ಸಹಜ ವಾಗಿಯೆ ಹೆಚ್ಚಿತು. ತಿರುಗುಮುರುಗಾದರೆ, ಬಡವನ ಕೈಯ ರೂಪಾಯಿ ಭಾಗ್ಯವಂತನ ಕೈಗೆ ಹೋದರೆ, ಅದರ ತೃಪ್ತಿ ನೀಡುವ ಸಾಮರ್ಥ್ಯ ಕಡಮೆ ಯಾಗುತ್ತದೆ.

ಒಬ್ಬನೇ ಮನುಷ್ಯನಿಗಾದರೂ ಒಂದು ಪದಾರ್ಥ ಸದಾ ಕಾಲದಲ್ಲೂ ಒಂದೇ ರೀತಿಯ ತೃಪ್ತಿಯನ್ನು ಕೊಡದು. ಒಬ್ಬ ಹುಡುಗನ ಬಳಿ ಏಳು ಜಿಲೇಬಿ ಇವೆ. ಎಲ್ಲಾ ಜಿಲೇಬಿಗಳೂ ಒಂದೇ ತೂಕ, ಒಂದೇ ರಸ-ಸರಿ ಸಮಾನ. ಆದರೆ ಒಂದು ಜಿಲೇಬಿ ಕೊಟ್ಟಷ್ಟು ತೃಪ್ತಿಯನ್ನು ಇನ್ನೊಂದು ಕೊಡಲಾರದು. ಮೊದಲನೆ ಜಿಲೇಬಿ ತಿನ್ನುವಾಗ ಹುಡುಗನಿಗೆ ಬಹಳ ರುಚಿ, ಹಿಡಿಸಲಾರದ ಹರ್ಷ. ಎರಡನೆ ಮೂರನೆಯದನ್ನೂ ಸಂತೋಷ ವಾಗಿಯೆ ಸವಿದಾನು. ಆಮೇಲೆ ಒಂದೊಂದು ಜಿಲೇಬಿ ಹೆಚ್ಚು ತಿನ್ನು ವಾಗಲೂ ಆ ಪದಾರ್ಥದ ರುಚಿ, ಆಸೆ ಕಡಮೆಯಾಗುತ್ತ ಹೋಗುತ್ತದೆ. ಕಟ್ಟಕಡೆಗೆ ಇನ್ನು ಜಿಲೇಬಿ ಬೇಡ ಎಂಬಷ್ಟು ಅಸಹ್ಯವಾಗುತ್ತದೆ. ಎಷ್ಟೆಷ್ಟು ಹೆಚ್ಚು ತಿನ್ನುತ್ತ ಹೋದರೆ ಅಷ್ಟಷ್ಟು ಮಟ್ಟಿಗೆ ಜಿಲೇಬಿಯ ಬೆಲೆ-ಗುಣ ಕಡಮೆಯಾಗಿರುತ್ತದೆ. ಭಾಗ್ಯವಂತನ ರೂಪಾಯಿಯ ಗತಿ ಇದೇ. ಹೆಚ್ಚು ಇದ್ದಷ್ಟೂ ಅದರ ಬೆಲೆ ಇಳಿದುಹೋಗುತ್ತದೆ.

ಹುಡುಗ ಆರು ಜಿಲೇಬಿ ತಿಂದ ಎನ್ನಿ. ಅವನಿಗಿನ್ನು ಜಿಲೇಬಿ ಬೇಡ. ಬಹಳ ಬಾಯಾರಿಕೆಯಾಗಿದೆ. ನೀರು ಬೇಕು. ಇನ್ನೊಬ್ಬ ಹುಡುಗನ ಬಳಿ ಒಂದು ಗಡಿಗೆ ನೀರು ಇದ್ದರೆ ಈ ಜಿಲೇಬಿ ಕೊಡುತ್ತಾನೆ, ಒಂದು ಲೋಟಾ ನೀರು ಕೊಡು ಎಂದು ಕೇಳುತ್ತಾನೆ. ಈ ಏಳನೆ ಜಿಲೇಬಿ ಕೊಡುವ ತೃಪ್ತಿಗಿಂತ ಆ ಲೋಟಾ ನೀರಿನಿಂದ ಅವನಿಗೆ ಸಿಗುವ ತೃಪ್ತಿ ಹೆಚ್ಚು. ಆ ಲೋಟಾ ನೀರು ಅವನಿಗೆ ಮೊದಲನೆಯದು. ಇನ್ನೊಬ್ಬ ಹುಡುಗನಿಗೆ ಹತ್ತನೆಯದು ಇರಬಹುದು. ಒಂದು ಲೋಟಾ ನೀರಿಗೆ ಆ ಏಳನೆ ಜಿಲೇಬಿಯನ್ನು ಕೊಟ್ಟದ್ದು-ಪದಾರ್ಥಗಳ ವಿನಿಮಯ ಅಥವಾ ಅದಲುಬದಲು-ಆ ಇಬ್ಬರು ಹುಡುಗರಿಗೂ ಹೆಚ್ಚು ತೃಪ್ತಿ,

ಹೆಚ್ಚು ಲಾಭ ಕೊಟ್ಟಿತು. ಆ ಇಬ್ಬರು ಹುಡುಗರಿಗೂ ಈ ಅದಲುಬದಲು ಮಾಡಿದ ಮೇಲೆ ಆದ ತೃಪ್ತಿಯನ್ನು ಅಳೆದರೆ, ಪದಾರ್ಥಗಳಲ್ಲಿ ಏನೂ ಹೆಚ್ಚುಕಡಮೆ ಆಗದಿದ್ದರೂ, ಒಂದು ಜಿಲೇಬಿ ಒಂದು ಲೋಟಾ ಸೀರೇ ಆದರೂ, ವಿನಿಮಯದಿಂದ ಬಂದ ತೃಪ್ತಿ-ಸಮಾಧಾನ ಮೊದಲಿಗಿಂತ ಹೆಚ್ಚು. ಎಲ್ಲಾ ವ್ಯಾಪಾರ-ವಾಣಿಜ್ಯಕ್ಕೂ ಇದೇ ಮೂಲ ಸೂತ್ರ. ಕೊಳ್ಳುವವನಿಗೂ ಮಾರುವವನಿಗೂ ಇಬ್ಬರಿಗೂ ಪರಸ್ಪರ ಲಾಭ. ಅವನಿಗೆ ಲಾಭವಾಗಲು ಇವನು ನಷ್ಟಪಡಲಿಲ್ಲ.

**ಸರ್ವಹಿತಕಾರಿ ವಾಸ್ತವ ಪ್ರಮಾಣಗಳು :** ಬರೀ ಹಣಕಾಸು-ಇತರ ಪದಾರ್ಥಗಳ ಲೆಕ್ಕವನ್ನೇ ಹಿಡಿದು ರಚಿಸಿದ ಆರ್ಥಿಕ ವಿಧಾನದಲ್ಲಿ ಕಾಲ ದೇಶಗಳ ವಾಸ್ತವ ದೃಷ್ಟಿಯೆ ಇರದು. ಈ ಕೊರತೆಯಿಂದ ಆಗುವ ಪರಿಣಾಮ ಹಿಂಸೆ-ಸರ್ವನಾಶಗಳ ಸುಳಿ. ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಮನುಷ್ಯ ಸಂಸ್ಕೃತನಾದ ಹಾಗೆಲ್ಲ ಇಂಥ ಅಶಾಶ್ವತ, ಕ್ಷಣಭಂಗುರ, ಅದೂರ ದೃಷ್ಟಿಯ ಪ್ರಮಾಣಗಳನ್ನು ತ್ಯಜಿಸುತ್ತಾನೆ. ನಮ್ಮ ಬೆಲೆಗಳು ಅಳತೆಗಳು ಸ್ವಲ್ಪವಾದರೂ ಶಾಶ್ವತವಾಗಿರಬೇಕೆಂದರೆ, ಇಂದು ಇದ್ದು ನಾಳೆ ಅಳಿದುಹೋಗುವ ನಾವೇ ಅದರ ಅಳತೆಗೋಲು, ಪ್ರಮಾಣ ಆಗ ಬಾರದು. ವೈಯಕ್ತಿಕ ಭಾವನೆಗಳಿಗೆ ಸಿಗದೆ, ಅನಾಸಕ್ತಿಯಿಂದ, ಶಾಶ್ವತ ವ್ಯವಸ್ಥೆಯ ಮೇಲೆ ಆಧಾರಗೊಂಡ ಧ್ಯೇಯ ಬುದ್ಧಿಯಿಂದ, ಅಳತೆ ಮಾಡಿದರೆ ಆ ಅಳತೆ ವಾಸ್ತವ, ಸತ್ಯ, ಪ್ರಾಮಾಣಿಕ ಆಗುತ್ತದೆ. ಅಂಥದನ್ನು ನಂಬಿ ನಡೆಯಬಹುದು. ಅಂಥ ಬೆಲೆ-ಗುಣಗಳನ್ನು ಅವಲಂಬಿಸಿದ ಆರ್ಥಿಕವಿಧಾನ ಶಾಶ್ವತ ಅರ್ಥರಚನೆಗೆ, ಪುರುಷಾರ್ಥಕ್ಕೆ ದಾರಿಮಾಡುತ್ತದೆ.

**ನೈತಿಕ ಪ್ರಮಾಣ :** ನೀತಿಶಾಸ್ತ್ರವನ್ನು ಅನುಸರಿಸುವ ವ್ಯಕ್ತಿ ಜಡ ಪದಾರ್ಥಗಳ ಅಳತೆಯನ್ನು ಉಪಯೋಗಿಸುವುದಿಲ್ಲ. ಒಬ್ಬ ಕಳ್ಳ ಒಂದು ಮಗುವಿನ ಕತ್ತನ್ನು ಹಿಸುಕಿ ಕೊಂದು ಅದರ ಕತ್ತಿನ ಸರವನ್ನು ಒಯ್ದು ಮಾರುತ್ತಾನೆ. ಆ ಘಟನೆಯ ಸುದ್ದಿ ತಿಳಿದರೆ ಯಾರು ತಾನೆ ಆ ಸರವನ್ನು ಕೊಂಡಾರು ? ಆ ಸರ ಅಷ್ಟು ತೊಲೆ ಬಂಗಾರವಲ್ಲ; ಆ ಮಗುವಿನ ಸಾವಿನ ಪಾಪದ ಸಮಸ್ತಭಾರ. ಎಷ್ಟು ಅಗ್ಗವಾಗಿ, ಒಂದು ಕಾಸಿಗೇ

ಆ ಸರವನ್ನು ಕೊಟ್ಟರೂ ಮಕ್ಕಳಲ್ಲಿ ಮಮತೆಯುಳ್ಳ, ಅವರ ಕೊಲೆಗೆ ನಡುಗಿಹೋಗುವ ಯಾವ ಮನುಷ್ಯನೂ ಅದನ್ನು ಕೊಳ್ಳಲಾರ.

ಪೇಟೆಯಲ್ಲಿ ಮಾರಲು ಇಟ್ಟ ಪ್ರತಿಯೊಂದು ಪದಾರ್ಥಕ್ಕೂ ಇಂಥ ನೈತಿಕ ಬೆಲೆ ಇದ್ದೇ ಇದೆ. ಆ ಬೆಲೆಯನ್ನು ಅಸಡ್ಡೆಮಾಡಿ, ವ್ಯಾಪಾರದಲ್ಲಿ ನೀತಿಗೇನು ಸ್ಥಾನ ಎಂದು ತಳ್ಳುವ ಹಾಗಿಲ್ಲ. ಕೆಲಸಗಾರರನ್ನು ಶೋಷಣೆ ಮಾಡಿ, ಗುಲಾಮರಾಗಿ ದುಡಿಸಿ ಉತ್ಪತ್ತಿಮಾಡಿದ ಪದಾರ್ಥಗಳಿಗೆ ಆ ಪಾಪ, ಅಪರಾಧ ಅಂಟಿಕೊಂಡಿದೆ. ಆ ದುಷ್ಟತನದ ಬಣ್ಣ ಅವಕ್ಕೆ ಏರಿದೆ. ಆ ಪದಾರ್ಥಗಳನ್ನು ಕೊಂಡರೆ ನಾವು ಆ ದುಷ್ಟತನ, ಪಾಪ, ಅಪರಾಧಕ್ಕೆ ಭಾಗಿಗಳು. ಆ ಪರಿಸ್ಥಿತಿಯನ್ನು ನಾವೇ ನೀರೆರೆದು ಕಾಪಾಡಿದಂತೆ. ಆದ್ದರಿಂದ ಒಂದು ಕಾಸಿನ ವ್ಯಾಪಾರವನ್ನೇ ಮಾಡಿದರೂ ನಾವು ಮಾಡಿದ ವ್ಯಾಪಾರ ನಮಗೆ ಇಷ್ಟವಿಲ್ಲದ, ನಾವು ವಿರೋಧಿಸಲೂ ಬಹುದಾದ, ಪರಿಸ್ಥಿತಿಗೆ ಪುಷ್ಟಿಕೊಡುವ ಅಪರಾಧವಾಗದಂತೆ ನೋಡಿ ಕೊಳ್ಳಬೇಕು. ಅದು ಕರ್ತವ್ಯ. ಅದು ಅರ್ಥ–ಧರ್ಮ.

ಸಾಮಾಜಿಕ ಪ್ರಮಾಣಗಳು : ಸಮಾಜವೇ ತನಗೆ ಆದ ಪ್ರಯೋ ಜನವನ್ನು ಗುರುತಿಸುತ್ತದೆ. ಅಳೆದು ತೂಗಿ ನೋಡುತ್ತದೆ. ಬೇರೆ ಬೇರೆ ವರ್ಗಗಳು ಸಮಾಜಕ್ಕೆ ಮಾಡುವ ಸೇವೆಗೆ ತಕ್ಕಂತೆ ಸಮಾಜ ಅವರವರಿಗೆ ಬೇರೆ ಬೇರೆ ಸ್ಥಾನಗಳನ್ನು ಕೊಟ್ಟು ಆಯಾ ಬೆಲೆಗಳನ್ನು ಗುರುತಿಸುತ್ತದೆ.

ಉದಾಹರಣೆಗೆ : ಹಿಂದಿನ ಚತುರ್ವರ್ಣಗಳ ಗೌರವ ಆ ವರ್ಗಗಳು ಸಮಾಜಕ್ಕೆ ಸಲ್ಲಿಸಿದ ಸೇವೆಯಿಂದ ಬಂದದ್ದು. ಕೇವಲ ತಾನು ತನ್ನದು ಎಂಬ ಯೋಚನೆಯಲ್ಲೇ ಸದಾ ಮುಳುಗಿ ತನ್ನ ಸ್ವಂತ ತೃಪ್ತಿಗಾಗಿಯೆ ದುಡಿಯುವವನು ಶೂದ್ರ. ಅವನು ಸಾರ್ವಜನಿಕ ಗಮನಕ್ಕೇ ಬರುತ್ತಿರ ಲಿಲ್ಲ. ತನಗಾಗಿ ಧನಸಂಗ್ರಹ ಮಾಡಿಕೊಳ್ಳಲು ಹೊರಟು ಆ ಕಾರ್ಯದಲ್ಲಿ ಪ್ರಾಸಂಗಿಕವಾಗಿ ಸಮಾಜಕ್ಕೆ ಅಲ್ಪ ಸೇವೆ ಮಾಡಿದರೂ ವೈಶ್ಯನಿಗೆ, ಒಂದು ಮೆಟ್ಟಲು ಮೇಲೆ ಎಂದರೂ ಕೂಡ, ಅಷ್ಟೇ ಸಾರ್ವಜನಿಕ ಆದರ್ಶ. ತನ್ನ ಆಶ್ರಯದಲ್ಲಿರುವ ಪ್ರಜೆಯ ಸಂರಕ್ಷಣೆಯೇ ತನ್ನ ಮುಖ್ಯ ಕರ್ತವ್ಯ, ತನ್ನ ಪ್ರಾಣಕ್ಕಿಂತ ಆ ಕರ್ತವ್ಯ ಹೆಚ್ಚು ಎಂದು ಭಾವಿಸಿದ ಕ್ಷತ್ರಿಯನಿಗೆ ಸಾರ್ವ

ಜನಿಕ ಮನ್ನಣೆ, ಉನ್ನತ ಸ್ಥಾನ ಇತ್ತು. ಶರೀರಕ್ಕೆ ಎಷ್ಟೇ ಬಾಧಕ ವಾದರೂ ಆದರ್ಶಜೀವನವನ್ನು ನಡೆಸಲು ಪ್ರಯತ್ನಿಸುತ್ತಿದ್ದ ಬ್ರಾಹ್ಮಣನ ಅಡಿಗೆ ಕ್ಷತ್ರಿಯರಾಜರೇ ಮೊದಲಾಗಿ ಎಲ್ಲರೂ ವಂದಿಸುತ್ತಿದ್ದರು. ಸಾವಿರಾರು ವರ್ಷಗಳ ಹಿಂದೆ ನಮ್ಮ ದೇಶ ಸಾಧಿಸಿಕೊಂಡ ಸಾಂಸ್ಕೃತಿಕ ಪ್ರಮಾಣಗಳಿವು. ಒಂದು ಗಳಿಗೆ ಕಣ್ಣು ಕುಕ್ಕಿಸಿ ಮರುಗಳಿಗೆ ಮಣ್ಣಾಗುವ ಜಡಸಂಪತ್ತಿಗೆ, ಧನಕ್ಕೆ ಆಸೆಬಿದ್ದು ಈಗ ಈ ಪ್ರಮಾಣಗಳನ್ನು ಮೂಲ್ಯಗಳನ್ನು ನಾವು ಕಳೆದುಕೊಂಡಿದ್ದೇವೆ. ನಮ್ಮ ಪುರಾತನರು ನಮಗೆ ನೀಡಿದ ಈ ಉನ್ನತ ಆದರ್ಶಗಳನ್ನು ಮತ್ತೆ ಪಡೆಯಲು ನಾವು ಸರ್ವಶಕ್ತಿಯನ್ನೂ ವಿನಿಯೋಗಿಸಬೇಕು. ಅವನ್ನು ಅನುಸರಿಸಿದಾಗಲೇ ಸ್ಥಿರತೆ, ಶಾಶ್ವತ ವ್ಯವಸ್ಥೆ ಸಂಭವ.

ಆಧ್ಯಾತ್ಮಿಕ ಮೂಲ್ಯ : ಯಹೂದ್ಯರ ಶ್ರೇಷ್ಠ ಪ್ರಭು ದಾವೀದನದು ಒಂದು ಕಥೆಯಿದೆ. ಒಂದು ಸಲ ಅವನ ಬದ್ಧವೈರಿಗಳಾದ ಫಿಲಿಸ್ತೀನರು ಅವನ ರಾಜಧಾನಿ ಬೆತ್ಲೆಹೇಮನ್ನು ಮುತ್ತಿದರು. ದಾವೀದ ದೊರೆ ನಗರದ ಹೊರಗೆ ಬೀಡುಬಿಟ್ಟಿದ್ದ. ತನಗೂ ನಗರಿಗೂ ನಡುವೆ ಶತ್ರುಗಳ ಪಾಳ್ಯ. ತನ್ನ ಶಿಬಿರದಿಂದ ದೊರೆಗೆ ಊರ ಹೊರಗಿನ ಬಾವಿ ಕಾಣಿಸಿತು. ಭಾವನಾವಶನಾಗಿ ದೊರೆ 'ಆಃ, ಆ ನೀರು ಒಂದು ತಂಬಿಗೆ ಕುಡಿದರೆ ಎಷ್ಟು ಹಿತ' ಎಂದ. ದೊರೆಯ ಈ ಬಯಕೆಯನ್ನು ಕೇಳಿದ ಧೀರ ಯೋಧರು ಕೆಲವರು ಅದನ್ನು ತೃಪ್ತಿಪಡಿಸಲು ಜೀವನದ ಹಂಗು ತೊರೆದು ಹೊರಟರು. ಶತ್ರುಶಿಬಿರವನ್ನು ದಾಟಿ ನೀರನ್ನು ತಂದರು. ದಾವೀದನಿಗೆ ಆ ಗಡಿಗೆಯಲ್ಲಿ ಬರೀ ತಣ್ಣೀರು ಕಾಣಲಿಲ್ಲ. ಅದನ್ನು ತರಲು ಹೋದ ವೀರಯೋಧರ ಪ್ರೀಯ ಬಿಸಿನೆತ್ತರು ಕಾಣಿಸಿತು. 'ಈ ನೀರನ್ನು ನಾನು ಹೇಗೆ ಕುಡಿಯಲಿ? ಇದು ನೀರಲ್ಲ, ನನ್ನ ಪ್ರೀತಿಯ ಸೈನಿಕರ ಬಿಸಿನೆತ್ತರು. ಇದನ್ನು ಕುಡಿದರೆ ನನಗೆ ಅದು ಶಾಪವಾಗದೆ? ಪವಿತ್ರವಾದ ಹವಿಸ್ಸೆಂದು ಇದನ್ನು ದೇವರಿಗೇ ಅರ್ಪಿಸುತ್ತೇನೆ' ಎಂದು ಅದನ್ನು ಅಲ್ಲಿಯೆ ಸುರಿದ.

ಇಂಥ ಆಧ್ಯಾತ್ಮಿಕ ಮೂಲ್ಯಗಳ ಮೇಲೆ ನಡತೆ-ಕಾರ್ಯ ಎಷ್ಟು ಮಟ್ಟಿಗೆ ಆಧಾರಗೊಂಡರೆ ನಮ್ಮ ಬಾಳು ಅಷ್ಟುಮಟ್ಟಿಗೆ ಪರಿಶುದ್ಧವಾಗು

ತ್ತದೆ. ಈ ಮೂಲ್ಯ ಸತ್ಯ-ನಿತ್ಯ ಮೂಲ್ಯವಾದುದರಿಂದ ಅದರ ಮೇಲೆ ಕಟ್ಟಿದ ಆರ್ಥಿಕ ರಚನೆ ಸ್ಥಿರ-ಶಾಶ್ವತ ಆಗಿ ಅಹಿಂಸೆಯ ಮೂಲಕ ಮಾನವ ಲೋಕಕ್ಕೆ ಸುಖ-ಶಾಂತಿಗಳನ್ನು ಕೊಟ್ಟೀತು.†




---

## ೬ ಬೆಲೆ ಕಟ್ಟುವಿಕೆ

ನಾವು ಯಾವ ಅಳತೆಯನ್ನು ಬಳಸುತ್ತೇವೋ, ಹೇಗೆ ಬೆಲೆ ಕಟ್ಟುತ್ತೇವೋ, ಅದರ ಪ್ರಭಾವ ನಮ್ಮ ಮೇಲೆ ಬೀಳುತ್ತದೆ. ನಾವು ಉಪಯೋಗಿಸುವ ಪ್ರಮಾಣ-ಅಳತೆಗಳ ಪ್ರಧಾನ ಗುಣ ನಮ್ಮ ಸಂಸ್ಕೃತಿಯಲ್ಲಿ ಇಳಿದುಬರುತ್ತದೆ. ನಮ್ಮ ಮೂಲ್ಯಗಳಿದ್ದಂತೆ ನಮ್ಮ ಸಂಸ್ಕೃತಿ. ಆದ್ದರಿಂದ ನಾವು ಬಹಳ ಎಚ್ಚರಿಕೆಯಿಂದ ನಮ್ಮ ಮೂಲ್ಯಗಳ ನಿರ್ಣಯ ಮಾಡಬೇಕು. ಯಾವ ವಿಧಾನವನ್ನು ಅವಲಂಬಿಸುತ್ತೇವೆಂಬುದು ಬಹಳ ಮುಖ್ಯ.

---

† ವಿನೋಬಾಜಿಯ 'ಗೀತಾಪ್ರವಚನ'-'ಸ್ವರಾಜ್ಯ ಶಾಸ್ತ್ರ'ಗಳನ್ನು ಓದಿದರೆ, ಈ ವಿಷಯ ಇನ್ನೂ ಸ್ಪಷ್ಟವಾಗುತ್ತದೆ.

ಈಜಿಪ್ಟ್, ಬೇಬಿಲೋನ್, ಗ್ರೀಸ್, ರೋಂಗಳ ಪುರಾತನ ನಾಗರಿಕತೆಗಳು ತಮ್ಮ ಕತೆಗಳನ್ನು ಹೇಳುವಂತಿಲ್ಲ. ಕೆಲವು ದಿನ ವೈಭವದಿಂದ ವಿಜೃಂಭಿಸಿ ಬಹು ಬೇಗನೆ ಕಣ್ಮರೆಯಾಗಿ ಹೋದವು. ಸ್ವಾರ್ಥಮಯ ಅಶಾಶ್ವತ ಮೂಲ್ಯಗಳ ಮೇಲೆ ಕಟ್ಟಿದ ನಾಗರಿಕತೆಗಳು ಅವು. ಹಿಂದೆಯೇ ತಿಳಿಸಿದಂತೆ ಗುಲಾಮಗಿರಿಯಿಂದ ಆ ಸಮಾಜರಚನೆಗೆ ಗೆದ್ದಲು ಹಿಡಿದಿತ್ತು. ಸಾಮಂತ ರಾಜರ ಕಪ್ಪ-ಕಾಣಿಕೆಗಳಿಂದ ಕಲುಷಿತ ವಾಗಿತ್ತು. ಗ್ರೀಕರೂ ರೋಮಕರೂ ತಮ್ಮ ಭಾವನಾಮಯ ಸ್ವಾರ್ಥ ಪೂರ್ಣ ಮೂಲ್ಯಗಳ ಗುರುತನ್ನು ತಮ್ಮ ಕಲೆ ಸಾಹಿತ್ಯ ಶಿಲ್ಪಗಳಲ್ಲಿ ಸ್ಥಿರವಾಗಿ ಮೂಡಿಸಿದಾರೆ. ಆ ಗತವೈಭವವನ್ನು ನೆನೆದು ಹಿಗ್ಗಲು ಅವರ ಸಂತಾನಕ್ಕೆ ಇವು ಸಾಧನ. ಅಷ್ಟೇ, ಆ ನಾಗರಿಕತೆಗಳೀಗ ಸಚೇತನ ವಲ್ಲ.

ಇವಕ್ಕೆ ವಿರುದ್ಧವಾಗಿ ಅವುಗಳಷ್ಟೇ ಪುರಾತನ, ಇನ್ನೂ ಪುರಾತನ ಆದ ಚೀನಾ-ಭಾರತೀಯ ನಾಗರಿಕತೆಗಳು ಇಂದಿಗೂ ಸಜೀವವಾಗಿವೆ, ಶಕ್ತವಾಗಿವೆ. ನಿಸ್ವಾರ್ಥ, ವಾಸ್ತವ ಮೂಲ್ಯಗಳ ಮೇಲೆ ಕಟ್ಟಿದ ಇವು ಇಂದಿಗೂ ದೃಢವಾಗಿ, ಶಾಶ್ವತವಾಗಿ ಅಹಿಂಸಾಪೂರ್ಣವಾಗಿ ಬಾಳುತ್ತಿವೆ. ಪೌರ್ವಾತ್ಯರ ಧಾರ್ಮಿಕ ಪ್ರವೃತ್ತಿ, ಪರಲೋಕಪ್ರಿಯತೆಗಳನ್ನು ಈಗಿನ ಕಾಲದ ಬುದ್ಧಿವಂತರು ಹಗುರಾಗಿ ಎಣಿಕಿಸಬಹುದು. ಅದಕ್ಕಾಗಿ ನಾವು ಸಂಕೋಚಪಡಬೇಕಾಗಿಲ್ಲ. ಚಿರತೆ-ಹುಲಿಗಳ ಹಂತವನ್ನು ದಾಟಿ ಚಿರಂತನ ಪ್ರಗತಿಶೀಲ ಮಾನವನಾಗುವ ಪ್ರಯತ್ನ ಅದು. ಈ ನಾಗರಿ ಕತೆಗಳು ಇಷ್ಟು ದೀರ್ಘಕಾಲ ಬದುಕಿ ಉಳಿದಿರುವುದೇ ನಮ್ಮ ಪುರಾತ ನರು ಸ್ಥಿರವಾದ ಸಮಾಜವನ್ನು ಕಟ್ಟಲು ಹಾಕಿದ ದೂರದೃಷ್ಟಿಯ ತಳಹದಿಯ ಮೂಲ್ಯಗಳಿಗೆ ಸಾಕ್ಷಿ. ಅವರು ಹಾಕಿದ ಶಾಶ್ವತತೆ, ಅಹಿಂಸೆ ಗಳ ತಳಹದಿಯ ಮೇಲೆ ನಾವೂ ಮುಂಬರಿಯಬೇಕೆಂದರೆ ನಮ್ಮ ಮೂಲ್ಯ ಗಳೂ ಜಗದ್ಧಿತಕಾರಿಯಾಗಿ ವಾಸ್ತವವಾಗಿರಬೇಕು; ಕೇವಲ ಕ್ಷಣ ಭಂಗುರವಾಗಬಾರದು. ರಾಜಕೀಯ ಸಂಸ್ಥೆಗಳೆಲ್ಲ ಕರಗಿಹೋಗಿ ಭವಿಷ್ಯ ಕ್ಕಾಗಿ ಹಲವು ಯೋಜನೆಗಳಾಗುತ್ತಿರುವ ಈ ಸಮಯದಲ್ಲಿ ನಾವು ಎಚ್ಚರವಾಗಿರಬೇಕಾದುದು ಅಗತ್ಯ.

ದೌರ್ಭಾಗ್ಯ ವಶದಿಂದ ಜಗದ್ರಂಗದಲ್ಲಿ ಈಗ ನಾಯಕ ಪಾತ್ರ ವಹಿಸಿರುವ ಗುಂಪುಗಳು ಕ್ಷಣಭಂಗುರವಾದ ಹಣವನ್ನೇ ಅಳತೆಯಾಗಿಟ್ಟು ಕೊಂಡಿವೆ. ಸಂಪೂರ್ಣವಾಗಿ ಅಲ್ಲದಿದ್ದರೂ ಪ್ರಧಾನವಾಗಿ. ಎಲ್ಲೆಲ್ಲೂ 'ಉನ್ನತ ಜೀವನ', 'ರಾಷ್ಟ್ರೀಯ ವರಮಾನವನ್ನು ಹೆಚ್ಚಿಸುವಿಕೆ', 'ಉತ್ಪಾದನಶಕ್ತಿ-ದಕ್ಷತೆಗಳ ವರ್ಧನ', 'ಆಧುನಿಕ ಕಾಲದ ಸ್ಪರ್ಧೆಯಲ್ಲಿ ಗಿಟ್ಟಿಸುವುದು' ಮುಂತಾದ ಘೋಷಣೆಗಳನ್ನು ಕೇಳುತ್ತೇವೆ. ಲಾಭ, ಬೆಲೆ, ಕೊಳ್ಳುವ ಸಾಮರ್ಥ್ಯ, ಪರದೇಶದ ವ್ಯಾಪಾರಗಳ ಮರಳಿನಲ್ಲಿ ಮನೆ ಕಟ್ಟುವ ಪ್ರಯತ್ನವೇ ಈಗಿನ ಆರ್ಥಿಕ ವಿಚಾರ. ಉಳಿದ ಜೀವಕೋಟಿಗೂ ಮನುಷ್ಯನಿಗೂ ಇರುವ ಭೇದದ ಬಗ್ಗೆ ಕಿಂಚಿತ್ತೂ ವಿಚಾರ ಹರಿಯು ದಾಗಿದೆ. ಮಾನವೀಯ, ಆಧ್ಯಾತ್ಮಿಕ ಪ್ರಮಾಣಗಳ ಬಗ್ಗೆ ಮಾತಾಡಿ ದರೆ ತಿರಸ್ಕಾರಪೂರ್ವಕ ನಗುವ ವಿಪರೀತ ಸ್ವಭಾವ ಬೆಳೆಯುತ್ತಿದೆ. ಆದುದರಿಂದ ಜಾಗರೂಕರಾಗಿರಬೇಕಾದುದು ಅಗತ್ಯ.

ಹಿಂದಿನಿಂದ ನಮಗೆ ಬಂದಿರುವ ನಿಧಿಗಳ ಬಗ್ಗೆ ಈ ಆಧುನಿಕ ಪ್ರಮಾಣ - ಅಳತೆಗಳನ್ನು ಅನ್ವಯಿಸಿದರೆ ಈ ಅಳತೆಗಳು ಎಷ್ಟು ತುಚ್ಛವೋ ತಿಳಿಯುತ್ತದೆ. ಕೈಯಿಂದ ಚಿತ್ರಿಸಿ ಬಣ್ಣಹಾಕಿದ ಒಂದು ಅಪರೂಪವಾದ ಚೀನೀ ಪಿಂಗಾಣಿ ಪಾತ್ರೆ. ಅದನ್ನು ಈಗಿನ ಪಿಂಗಾಣಿ ಕಾರಖಾನೆಯ ವ್ಯವಸ್ಥಾಪಕನ ಕೈಗೆ ಕೊಟ್ಟರೆ, 'ಇದೇನು ಮಹಾ! ಇದಕ್ಕೆ ಅಷ್ಟು ಕಾಲ ಬೇಕೆ? ಇಂಥ ಪಾತ್ರೆಗಳನ್ನು ತಿಂಗಳಿಗೆ ಒಂದು ಸಾವಿರ ಜೊತೆ ಮಾಡಿಕೊಡುತ್ತೇನೆ' ಎಂದಾನು.

ಇಡೀ ಲೋಕದಲ್ಲಿಯೇ ಅತ್ಯದ್ಭುತವಾದ ಭಿತ್ತಿ-ಚಿತ್ರ, ಕುಡ್ಯ-ಚಿತ್ರಗಳುಳ್ಳ ಅಜಂತಾ ಗುಹೆಗಳಿಗೆ ಒಬ್ಬ ಕಲ್ಲಚ್ಚಿನ ಕಲೆಗಾರನನ್ನು ಕಳಿಸಿದರೆ, ನೂರಾರು ವರ್ಷ ಕಷ್ಟಪಟ್ಟು ಹಿಂದಿನವರು ನಿರ್ಮಿಸಿದ ಆ ಚಿತ್ರಗಳನ್ನು ನೋಡಿ, ಅದರ ನಕಲನ್ನು ಸಾವಿರಗಟ್ಟಲೆ ಬೇಕಾದರೂ ನಾನು ಒಂದು ತಿಂಗಳಲ್ಲಿ ಮಾಡಿಕೊಡುತ್ತೇನೆ ಎಂದಾನು.

ಕಾಶ್ಮೀರದ ಶಾಲಿಮಾರಾ ಉದ್ಯಾನವನ್ನು ನೋಡಿ ಎಣ್ಣೆಬೀಜಗಳ ವ್ಯಾಪಾರಿಯೊಬ್ಬ 'ಎಲ್ಲಾ ಹಾಳು. ಇವನ್ನೆಲ್ಲಾ ನೆಲಗಡಲೆ ಬಿತ್ತಿದರೆ ಸಾವಿರಾರು ಮಣ ನೆಲಗಡಲೆ ಆದೀತಲ್ಲ' ಎಂದಾನು! ಹಲವು ತತ್ವ

ಶಾಸ್ತ್ರಗಳಿಗೆ ಆಧಾರವಾಗಿ ಕೆಲವು ಸಂಸ್ಕೃತಿಗಳಿಗೆ ಆಲಂಬವಾದ ತಾಳೆ ಯೋಲೆಯ ಗ್ರಂಥಗಳನ್ನು ಕಂಡು ಒಬ್ಬ ಪ್ರಕಟನಕಾರ 'ಇದೇನು, ಕೆಲಸಕ್ಕೆ ಬಾರದ ಪದಾರ್ಥ. ಒಳ್ಳೇ ಬಾಂಡ್ ಕಾಗದದ ಮೇಲೆ ಅಚ್ಚು ಮಾಡಿ ೫ ರೂಗೆ ಪ್ರತಿಯಂತೆ ಮಾರೋಣ' ಎನ್ನುತ್ತಾನೆ. ಇರಾಣೀ ಚಹಾದಂಗಡಿಯವನು ತಾಜಮಹಾಲಿನ ಅಮೃತಶಿಲೆಯನ್ನು ಕಂಡು ಏನು ಪ್ರಯೋಜನ ಇದು ಎನ್ನುತ್ತಾನೆ. ಈ ಕಲ್ಲು ನಮ್ಮ ಅಂಗಡಿಯಲ್ಲಿ ಇಷ್ಟು ಮೇಜುಗಳಿಗೆ ಆಗುತ್ತದೆ. ಇಷ್ಟು ಸಾವಿರ ಜನ ಗಿರಾಕಿಗಳಿಗೆ ಚಹಾ ಕೊಡಬಹುದು ಎಂದು ಅವನ ಲೆಕ್ಕ.

ಎಲ್ಲೋರಾದಲ್ಲಿ ಅಖಂಡವಾದ ಕಲ್ಲಿನಲ್ಲಿ ಕೊರೆದು ಮೂರು ಅಂತಸ್ತಿನ ದೇವಾಲಯವನ್ನು ನಿರ್ಮಿಸಿದಾರೆ. ಅದರ ನೂರಾರು ಕಂಬಗಳಲ್ಲಿ ಸೂಕ್ಷ್ಮವಾಗಿ ಕೆತ್ತಿದ ಆಕೃತಿಗಳಿವೆ. ಈ ಶಿಲೆ ನಿರ್ದುಷ್ಟ ಎಂದು ಆರಿಸಿದ ನಮ್ಮ ಹಿರಿಯರ ಭೂಗರ್ಭ ಶಾಸ್ತ್ರದ ಜ್ಞಾನ ಎಷ್ಟು ಅಪಾರವಾದುದು! ಆ ದೇವಾಲಯವನ್ನು ರಚಿಸಲು ಎಷ್ಟು ಭಕ್ತಿಯಿದ್ದಿರಬೇಕು! ನ್ಯೂಯಾರ್ಕಿನಿಂದ ಒಬ್ಬ ಸಿಮೆಂಟ್ ಕಾನ್‌ಕ್ರೀಟ್ ಶಿಲ್ಪಿ ಬಂದರೆ ಅವನಿಗೆ ಈ ಭಾವನೆ ಬಾರದು. ಅದನ್ನು ಕಡೆಯಲು ಅವರಿಗೆ ಹಿಡಿಸಿದ ಕಾಲವೆಲ್ಲ ವ್ಯರ್ಥವಾಯಿತು ಎಂದು ಅವನ ಅಭಿಪ್ರಾಯ. ನ್ಯೂಯಾರ್ಕಿನಲ್ಲಿ ತಾನು ಕಟ್ಟಿದ, ಸೀಮೆಯೆಣ್ಣೆ ಡಬ್ಬಾಗಳನ್ನು ಒಂದರ ಮೇಲೊಂದು ಪೇರಿಸಿದ ಹಾಗಿರುವ, ೬೦ ಅಂತಸ್ತಿನ ಪ್ರಾಸಾದಗಳಿಗೆ ಅದನ್ನು ಹೋಲಿಸಿ ಒಂದೇ ಗಳಿಗೆಯಲ್ಲಿ ಅದನ್ನು ಕಟ್ಟಿದೆ ಎನ್ನಬಹುದು. ಬೇಕಾದರೆ 'ಕೈಲಾಸ' ದೇವಾಲಯದ ಪ್ರತಿ-ಕೃತಿಯೊಂದನ್ನು ಸಿಮೆಂಟ್ ಕಾನ್‌ಕ್ರೀಟಿನಲ್ಲಿ ಮೂರೇ ತಿಂಗಳಲ್ಲಿ ಮಾಡಿಕೊಡುತ್ತೇನೆ, ಅದಕ್ಕಿಂತ ಸುಲಭ ವೆಚ್ಚದಲ್ಲಿ ಎಂದಾನು.

ಒಬ್ಬ ಅಕ್ಕಸಾಲೆ ಒಂದು ಗುಲಾಬಿ ತೋಟಕ್ಕೆ ಹೋಗಿ ಆ ಹೂಗಳನ್ನು ತನ್ನ ಒರೆಗಲ್ಲಿಗೆ ಹಾಕಿ ತಿಕ್ಕಿದನಂತೆ. ಅವನಿಗೆ ಗೊತ್ತಿರುವ ಬೆಲೆ ಕಟ್ಟುವ ರೀತಿ ಅದೊಂದೇ! ಹಾಗಿವೆ ಮೇಲೆ ಹೇಳಿದ ಬೆಲೆ ಕಟ್ಟುವಿಕೆಗಳೆಲ್ಲ. ಕೆಳಗೆ ಬಿದ್ದುದನ್ನೆಲ್ಲ ಎತ್ತಿಕೊಳ್ಳಬೇಕೆಂದರೆ ಲದ್ದಿಯನ್ನೂ ಮೂಟೆ ಕಟ್ಟಿದನಂತೆ ಗಾಂಪರೊಡೆಯರ ಶಿಷ್ಯ ಮುಖ್ಯಾಳ!

ಈ ವಿಚಿತ್ರ ಮೂರ್ಖ ಪರಿಸ್ಥಿತಿಗಳಿಗೆ ಕಾರಣ ಒಂದು ಬಗೆಯ ಆರ್ಥಿಕ ವಿಧಾನದ ಸೂತ್ರಗಳನ್ನು ಇನ್ನೊಂದಕ್ಕೆ ಅನ್ವಯಿಸುವುದು.

ಮೇಲೆ ಹೇಳಿದ ಉದಾಹರಣೆಗಳೆಲ್ಲ ನಿಜವಲ್ಲ ಎನ್ನುವಷ್ಟು ವಿಚಿತ್ರ ವಾಗಿವೆ. ಆದರೂ ಬಾಳಿನಲ್ಲಿ ಇಂಥ ಬೆಲೆ ಕಟ್ಟುವಿಕೆ ನಡೆದೇ ಇದೆ. ತಿಳಿಗೇಡಿಗಳಾದವರಿಂದಲ್ಲ, ಬುದ್ಧಿವಂತರಿಂದ, ಲೋಕದ ಸುಪ್ರಸಿದ್ಧ ವಿಶ್ವವಿದ್ಯಾನಿಲಯಗಳ ಪಂಡಿತರಿಂದ. ವಿಶ್ವವಿದ್ಯಾನಿಲಯಗಳು ಮಾಡು ತ್ತಿರುವ ಕೆಲಸವೇನು? ಪರೋಪಜೀವನ, ಪರಾಪಹಾರ, ಪ್ರಯತ್ನ ಶೀಲತೆಗಳ ಆರ್ಥಿಕ ವಿಧಾನಗಳಿಗೆ ಹೊಂದುವ ಆಧುನಿಕ ಗಿರಣಿಗಾರಿಕೆ ಯನ್ನು ಸಮರ್ಥಿಸಲು ಯುಕ್ತಿಗಳನ್ನು ಹುಡುಕುವ ಪಂಡಿತರನ್ನು ಸೃಷ್ಟಿಸುವುದು.

ಅವರು ಮಾಡುವುದೇನು ಗೊತ್ತೆ? ಯಾವ ಸಮಸ್ಯೆಗೆ ಯಾವ ಉತ್ತರ ಬರಲಿ, ಅದರಿಂದ ಎಷ್ಟು ಲಾಭ ಎಂಬುದೇ ಅವರ ಒರೆಗಲ್ಲು. ಹಸನಾದ ತುಪ್ಪದಿಂದ ಮನೆಯಲ್ಲಿ ಮಕ್ಕಳಿಗಾಗಿ ತಾಯಿ ಹಲ್ವ ಮಾಡಿದರೆ ಈ ಬುದ್ಧಿವಂತ ಏನು ಕೇಳುತ್ತಾನೆ ಗೊತ್ತೆ? 'ತುಪ್ಪಕ್ಕೆ ಯಾವುದಾದರೂ ವನಸ್ಪತಿಯನ್ನು ಬೆರಕೆಮಾಡದಿದ್ದರೆ ಜಗತ್ತಿನ ಪೇಟೆ ಧಾರಣೆಗೆ ಸರಿತೂಗುತ್ತದೆಯೆ ಹಲ್ವಾ?' ಆ ತಿಂಡಿಯನ್ನು ಮಾಡಲು ತಾಯಿ ಒಂದು ಗಂಟೆ ಕಳೆಯಲಿಲ್ಲವೆ. ಆ ಹಲ್ವದ ಬೆಲೆಗೆ ಆ ಗಂಟೆಯ ಕೂಲಿಯನ್ನು ಸೇರಿಸಿ ಲೆಕ್ಕ ಹಾಕು ಎನ್ನುತ್ತಾನೆ. ಹಾಗೆ ಸೇರಿಸಿದರೆ ಆಗ ಲೆಕ್ಕ ಶಾಸ್ತ್ರೀಯವಾಯಿತು. ಆಗ ಅದನ್ನೂ ಪೇಟೆ ಧಾರಣೆಯನ್ನೂ ಹೋಲಿಸುತ್ತಾನೆ—ಸೇರಿಗೆ ಇಷ್ಟು ಎಂದು. ಆ ತಾಯಿಗೆ ಈ ಗೋಜು ಬೇಕಿಲ್ಲ. 'ನನ್ನ ಮಕ್ಕಳಿಗಾಗಿ ನಾನು ಹಲ್ವ ಮಾಡಿದೆ. ಶುದ್ಧವಾದ ಶುಚಿಯಾದ ತಿಂಡಿಯನ್ನು ಅವರಿಗೆ ಕೊಡಬೇಕು. ನಿನ್ನ ಪೇಟೆಯ ಧಾರಣೆ ಕಟ್ಟಿಕೊಂಡು ನನಗೇನು? ನಾನು ಕಳೆದ ಗಂಟೆಗೆ ನನಗೆ ಕೂಲಿಯೆ? ನನ್ನ ಇಡೀ ಬಾಳೇ ನನ್ನ ಕುಟುಂಬದ ಸೇವೆಗೆ ಮೀಸ ಲಲ್ಲವೆ? ಎನ್ನುತ್ತಾಳೆ. ಈ ಅನಾಗರಿಕ ಅಸಂಸ್ಕೃತ ಮುದುಕಿಗೆ ಅರ್ಥ ಶಾಸ್ತ್ರದ ಪ್ರಾಥಮಿಕ ಸೂತ್ರಗಳೂ ಗೊತ್ತಿಲ್ಲವಲ್ಲ ಎಂದು ಈ ಬುದ್ಧಿವಂತ ನಿಗೆ ಅಚ್ಚರಿ. ಮನೆಯಲ್ಲಿನ ಆರ್ಥಿಕ ರಚನೆ ಸೇವಾವಿಧಾನದ್ದು.

ತ್ತಯಾಗಿ ಅವನ ಅಭ್ಯಾಸ. ತನ್ನ ಕೆಲಸವನ್ನು ಆ ಅಳತೆಯಿಂದ ಅಳೆ ನಿರ್ಧರಿಸುತ್ತಾಳೆ. ಆದರೆ ಈ ಪಂಡಿತ ಅಲ್ಲಿ ಹೋಗಿ ಪರಾಪಹಾರದ ಅರ್ಥನೀತಿಯಿಂದ ಅದನ್ನು ಅಳತೆ ಮಾಡುತ್ತಾನೆ. ಅಲ್ಲಿ ಅದು ಹೊಂದದು. ಏಕಾಂತವಾಗಿ ತನ್ನ ಪುಸ್ತಕ ಪ್ರಪಂಚದಲ್ಲಿ ಕುಳಿತು ಬೇರಾವ ಸಂದರ್ಭಗಳ ಸೋಂಕೂ ಇಲ್ಲದೆ ಪರಿಸ್ಥಿತಿಯ ಜ್ಞಾನವೂ ಇಲ್ಲದೆ ಯಾವುದೋ ಒಂದೇ ಒಂದು ಅಳತೆಗೋಲನ್ನು ಹಿಡಿದು ಎಲ್ಲವನ್ನೂ ಅಳೆಯುವ ಅಭ್ಯಾಸ ಅವನದು. ಬುದ್ಧಿಯ ವ್ಯಾಯಾಮಕ್ಕೆ ಆ ಮಾರ್ಗ ಬಹಳ ಒಳ್ಳೆಯದಿರಬಹುದು. ಆದರೆ ಅಷ್ಟು ಸರಳ ಪರಿಸ್ಥಿತಿ ಕಾಣಬಾರದ ಕೃತ್ರಿಮ, ನಿಜಪ್ರಪಂಚದಲ್ಲಿ ಅವನ ವಿದ್ಯೆ ಕೆಲಸಕ್ಕೆ ಬಾರದಾಗುತ್ತದೆ.

ಗತಿವಿಜ್ಞಾನ ಪ್ರವೀಣನಾದ ಒಬ್ಬ ಭೌತಶಾಸ್ತ್ರ ಪಂಡಿತ ತನ್ನ ಸುಸಜ್ಜಿತ ಪ್ರಯೋಗಶಾಲೆಯಲ್ಲಿ ಕುಳಿತು ಸೀಸೆ ಮುಂತಾದ ಭಾರವಾದ ಲೋಹಗಳೂ ಕಾಗದದ ಚೂರುಗಳೂ ಎಲ್ಲವೂ ಒಂದೇ ಗತಿಯಿಂದ, ಸೆಕೆಂಡಿಗೆ ೩೨ ಅಡಿಯಂತೆ, ಮೇಲಿನಿಂದ ಕೆಳಗೆ–ಭೂಮಿಗೆ–ಬೀಳುತ್ತವೆ ಎನ್ನಬಹುದು. ಹಳ್ಳಿಯ ಶಾಲೆಯ ಹುಡುಗನೂ ಸಹ ಉಂಟೆ ಎಂದಾನು. 'ಎಲ್ಲಾದರೆ ಉಂಟೆ ಪಂಡಿತರೆ? ನಮ್ಮ ಬಾವಿಯೊಳಕ್ಕೆ ನಾನು ಕಲ್ಲಿನ ಹರಳೂ ಹಾಕಿದೇನೆ, ಕಾಗದದ ಚೂರೂ ಹಾಕಿದೇನೆ. ಕಲ್ಲುಹರಳು ನೇರಾಗಿ ತಳಕ್ಕೆ ಹೋಗುತ್ತವೆ. ಕಾಗದದ ಚೂರು ಗಾಳಿಯಲ್ಲಿ ಹಾರಾಡುತ್ತವೆ. ಒಮ್ಮೊಮ್ಮೆ ಬಾವಿಯ ಪಕ್ಕದಲ್ಲಿ ದೂರ ಹೋಗಿ ಬೀಳುತ್ತವೆ. ನನ್ನ ಗಾಳಿಪಟಗಳು ಕಣ್ಣಿಗೆ ಕಾಣಿಸದಷ್ಟು ಮೇಲೆ ಏರುತ್ತವೆ. ಸೀಸದ ಗಾಳಿಪಟ ಹಾರಿಸಿದವರುಂಟೆ?' ಎನ್ನುತ್ತಾನೆ. ಪಂಡಿತರ ಮಾತೂ ನಿಜವೆ. ಗಾಳಿಯ ಒತ್ತಡವಿಲ್ಲದ ಅವರ ಪ್ರಯೋಗಶಾಲೆಯ ವಾಯುಹೀನ ಕೃತ್ರಿಮ ಆವರಣದಲ್ಲಿ ಅದು ನಿಜ. ಆದರೆ ಹೊರಗಿನ ಪ್ರಪಂಚದಲ್ಲಿ ಆ ಹುಡುಗನ ಮಾತೇ ಸರಿ. ಯಾವ ಸಮಸ್ಯೆಯನ್ನೇ ತೆಗೆದುಕೊಂಡರೂ ನೂರಾರು ದೃಷ್ಟಿ, ನೂರಾರು ಅಂಶ ಇರುತ್ತವೆ. ಯಾವುದನ್ನೂ ತೀರ್ಮಾನಿಸುವ ಮೊದಲು ಈ ಎಲ್ಲಾ ಅಂಶಗಳನ್ನೂ ಗಮನಿಸಬೇಕು; ಎಲ್ಲಾ ದೃಷ್ಟಿಗಳಿಂದಲೂ ನೋಡಬೇಕು. ಆಗ ತೀರ್ಮಾನ ಸರಿ. ಅನೇಕ ಸಲ ಸ್ಪಷ್ಟವಾಗಿ ಗೋಚರಿಸದ ಮೂಲ್ಯಗಳೇ ಹೆಚ್ಚು ಸ್ಥಿರ–

ಶಾಶ್ವತ; ಎಷ್ಟು ಕಾಣುವ ಮೂಲ್ಯಗಳು, ಹಣದ ಅಳತೆಯಂಥವು, ಉಳಿವ ದೃಷ್ಟಿಯಿಂದ ಅತ್ಯಂತ ಗೌಣ.

ಅರ್ಥಶಾಸ್ತ್ರಿಯನ್ನು ಕೇಳಿದರೆ ಬೇಡಿಕೆ–ಪೂರಯಿಕೆಗಳು (ಗಿರಾಕಿ–ಸರಬರಾಜು) ಬೆಲೆಯ ತಂತ್ರಕ್ಕೆ ಅಧೀನ; ಬೆಲೆ ಕಡಿಮೆಯಾದಷ್ಟೂ ಬೇಡಿಕೆ ಹೆಚ್ಚು ಎನ್ನುತ್ತಾನೆ. ಆದರೆ ಇದು ಯಾವಾಗಲೂ ಸತ್ಯವೆ? ಅರ್ಥಶಾಸ್ತ್ರದ ಪುಸ್ತಕವನ್ನು ಬಿಟ್ಟರೆ ಪ್ರಪಂಚದಲ್ಲಿ 'ಆರ್ಥಿಕ ಮನುಷ್ಯ' ಇಲ್ಲವೇ ಇಲ್ಲ. ಸೀರೆ ಕೊಳ್ಳುವಾಗ ಹೆಂಗಸು ಎಲ್ಲಕ್ಕಿಂತ ಅಗ್ಗವಾದುದನೇ ಆರಿಸಳು. ಬಣ್ಣ, ನಯ, ನೇಯಿಗೆಗಳ ಬಗ್ಗೆ ಅವಳಿಗೆ ಕೆಲವು ಅಭಿಪ್ರಾಯ ಗಳಿವೆ. ಅವಕ್ಕನುಸಾರವಾದುದನ್ನು ಕೊಳ್ಳುತ್ತಾಳೆ. ಒಬ್ಬ ಸಾಹುಕಾರನ ಮಗ ಒಂದು ಅಂಗಡಿಯಲ್ಲಿರುವ ಒಂದು ಬಣ್ಣದ ಎಲ್ಲಾ 'ನೆಕ್‌ಟೈ' ಗಳನ್ನೂ ತಾನೇ ಕೊಂಡಾನು. ಇತರರು ಯಾರಿಗೂ ಆ ಬಣ್ಣದ ಟೈಗಳು ಸಿಗದಿರಲಿ, ಕೇವಲ ತನಗೇ ಇರಲಿ ಎಂದು. ಒಬ್ಬ ಒಂದು ಎಣ್ಣೆಯ ದೀಪವನ್ನು ತಯಾರು ಮಾಡಿದ. ಆ ದೀಪ ಬಳಕೆಗೆ ಬಂದರೆ ತಮ್ಮ ಸೀಮೆಯೆಣ್ಣೆಗೆ ಗಿರಾಕಿ ಕಡಮೆಯಾದೀತೆಂದು ಒಂದು ಪೆಟ್ರೋಲಿಯಂ ಕಂಪೆನಿಯವರು ಆ ಎಣ್ಣೆದೀಪಕ್ಕೆ ಹೇರಳವಾಗಿ ಹಣ ಕೊಟ್ಟು ಕೊಂಡು ಅದನ್ನು ತಮ್ಮ ಗಡಂಗಿನ ಮೂಲೆಯಲ್ಲಿ ಬಿಸುಟಾರು, ಅದು ತಲೆಯೆತ್ತದಂತೆ.

ಆದುದರಿಂದ ನಾವು ಬಳಸುವ ಅಳತೆ ಒಂದು ಸಂದರ್ಭಕ್ಕೆ ಮಾತ್ರ ವಲ್ಲ, ಇಡೀ ಆರ್ಥಿಕ ವಿಧಾನಕ್ಕೇ ಅನ್ವಯಿಸುವಂತಿರಬೇಕು. ಪಾಶ್ಚಿಮಾತ್ಯ ವೇಷಧಾರಿಗೆ ೧೨ ಆಣೆ ಗಜದ ಗಿರಣಿ ಬಟ್ಟೆಗಿಂತ ೧ ರೂ ಗಜದ ಖಾದಿ ತುಟ್ಟಿಯೆನಿಸಬಹುದು. ಇಲ್ಲಿ ಅದರ ಹಿನ್ನೆಲೆಯನ್ನು ಗಮನಿಸು ವುದಿಲ್ಲ. ಖಾದೀ ಪ್ರೇಮಿ ಹಳ್ಳಿಯವನಾದರೆ ತಾನೇ ಹತ್ತಿ ಬೆಳೆದು ತಂದು ಹಸಮಾಡಿ ಕಾಳುಬಿಡಿಸಿ ತನ್ನ ವಿರಾಮಕಾಲದಲ್ಲಿ ತಾನೇ ನೂತು ತನ್ನ ನೆರೆಯ ನೇಕಾರನಿಂದ ನೇಯಿಸುತ್ತಾನೆ. ಅವನು ತನ್ನ ಬಟ್ಟೆಯನ್ನು ತಾನೇ ಒಗೆಯುತ್ತಾನೆ. ನೆಲದ ಮೇಲೆ ಕೂಡುತ್ತಾನೆ. ಹಳ್ಳಿಯ ಆರ್ಥಿಕ ವಿಧಾನಕ್ಕೆ ಅನುಗುಣವಾದ ಅಭ್ಯಾಸಗಳನ್ನೆ ಮಾಡುತ್ತಾನೆ. ಇದನ್ನು ಕಂಡು ಮೂಗು ಮುರಿಯುವ ನಾಗರಿಕ ತನ್ನ ಕೋಟು–

ಷರಾಯಿಗಳಿಗೆ ಹೊಲಿಗೆಯ ಕೂಲಿಯಾಗಿ ಹಣ ಸುರಿಯಬೇಕು. ಆ ಸಾಜೋಕು ಬಟ್ಟೆಗಳನ್ನು ಒಗೆಯಲು ಅಗಸನಂಗಡಿಗೆ ದಂಡ ತೆರಬೇಕು. ಆ ಬಟ್ಟೆಗಳು ನೆಲದ ಮೇಲೆ ಕುಳಿತರೆ ಮಾಸಿ ಹಾಳಾಗುವುದ ರಿಂದ ಅದಕ್ಕಾಗಿ ಮನೆಯಲ್ಲಿ ಕುರ್ಚಿ ಮೇಜು ಹಾಕಬೇಕು. ಮನೆಗೆ ಬಂದವರಿಗಾಗಿ ಬೇರೆ ಕುರ್ಚಿಗಳು ಬೇಕು. ಅವನ ಜೀವನ ವಿಧಾನವೆಲ್ಲ ತೊಡಕು ತೊಡಕಾಗಿ ಅತಿವ್ಯಯಕ್ಕೆ ಕಾರಣವಾಗುತ್ತದೆ ಇತರ ಸಾಮಾ ಜಿಕ ಕಾರಣಗಳು ಹಾಗಿರಲಿ, ಇದೇ ಸಾಲದೆ ಖಾದಿಗೆ ಗಜಕ್ಕೆ ಒಂದೆರ ಡಾಣೆ ಹೆಚ್ಚು ಕೊಟ್ಟರೂ ಒಟ್ಟಿನಲ್ಲಿ ಅದು ತುಟ್ಟಿಯಲ್ಲ ಎನ್ನಲು? ಬೆಲೆಯ ಒಂದು ಅಂಶವನ್ನು ಮಾತ್ರ ತೆಗೆದುಕೊಂಡು, ಅದರ ಪೂರ್ಣ ಚಿತ್ರವನ್ನು ಗಮನಿಸದೆ ಇನ್ನೊಂದು ಬಗೆಯ ಧಾರಣೆಗೆ ಹೋಲಿಸಿದರೆ ಸರಿಯಲ್ಲ. ಬರೀ ವಜ್ರದ ಬೆಲೆಗಿಂತ ಒಡವೆಯಲ್ಲಿ ಅದನ್ನು ಕಟ್ಟಿದಾಗ ಅದರ ಬೆಲೆ ಹೆಚ್ಚು. ಪ್ರತಿಯೊಂದು ಬಗೆಯಲ್ಲೂ ಆರ್ಥಿಕ ವಿಧಾನದ ಸಂಪೂರ್ಣ ಹಿನ್ನೆಲೆಯನ್ನು ನಾವು ಗಮನಿಸಬೇಕು. ಇಲ್ಲಿಯವರೆಗೆ ಕೊಳ್ಳುವವನ, ಉಪಭೋಗಿಸುವವನ ದೃಷ್ಟಿಯಿಂದಲೇ ಬೆಲೆ ಕಟ್ಟುತ್ತ ಬಂದಿದೇವೆ.

ಈ ಯಂತ್ರಯುಗದಲ್ಲಿ ಗುಡಿಸಲು-ಕೈಗಾರಿಕೆಗಳು ಬದುಕುತ್ತ ವೆಯೆ? ಈ ಪ್ರಶ್ನೆ ಆಗಾಗ ಕೇಳಿ ಬರುತ್ತದೆ. ಇದರ ಪೂರ್ಣ ಚರ್ಚೆ ಬೇರೆಡೆ ಮಾಡಿದರೂ ಇಲ್ಲಿ ಇಷ್ಟು ಹೇಳಬಹುದು. ಗುಡಿಸಲು ಕೈಗಾರಿಕೆ ಅಥವಾ ಗ್ರಾಮೋದ್ಯೋಗ ಬರೀ ಒಂದು ಉತ್ಪಾದನ ವಿಧಾನವಲ್ಲ; ಒಂದು ಆರ್ಥಿಕ ವಿಧಾನವಲ್ಲ ; ಒಂದು ಆರ್ಥಿಕ ವಿಧಾನದ ಮುಖ್ಯಾಂಶ. ಇನ್ನೊಂದು ಬಗೆಯ ಆರ್ಥಿಕ ವಿಧಾನಕ್ಕೆ 'ಗಿರಣಿಗಾರಿಕೆ' ಇದ್ದಹಾಗೆ. ಮೇಲೆ ಕೇಳಿದ ಪ್ರಶ್ನೆಯ ಅರ್ಥ ನಿಮಗೆ ಯಾವ ಬಗೆಯ ಆರ್ಥಿಕ ವಿಧಾನ ಇಷ್ಟ ಎಂದು. ನಮಗೆ ಯಾವ ವಿಧಾನ ಇಷ್ಟವೆಂಬುದು ನಮ್ಮ ಧ್ಯೇಯಗಳನ್ನು ಅವಲಂಬಿಸಿದೆ. ಅದಕ್ಕೆ ನಮಗೆ ಜೀವನ-ಮೂಲ್ಯಗಳು ಯಾವುವು ಎಂಬುದು ಆಧಾರ. ಆದುದರಿಂದ ಮೂಲ್ಯಗಳು, ಬೆಲೆ ಕಟ್ಟುವ ರೀತಿ, ಎರಡೂ ಮಾನವಜೀವನದ ಪ್ರಗತಿ ರಥವನ್ನು ಎಳೆಯುವ ಕುದುರೆಗಳು. ಕಡೆಯಲ್ಲಿ, ನಮ್ಮ ಪಯಣದ ದಿಕ್ಕನ್ನು

ಶಾಶ್ವತತೆ ಅಹಿಂಸೆಗಳ ಕಡೆಗೋ ಅಶಾಶ್ವತತೆ-ಹಿಂಸೆಗಳ ಕಡೆಗೋ ನಿರ್ಧರಿಸುವುವು ಅವೇ. ಆದುದರಿಂದ ಈ ಎರಡು ವಿಷಯಗಳ ಬಗ್ಗೆ ಬಹಳ ಸ್ಪಷ್ಟವಾಗಿರಬೇಕು. ನಮ್ಮ ಗುರಿ-ಮೂಲ್ಯಗಳಲ್ಲಿ ಗೊಂದಲವಿದ್ದರೆ ಸರ್ವನಾಶ ಖಂಡಿತ.

ತಿರುವಾಂಕೂರಿನಲ್ಲಿ ಬಹಳ ಮೆತ್ತನೆಯ ಬಿಳೀ ದೇವದಾರು ಗರಿಯ ಚಾಪೆಗಳನ್ನು ಚೆನ್ನಾಗಿ ಹೆಣೆಯುತ್ತಾರೆ. ಆ ಸೀಮೆಯಲ್ಲಿ ಅವರವರ ಹೊಲದಲ್ಲಿಯೆ ಅವರ ಗುಡಿಸಲು. ಹೊಲದ ಸುತ್ತಲೂ ಮಣ್ಣಿನ ಗೋಡೆ. ಆ ಗೋಡೆಯ ಮೇಲೆ ಈ ಗರಿ ಬೆಳೆಯುತ್ತವೆ. ಒಂದು ಸಲ ಆ ಪ್ರಾಂತದಲ್ಲಿ ಪ್ರವಾಸ ಮಾಡುವಾಗ ಈ ಚಾಪೆಯ ಕೈಗಾರಿಕೆಯನ್ನು ಪರಿಶೀಲಿಸಲು ಹೋಗಿದ್ದೆ. ಮನೆಯ ಗಂಡಸರು ಹೆಂಗಸರು ಮಕ್ಕಳು ಕೂಡ ಆ ಕೈಗಾರಿಕೆಯಲ್ಲಿ ಭಾಗವಹಿಸುತ್ತಾರೆ. ಅಲ್ಲಿನ ಚಾಪೆ-ಕೈಗಾರಿಕೆಯವರ ಮುಖಂಡ ನಾಲ್ಕಾರು ಮನೆಗಳಿಗೆ ನಮ್ಮನ್ನು ಕರೆದೊಯ್ದು ಅದನ್ನೆಲ್ಲ ತೋರಿಸಿ ವಿವರಿಸಿದ. 'ನಮ್ಮ ತಂದೆ ತಾತಂದಿರು ಇದೇ ಕಸಬನ್ನೆ ಮಾಡಿ ಮೂರು ನಾಲ್ಕು ಮಹಡಿ ಮನೆಗಳನ್ನು ಕಟ್ಟಿದರು, ಸುಖವಾಗಿದ್ದರು. ಅವರ ವಂಶದವರಿಗೆ ನಮಗೆ ಆ ಮನೆಗಳನ್ನು ಮೆತ್ತಿಸಲು ಕೂಡ ಅನುಕೂಲವಿಲ್ಲ. ಏಕೋ!' ಎಂದು ಅವನ ಚಿಂತೆ. ಅಷ್ಟು ಹೊತ್ತಿಗೆ ಮಧ್ಯಾಹ್ನವಾದುದರಿಂದ ಆತ ನಮಗೆ ತನ್ನಲ್ಲಿಯೆ ಊಟಕ್ಕೆ ಹೇಳಿದ. ಹೋದೆವು. ಆಗಲೂ ಅವನದು ಅದೇ ಪ್ರಶ್ನೆ. ನನಗೂ ಅದಕ್ಕೆ ಉತ್ತರ ಹೊಳೆಯಲಿಲ್ಲ. ಊಟಕ್ಕೆ ಕುಳಿತೆವು. ನಾವು ಮೂವರು ಅತಿಥಿಗಳು. ನಾನು ಮುಖ್ಯ ಅತಿಥಿ, ನಡುವೆ. ಉಳಿದವರಿಬ್ಬರೂ ಆ ಕಡೆ ಈ ಕಡೆ. ಅವರಿಬ್ಬರಿಗೂ ಆ ಊರಿನಲ್ಲಿ ಹೆಣೆದ ಆಸನಗಳನ್ನು ಹಾಕಿದರು. ನನಗೆ ಹಾಕಿದ್ದುದೇ ಬೇರೆ, ಅದನ್ನು ಗಮನಿಸಿದೊಡನೆ ನನಗೆ ಉತ್ತರ ಹೊಳೆಯಿತು. 'ನಿಮ್ಮ ಕೈಗಾರಿಕೆ ಅಧೋಗತಿಗೆ ಇಳಿದುದರ ಕಾರಣ ಗೊತ್ತಾಯಿತು. ನಿಮ್ಮ ಮೂಲ್ಯಗಳಲ್ಲಿದೆ ಈ ತಪ್ಪು' ಎಂದೆ. ಹಾಗೆಂದರೇನು ಎಂದು ಆತ ಕೇಳಿದ. ನಾನು ಕೇಳಿದೆ-'ನನ್ನ ಗೆಳೆಯರಿಗೆ ಹಾಕಿರುವ ಈ ಆಸನಗಳು ಎಲ್ಲಿಯವು?' 'ನಾನೇ ಕೈಯಾರೆ ಹೆಣೆದದ್ದು ಅವು. ನನ್ನ ಹೆಣಿಗೆಯ ಮಾದರಿ' ಎಂದ ಆತ. 'ನನಗೆ ಹಾಕಿರುವ

ಈ ಚಾಪೆ ಎಲ್ಲಿಯದು, ಇದರ ಮೇಲೆ ಹುಲಿಯ ಚಿತ್ರ ಇದೆಯಲ್ಲ?' 'ಇದು ಜಪಾನೀ ಚಾಪೆ, ಪೇಟೆಯಲ್ಲಿ ಕೊಂಡದ್ದು' ಎಂದ. 'ನೋಡು, ನಾನು ಮುಖ್ಯ ಅತಿಥಿ ಎಂದು ಈ ಬಣ್ಣದ ಜಪಾನೀ ಚಾಪೆಯನ್ನು ನನಗೆ ಹಾಕಿದೆ. ನನ್ನ ಗೆಳೆಯರಿಗೆ ನೀನೇ ಹೆಣೆದ ಚಾಪೆ ಹಾಕಿದೆ. ನೀನು ಹೆಣೆದ ಚಾಪೆಗಿಂತ ಈ ಜಪಾನೀ ಚಾಪೆ ಶ್ರೇಷ್ಠ ಎಂದು ನೀನೇ ತಿಳಿದ ಹಾಗಾಯಿತಲ್ಲವೆ. ನೀನೇ ಹೀಗೆ ಮಾಡಿದರೆ ಉಳಿದವರನ್ನು ಇಂಥ ಕೆಲಸ ಮಾಡಿದರೆ ಆಕ್ಷೇಪಿಸಲಾದೀತೆ? ನಿನ್ನ ಗಿರಾಕಿಗಳೆಲ್ಲರೂ ಕೈಬಿಟ್ಟರೆ ನಿನ್ನ ಕೈಗಾರಿಕೆ ಹೇಗೆ ಬೆಳೆಯಬೇಕು? ನಿನ್ನ ಕೈಗಾರಿಕೆಯನ್ನು ಹಾಳು ಮಾಡಲು ನೀನೇ ಮುಖ್ಯ ಕಾರಣವಲ್ಲವೆ?' ಎಂದೆ. ನನ್ನ ತರ್ಕವನ್ನು ಒಪ್ಪಿಕೊಂಡು ಆತ ನನಗೆ ಕೈಮುಗಿದು ಆ ಜಪಾನೀ ಚಾಪೆಯನ್ನು ತೆಗೆದು ಮತ್ತೊಂದು ತಾನೇ ಹೆಣೆದ ಚಾಪೆಯನ್ನು ಹಾಕಿದ.

ನಮ್ಮ ದೇಶದಲ್ಲಿ ಎಲ್ಲಾ ಕಡೆಯಲ್ಲೂ ನಡೆಯುತ್ತಿರುವುದರ ಸಂಗ್ರಹ-ಚಿತ್ರ ಇದು. ನಾವು ಕಟ್ಟುವ ಬೆಲೆ ಸಮಗ್ರವಲ್ಲ. ಅನೇಕ ವೇಳೆ ಪದಾರ್ಥ ಅಗ್ಗವಾಗಿದ್ದರೆ ಸಾಕು ಕೊಂಡುಬಿಡುತ್ತೇವೆ. ಹಾಗೆ ಕಣ್ಣು ಮುಚ್ಚಿ ಕುರುಡಾಗಿ ನಾವು ಕೊಂಡುದರ ಸಾಮಾಜಿಕ ಪರಿಣಾಮ ವೇನೆಂಬುದು ನಮಗೆ ತಿಳಿಯದು. ಬೆಳ್ಳಗಿರುವುದೆಲ್ಲಾ ಹಾಲಲ್ಲ. ನಮ್ಮ ನೆರೆಹೊರೆಯವರು ಮಾಡಿದ ಪದಾರ್ಥಗಳಿಗೆ ಬರೀ ಹಣಕ್ಕೆ ಮೀರಿದ ಕೆಲವು ಅಗೋಚರ, ಅವ್ಯಕ್ತ ಮೂಲ್ಯಗಳಿವೆ. ಕೊಳ್ಳುವಾಗ ನಮಗೆ ಹಣವೊಂದೇ ಲೆಕ್ಕವಾದರೂ ಒಂದು ಪದಾರ್ಥದ ಬೆಲೆಯಲ್ಲಿ ಹಣದ ಧಾರಣೆ ಬಹಳ ಗೌಣವಾದ ಅಂಶ. ಬರೀ ಹಣದ ಲೆಕ್ಕವನ್ನೇ ನಂಬಿದರೆ ಮರದ ಮೇಲೆ ನಿಂತು ಬುಡವನ್ನು ಕಡಿದಂತೆ. ಸಾಮಾಜಿಕ ದೂರ ದೃಷ್ಟಿಯನ್ನು ಕಳೆದುಕೊಂಡು ಪರೆಯ ಕಣ್ಣಿನಿಂದ ನೋಡಿದಂತೆ. ಸಮಾಜದಲ್ಲಿ ಸ್ಥಿರತೆ ಶಾಶ್ವತತೆಗಳು ಬೇಕು ಎಂದರೆ ಪ್ರತಿಯೊಂದು ಪ್ರಶ್ನೆಗೂ ತಾತ್ಕಾಲಿಕ ಪರಿಹಾರವನ್ನು ಮಾತ್ರವೆ ನೋಡದೆ, ಶಾಶ್ವತವಾದ ಪರಿಹಾರವನ್ನು ನೋಡುವ ದೂರದರ್ಶಿತ್ವ ಬೇಕು. ಒಂದೊಂದು ಕೆಲಸದ ದೀರ್ಘ ಪರಿಣಾಮವನ್ನೂ ಗಮನಿಸಬೇಕು. ಒಬ್ಬ ವ್ಯಕ್ತಿ ಮಾಡಿದ ಒಂದು ವ್ಯಾಪಾರ ಅಲ್ಲಿಗೇ ಮುಗಿಯುವುದಿಲ್ಲ. ಸಮಾಜದಲ್ಲಿ

ಅದರ ಪರಿಣಾಮ ಪರಂಪರೆಯಾಗಿ ಸಾಗಿಬರುತ್ತದೆ. ಅದನ್ನು ಅರಿತು ಕೊಳ್ಳುವ ಬುದ್ಧಿ ನಮಗಿಲ್ಲದಿರಬಹುದು.

ಒಂದು ಸಹಕಾರ ಸಂಘ. ಸದಸ್ಯರು ಉತ್ಪಾದನೆ ಮಾಡಿದ ಜೇನು ತುಪ್ಪವನ್ನು ಮಾರಿ ಅವರಿಗೆ ಅನೇಕ ಅನುಕೂಲ್ಯಗಳನ್ನು ಕಲ್ಪಿಸಿತ್ತು. ಅದನ್ನೆಲ್ಲ ಹೆಮ್ಮೆಯಿಂದ ವಿವರಿಸುತ್ತ ಅದರ ಕಾರ್ಯದರ್ಶಿ ಒಬ್ಬ ಸದಸ್ಯನ ತೋಟಕ್ಕೆ ಕರೆದೊಯ್ದ. ಆ ಸದಸ್ಯ ಮೂವತ್ತು ಜೇನುಗೂಡುಗಳನ್ನು ಇಟ್ಟುಕೊಂಡಿದ್ದ. ಹುಳುಗಳೂ ಬಹಳ ಚಟುವಟಿಕೆಯಾಗಿದ್ದವು. ನೂರಾರು ಪೌಂಡು ಜೇನುತುಪ್ಪವನ್ನು ಮಾರಲಿಕ್ಕೆ ಸಂಘಕ್ಕೆ ಕಳಿಸುತ್ತಿದ್ದ ಆ ಸದಸ್ಯ. ಇದರಿಂದ ಎಷ್ಟು ಹಣ ಗಳಿಸಿರಬಹುದು ಎಂದು ಲೆಕ್ಕ ಹಾಕುತ್ತ ಆತನ ಪರಿಶ್ರಮವನ್ನು ಮೆಚ್ಚಿಕೊಂಡೆ ನಾನು. ಅಷ್ಟರಲ್ಲಿ ಆತನ ಪುಟ್ಟ ಮಗಳು ಅಲ್ಲಿಗೆ ಓಡಿಬಂದಳು. ಈ ಜೇನು ಹುಳ ಏನು ಮಾಡುತ್ತವೆ ಎಂದಳು ಆ ಹುಡುಗಿ. 'ಜೇನುತುಪ್ಪ ನಿನಗೆ ಇಷ್ಟವೆ' ಎಂದೆ. ಮಗುವಿನ ಮೋರೆಯಲ್ಲಿ ಏನೂ ಭಾವ ಕಾಣಲಿಲ್ಲ. ಕೇಳಿದ ಪ್ರಶ್ನೆ ಅರ್ಥವಾಗಲಿಲ್ಲವೇನೋ ಎಂದು 'ಜೇನುತುಪ್ಪ ರುಚಿಯಾಗಿರು ತ್ತದೆಯೆ ಮಗು?' ಎಂದೆ. 'ನನಗದರ ರುಚಿ ಗೊತ್ತಿಲ್ಲ' ಎಂದಳು ಆ ಹುಡುಗಿ. ನಾನು ಬೆರಗಾದೆ. ಇತ್ತ ತಿರುಗಿ, ನಿಮ್ಮ ಮನೆಯ ಮಕ್ಕಳಿಗೆ ಜೇನುತುಪ್ಪದ ರುಚಿಯನ್ನೇ ತೋರಿಸಿಲ್ಲವೆ ನೀವು? ಎಂದು ಆ ದೊಡ್ಡ ಮನುಷ್ಯನನ್ನು ಕೇಳಿದೆ. ಅದಕ್ಕೆ ಸರಿಯಾದ ಉತ್ತರ ಎಂದು ಆತ ತಿಳಿದುದನ್ನು ಹೇಳಿದ: 'ಸಂಘಕ್ಕೆ ಕೊಟ್ಟರೆ ಒಂದು ಪೌಂಡು ಜೇನು ತುಪ್ಪಕ್ಕೆ ಒಂದು ರೂಪಾಯಿ ಕೊಡುತ್ತಾರೆ. ಮನೆಯಲ್ಲಿ ಅದನ್ನು ಬಳಸಲು ಮೊದಲಿಟ್ಟರೆ ಹೇಗಾದೀತು?' ಎಂದ. ಅಲ್ಲಿಯವರೆಗೆ ಆ ಸದಸ್ಯನ ಪರಿಶ್ರಮನ್ನು ಮೆಚ್ಚುತ್ತಿದ್ದ ನನಗೆ ಹೇಗೆ ಹೇಗೋ ಆಯಿತು. ಆ ಕಾರ್ಯದರ್ಶಿಯ ಕಡೆ ತಿರುಗಿ 'ಈ ಮಗುವಿಗೆ ಜೇನುತುಪ್ಪದ ರುಚಿ ಯನ್ನೇ ತೋರಿಸದಂಥ ನಿಮ್ಮ ಕೆಲಸವೆಲ್ಲವೂ ವ್ಯರ್ಥ. ಅದಕ್ಕೆ ಹೆಚ್ಚು ಬೆಲೆ ಕೊಟ್ಟು ನೀವು ಮಾಡಿದುದೇನು ಗೊತ್ತೆ? ಆ ಮಗುವಿಗೆ ಒಂದು ತೊಟ್ಟೂ ಜೇನುತುಪ್ಪವಿಲ್ಲದಂತೆ ದೋಚಿದಿರಿ. ಅದನ್ನು ಹೊಟ್ಟೆ ತುಂಬಿದ ಹಣವಂತರ ಬಾಯಿಗೆ ಸುರಿದಿರಿ' ಎಂದೆ. ಎಲ್ಲಿ ನೋಡಿದರೂ,

ಯಾವ ಪದಾರ್ಥದ ವಿಷಯವಾದರೂ ಇದೇ ಕಥೆಯೋ! ಹಾಲು, ಹಣ್ಣು, ಮೊಟ್ಟೆ-ಪುಷ್ಟಿಕರವಾದ ಪದಾರ್ಥ ಯಾವುದೇ ಆಗಲಿ ಇದೇ ಪಾಡು. ನಂಜನಗೂಡಿನಲ್ಲಿ ರಸಬಾಳೆಗೇ ಅಭಾವ. ಕೊಡಗಿನಲ್ಲಿ ಕಿತ್ತಲೆಯೇ ಸಿಗದು. ವಾಯುವ್ಯ ಪ್ರಾಂತದಲ್ಲಿ ಕೋಳಿ ಸಾಕುವ ಪರಿಶ್ರಮ ಹೆಚ್ಚು. ಹಿಂದೆ ಅಲ್ಲಿ ಎಲ್ಲರ ಮನೆಯಲ್ಲೂ ಮೊಟ್ಟೆ ತಿನ್ನುವ ರೂಢಿಯಿತ್ತು. ರಾವಲಪಿಂಡಿ, ಕ್ವೆಟ್ಟಾ, ಅಂಬಾಲಾಗಳಲ್ಲಿ ದಂಡಿನ ಏರ್ಪಾಟಾದ ಮೇಲೆ ಒಳನಾಡಿನಲ್ಲಿ ಮೊಟ್ಟೆಯನ್ನು ತಿಂದವರೇ ಇಲ್ಲ.

ಹಣದ ಆಳತೆಯನ್ನು ಹಿಡಿದರೆ ಉಳಿದೆಲ್ಲ ಬೆಲೆಗಳೂ ಉಚ್ಚತರ ಮೂಲ್ಯಗಳೂ ಹಿಂದೆ ಸರಿಯುತ್ತವೆ. ಆದರಲ್ಲಿ ಒಬ್ಬನಿಗೆ ಅಲ್ಪ ಲಾಭವಾಗಿ ಕಂಡರೂ ಇನ್ನೊಬ್ಬನಿಗೆ ಪೂರಾ ನಷ್ಟ, ವಿನಾಶ ಕಾದಿದೆ. ಹಿಂದೆ ಜಿಲೇಬಿಯ ಉದಾಹರಣೆ ಬಂತಲ್ಲ. ಹಾಗೆ ತೃಪ್ತಿಯಾಗಿ ಮಿಕ್ಕು ಹೆಚ್ಚಾದುದನ್ನು ಮಾತ್ರ ಸೆಳೆಯದು. ಹಣ ಜೀವಾಳವನ್ನೇ ಹಿಂಡಿಬಿಡು ತ್ತದೆ. ಆ ಗಳಿಗೆಯಲ್ಲಿ ಆದರಿಂದ ಸಮಾಜಕ್ಕೆ ಆಗುವ ಹಾನಿ ಅರ್ಥ ವಾಗದು. ೧೯೪೦ ರಲ್ಲಿ ಬಂದ ಬಂಗಾಳದ ಬರಕ್ಕೆ ಕಾರಣ ಈ ಹಣದ ಪದ್ಧತಿಯೆ. ಹಳ್ಳಿಗಳಲ್ಲಿ ಹಸಿದುಬಿದ್ದ ಜನರ ಬಾಯಿಂದ ಪುಷ್ಟಿಕರ ಆಹಾರವನ್ನು ಪೇಟೆಗೆಳೆದು ಕಾಗದದ ಹಣವನ್ನು ಅವರ ಕೈಗೆ ತುರು ಕಿತು ಈ ಹಣದ ಪದ್ಧತಿ. ಆ ಕಾಗದಕ್ಕೆ ಹಣ ಸಿಗುವುದು ಲಂಡನ್ನಿನಲ್ಲಿ, ಭಾರತವಲ್ಲಲ್ಲ. ಇಷ್ಟೆಲ್ಲ ಆ ಬಡಜನಕ್ಕೆ ತಿಳಿಯುವ ಮೊದಲೇ ಸರ್ವನಾಶ ವಾಗಿ ಕ್ಷಾಮದೇವತೆ ರುದ್ರನಾಟ್ಯವಾಡಿತು. ಆ ಭೀಕರ ದೃಶ್ಯದಿಂದ ಪಾಠ ಕಲಿಯೋಣ. ಹಣಕ್ಕಿಂತ ಹೆಚ್ಚಾದ ಉತ್ತಮವಾದ ಮೂಲ್ಯಗಳು ಲೋಕದಲ್ಲಿವೆ ಎಂಬುದನ್ನು ಅರಿಯೋಣ.

---

## ೧೦. ಬಾಳು-ಬದುಕು

ಬಾಳಿಗೇನಾದರೂ ಮಹತ್ವವಿದೆಯೆ? ಅದಕ್ಕೆ ಏನಾದರೂ ಅರ್ಥ ವುಂಟೆ? ಬಾಳು ಎಂದರೇನು-ಬರೀ ಬದುಕೆ?

ಕೆಳಗಿನ ಪ್ರಾಣಿವರ್ಗಕ್ಕೂ ಮನುಷ್ಯನಿಗೂ ಇಚ್ಛಾಬಲದ–ಸಂಕಲ್ಪ ಶಕ್ತಿಯ ಭೇದವಿದೆ. ನಾವದನ್ನು ಅರಿತಿದೇವೆ. ಆದುದರಿಂದ ಮನುಷ್ಯ ಎಂಥವನು ಎಂಬುದು ಅವನು ಬಾಳಿನ ಬೆಲಿಗಳನ್ನು ಹೇಗೆ ಕಟ್ಟುತ್ತಾನೆ ಎಂಬುವನ್ನು ಅವಲಂಬಿಸಿದೆ. ತನ್ನ ಇಚ್ಛೆಯಂತೆ ಅವನು ಬೆಲೆ ಕಟ್ಟ ಬಹುದು. ಎಂದರೆ ಮನುಷ್ಯ ತಾನು ಎಂಥವನಾಗಬೇಕೆಂಬುದನ್ನು ತಾನೇ ಇಚ್ಛಿಸಿದ ಹಾಗೆ. ಮನುಷ್ಯನ ಗುಣ–ಶಕ್ತಿಗಳು ಅವನ ಬದುಕಿನ ರೀತಿಯಲ್ಲಿ ಪ್ರಕಟವಾಗುತ್ತವೆ. ಅದನ್ನೆ 'ವ್ಯಕ್ತಿತ್ವ' ಎನ್ನುತ್ತೇವೆ. ಮನುಷ್ಯನ ವಿಕಾಸಕ್ಕೆ ಆಧಾರವಾದುದು ಬಾಳು ; ಅವನ ಸೃಷ್ಟಿಶಕ್ತಿಯ ದ್ವಾರಾ ಅವನು ವ್ಯಕ್ತನಾಗುವಂತೆ, ಪ್ರಕಟವಾಗುವ ಅವಕಾಶ ಕೊಡು ವುದು ಬಾಳು. ಆದುದರಿಂದಲೇ ಮನುಷ್ಯರು ಹೇಗೆ ಬದುಕುತ್ತಾರೆ, ಹೇಗೆ ಬದುಕಬೇಕು ಎಂಬುದು ಮುಖ್ಯ.

ಮನುಷ್ಯ ಒಬ್ಬ ಕಲೆಗಾರ. ಅವನ ಮೂಲ್ಯಗಳೇ ಅವನ ಬಣ್ಣ. ಅವನ ಇಚ್ಛಾಬಲವೇ ಅವನ ಕುಂಚ. ಬಾಳು ಅವನ ಕೈಯಲ್ಲಿರುವ ಪಟ. ಅದರ ಮೇಲೆ ಆ ಕುಂಚದಿಂದ ಅವನು ಹೇಗೆ ಗೆರೆ ಎಳೆದರೆ ಹಾಗೆ ಚಿತ್ರ ಮೂಡುತ್ತದೆ. ಮಾನವ ಲೋಕದ ಪ್ರಗತಿಗೆ ಅದು ಸಾಧಕವಾಗ ಬಹುದು, ಬಾಧಕವಾಗಲೂ ಬಹುದು. ಸ್ವಾರ್ಥಮಯ ಮೂಲ್ಯಗಳು ನೀರುಬಣ್ಣವಿದ್ದ ಹಾಗೆ. ದಿನ ಕಳೆದ ಹಾಗೆ ಆ ಬಣ್ಣ ಅಳಿಸುತ್ತದೆ. ಅದು ಬಹು ಕಾಲ ಬಾಳದು. ಹಿಂಸೆಯಿಂದ ವಿರೂಪವಾಗುತ್ತದೆ. ನಿಸ್ವಾರ್ಥ ಮೂಲ್ಯಗಳು, ಅಜಂತಾದಲ್ಲಿ ಶತಮಾನ ಹಲವಾದರೂ ಅಚ್ಚ ಳಿಯದಿರುವ ಮೃದ್ವರ್ಣಗಳಂತೆ. ಅಂಥ ಬಣ್ಣದಲ್ಲಿ ಚಿತ್ರಿಸಿದ ಅವನ ಚಿತ್ರಗಳು ಶಾಶ್ವತವಾಗಿ ಅಹಿಂಸಾಮಯವಾಗಿ ಪೀಳಿಗೆ ಪೀಳಿಗೆಗಳಿಗಾಗಿ ತಮ್ಮ ಸಂದೇಶ ಸಾರುತ್ತ ಬರುತ್ತವೆ.

ಹೀಗಿದೆ ಮನುಷ್ಯನ ಜವಾಬದಾರಿ. ಹೀಗಿರುವಾಗ ತನ್ನ ಬಾಳನ್ನು ಅವನು ತೆಪ್ಪನೆ ಇತರರ ಕೈಯಲ್ಲಿ ಒಪ್ಪಿಸಲಾದೀತೆ ? ಪ್ರತಿಯೊಬ್ಬನೂ ತನ್ನ ಬಾಳಿನ ರೀತಿಗೆ ತಾನೇ ಜವಾಬದಾರ. ತನ್ನ ಸ್ವಂತ ಚಿತ್ರಕ್ಕೆ ಬದಲು ಯಾರೋ ಒಟ್ಟುಗಟ್ಟಲೆ ಮಾಡಿಕೊಟ್ಟ ಕಲ್ಲಚ್ಚಿನ ನಕಲು ಚಿತ್ರವನ್ನು ಕೊಡಲಾದೀತೆ ?

ಈಗಿನ ಭಾರಿ ಕೈಗಾರಿಕೆಗಳ, ಒಂದೇ ಪಡಿಯಚ್ಚಿನ ಉತ್ಪಾದನೆ ಮನುಷ್ಯರು ಹೇಗೆ ಬದುಕಬೇಕೆಂಬುದನ್ನು ನಿರ್ಣಯಿಸುತ್ತದೆ. ನಮಗೆ ಬೇಕಾದ ಬಗೆಯ ಪದಾರ್ಥಗಳನ್ನು ನಾವು ಕೇಳುವಂತಿಲ್ಲ. ಉತ್ಪಾದಕರು ರಾಶಿಗಟ್ಟಲೆ ತಯಾರುಮಾಡಿ ಸುರಿದುದನ್ನು ಕಣ್ಣುಮುಚ್ಚಿ ತೆಗೆದುಕೊಳ್ಳಬೇಕಾಗುತ್ತದೆ. ಹೀಗೆ ನಾವು ನಿಷ್ಕ್ರಿಯರಾಗಿದ್ದರೆ, ಉದಾಸೀನರಾಗಿದ್ದರೆ ಜವಾಬದಾರಿಯನ್ನು ನಿರ್ವಹಿಸಿದಂತಾಗದು. ನಾವು ಕ್ರಿಯಾಶೀಲರಾಗಬೇಕು.

ಈ ತಲೆಮಾರಿನಲ್ಲಿ ಆದ ಎರಡು ಜಗತ್ - ಸಂಗ್ರಾಮಗಳೇ ಈ ಕಾಲದ ಸಂಸ್ಥೆ - ಸಂಘಟನೆಗಳ ಸರ್ವನಾಶಕ ಸ್ವಭಾವಕ್ಕೆ ಸಾಕ್ಷಿ. ವಿಜ್ಞಾನ ಸಹಜವಾಗಿ ವಾಸ್ತವವೂ ಸೃಷ್ಟಿಶಕ್ತಿ ಸಂಪನ್ನವೂ ಆಗಿರಬೇಕು. ಅದನ್ನು ವಿನಾಶಕ ವಿದ್ಯೆಯಾಗಿ ಮಾಡಿದಾರೆ. ಅಹಿಂಸೆ, ನಿತ್ಯತೆಗಳ ಸ್ಥಿರ ತಳಹದಿಯ ಮೇಲೆ ನಿಲ್ಲದೆ ಶ್ರೇಷ್ಠ ವಿಜ್ಞಾನಿಗಳು ಹಿಂಸೆಯ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಗುತ್ತಿದಾರೆ. ಮಾನವಜೀವನ ಕ್ಷೇತ್ರದಲ್ಲಿ ಅದು ಸಾವು - ಸರ್ವನಾಶಗಳನ್ನು ಹರಿಯಿಸುತ್ತ ಹೋಗುತ್ತಿದೆ. ತಾವು ತಟಸ್ಥರಾಗಿದೇವೆಂದು ಆ ವಿಜ್ಞಾನಿಗಳ ನಂಬಿಕೆ. ಇದು ಆತ್ಮವಂಚನೆ. ತಾಟಸ್ಥ್ಯವೇ ಇಲ್ಲ. ನಾವು ಸೃಜಕ–ಬ್ರಹ್ಮರು, ಇಲ್ಲವೆ ಸಂಹಾರಕ–ರುದ್ರರು. ತಮ್ಮ ಇಚ್ಛಾಬಲವನ್ನು ಸಂಹಾರ ಕಾರ್ಯಕ್ಕೆ ಉಪಯೋಗಿಸಿ ಪ್ರಳಯ ಕಾರಣರಾಗಿದಾರೆ ವಿಜ್ಞಾನಿಗಳು.

ಭೌತಿಕ ವಿನಾಶ ಎಷ್ಟೇ ಆದರೂ ಅದೇನು ಮಹತ್ವದ್ದಲ್ಲ. ಎಲ್ಲಕಿಂತ ಹೆಚ್ಚಿನ ನಷ್ಟ, ಅರಳಬೇಕಾದ ಅರಳಾಗಬೇಕಾದ ಬಾಳುಗಳ ಭವಣೆ. ಒಂದು ಹುಲಿ ಒಬ್ಬ ವಿಜ್ಞಾನಿಯನ್ನು ಕೊಂದರೆ ಅದಕ್ಕೆ ಆದ ಲಾಭವೇನು? ಬಹುಶಃ ಮೂರು ಮಣ ಮಾಂಸ, ಸ್ವಲ್ಪ ಬಿಸಿ ನೆತ್ತರು. ಇವರಿಂದ ಬರುವ ಪುಷ್ಟಿ ಸಸ್ಯಾಹಾರದಿಂದಲೂ ಸಿಗುತ್ತದೆ–ಸಸ್ಯ ತಿನ್ನುವ ನಾಲಗೆ, ಅರಗಿಸುವ ಹೊಟ್ಟೆ ಇದ್ದರೆ. ಆದರೆ ಮಾನವಲೋಕಕ್ಕೆ ಆದ ನಷ್ಟವೋ? ಬರೀ ಮಾಂಸ ರಕ್ತವಲ್ಲ; ನೂರಾರು ವರ್ಷ, ಹಲವು ತಲೆಮಾರು ಕೃಷಿ ಮಾಡಿ ಪಡೆದ ಸಂಸ್ಕಾರಗಳ ಫಲವಾದ ಉತ್ತಮ ಗುಣಗಳೆಲ್ಲ ಹುಲಿಯ ಪಾಲಾದವು. ನಮಗೆ ಆದ ನಷ್ಟ ಅಪಾರ, ಹುಲಿಗೆ ಆದ ಲಾಭ ಅತ್ಯಲ್ಪ,

ಅ–ಗಣನೀಯ. ನಿತ್ಯತೆಯ ಮೆಟ್ಟಲೇರುತ್ತಿದ್ದ ಜೀವನದ ಉತ್ತಮಾಂಶ ಹುಲಿಯ ಪರೋಪಜೀವನದ ಕೃತಿಯಿಂದ ನಾಶವಾಯಿತು. ಹುಲಿಗೆ ಆದ ಲಾಭವೂ ಆ ಗಳಿಗೆಯದು, ಒಂದು ಹೊತ್ತಿನ ಹಸಿವಿನ ತೃಪ್ತಿ. ಅದಕ್ಕಾಗಿ ಶಾಶ್ವತ ಹಾನಿ! ಜ್ಞಾನ, ಪ್ರೇಮ, ಸೃಷ್ಟಿಗಳಿಂದ ತುಂಬಿದ ಆ ವಿಜ್ಞಾನಿಯ ಉತ್ತಮ ಜೀವನ ಆ ದುಷ್ಟ, ಪರಪೀಡಕ ಮೃಗಕ್ಕೆ ಲೆಕ್ಕವೇ ಇಲ್ಲ.

ಇದೇ ರೀತಿ ಈ ಯುದ್ಧಗಳಲ್ಲಿ ಆಗುವ ಅಪಾರ ವಿನಾಶ, ಅಸಂಖ್ಯ ಮರಣ ಮಾನವಪ್ರಯತ್ನದಿಂದ ಸರಿಪಡಿಸಲು ಸಾಧ್ಯವಿಲ್ಲದುದು. ಇಂಥ ಪ್ರಳಯಗಳಿಂದ ಮಾನವ ಪ್ರಗತಿ, ನಾಗರಿಕತೆಗಳು ಸಾವಿರಾರು ವರ್ಷ ಹಿಂದಕ್ಕೆ ಸರಿಯುತ್ತವೆ.

ಸೊಗಸಾದ ಕಸಿಮಾವಿನ ಹಣ್ಣಿನ ಗಿಡವನ್ನು ಫಲಬಿಡುತ್ತಿರುವಾಗ ಯಾವ ತೋಟಗಾರ ಸೌದೆಗಾಗಿ ಕಡಿಯುತ್ತಾನೆ? ಆದರೂ ಮನುಷ್ಯ ತನ್ನ ಮಕ್ಕಳನ್ನೇ ಯುದ್ಧದಲ್ಲಿ ಬಲಿಕೊಡುತ್ತಾನೆ. ಅದೂ ಹೆಮ್ಮೆಯಿಂದ! ಇದಲ್ಲವೆ ವಿಚಿತ್ರ? ಹಿಂಸೆಯನ್ನು ಹೊಗಳಿ ಹೊಗಳಿದರೆ ಅದು ಹೀಗೆ ವಿಜೃಂಭಿಸುತ್ತದೆ. ಪ್ರಚಾರದ ಫಲ.

ಇಲ್ಲಿ ಒಂದು ಮಾತನ್ನು ಹೇಳಬಹುದು: ಧಾರ್ಮಿಕ ಭಾವನೆ, ಅಹಿಂಸಾ ತತ್ವಗಳ ಮಾತನ್ನು ಬಿಟ್ಟರೂ ಈ ತರ್ಕದಿಂದಲೇ ಮಾಂಸಾಹಾರ ದೂಷ್ಯವಾಗುತ್ತದೆ. ತನ್ನ ಆಹಾರಕ್ಕಾಗಿ ಇತರ ಪ್ರಾಣಿಗಳನ್ನು ಕೊಲ್ಲುವ ಪರೋಪಜೀವನ ಸಲ್ಲದು. ಮಾಂಸ ತಿನ್ನುವವನಿಗೆ ಸಿಗುವ ಸೇರು ಆಹಾರವನ್ನು ಸಸ್ಯಗಳು ಕೊಡಬಲ್ಲವು. ಆದರೆ ಪ್ರಕೃತಿ ಕಳೆದುಕೊಳ್ಳುವ ಪಕ್ಷಿಗಳ ಗಾನ, ಪ್ರಾಣಿಗಳ ಪ್ರೀತಿ ಮುಂತಾದ ಸ್ವಾಭಾವಿಕ ಗುಣಗಳ ಅಮೂಲ್ಯ ಆವಿಷ್ಕರಣವನ್ನು ಮತ್ತೆ ಎಲ್ಲಿಂದ ತರಬೇಕು? ಮನುಷ್ಯನ ಸೃಷ್ಟಿಶಕ್ತಿಯ ಹಾಗೆಯೇ ಅವೂ ಅಲಭ್ಯ. ಮಾಂಸಾಹಾರ ಅನಿತ್ಯವಾದ ಪರೋಪಜೀವನ ವಿಧಾನ; ಪೂರ್ಣ ಹಿಂಸಾಮಯ. ಆ ವಿಧಾನವನ್ನು ಅವಲಂಬಿಸಿದವನು ಮಾನವ ಜೀವನದಲ್ಲಿ ತೀರಾ ಕೆಳಗಿನ ಅಧಮ ತರಗತಿಗೆ ಇಳಿಯುತ್ತಾನೆ.

ಬಾಳಿನ ಈ ವಿಚಾರಗಳನ್ನು ಆ ಐದು ಬಗೆಯ ಆರ್ಥಿಕ ವಿಧಾನಗಳಿಗೆ ಅನ್ವಯಿಸಿದರೆ, ಪರೋಪಜೀವನ ಬರೀ ಅನುಕರಣ; ಪರಾಪಹಾರ ಅನುಸರಣ; ಪ್ರಯತ್ನಶೀಲತೆ ಪದಾರ್ಥನಿರ್ಮಾಣ; ಸಂಘಜೀವನ ಸಾಮಾಜಿಕ ಕೃತಿ, ಇತರರ ಬಾಳಿನಲ್ಲಿ ಭಾಗವಹಿಸುವ ಪರಹಿತಕಾರಿತನ ಉದಾತ, ಗಾಂಭೀರ್ಯ–ಹೀಗೆ ಆಗುತ್ತವೆ.

ಅನುಕರಣಶೀಲ ವರ್ಗ: ಈ ವರ್ಗಕ್ಕೆ ಸೇರಿದ ಜನ ತಾವು ಏನನ್ನೂ ನೀಡರು, ಮಾಡರು. ಇತರರು ಮಾಡಿದುದನ್ನು ನೋಡಿ ಅದನ್ನೇ ಅನುಕರಿಸಿ ಅದರ ಲಾಭವನ್ನೆಲ್ಲ ಪಡೆಯುತ್ತಾರೆ. ಅವರ ಮುಖ್ಯ ಉದ್ದೇಶ್ಯ ಸುಖ-ಸಂತೋಷ, ಸ್ವಾರ್ಥತೃಪ್ತಿ. ಅದನ್ನು ಪಡೆಯಲು ಅತಿ ಸುಲಭ ಮಾರ್ಗ ಬೇಕು. ಸಾಧಾರಣವಾಗಿ ಇಂಥವರು ಇತರರ ಬದುಕನ್ನು ಅವಲಂಬಿಸಿ ಬದುಕುತ್ತಾರೆ. ಇವರದು ಬರೀ ಬದುಕು, ಬರೀ ಅಸ್ತಿತ್ವ. ಬರೀ ಮಣ್ಣಾದರೂ ಚಂದ್ರನಂತೆ ಇತರರ ಕಳೆಯಿಂದ ಮೆರೆಯುವ ಜನ ಇವರು. ಇವರಿಗೆ ವ್ಯಕ್ತಿತ್ವ ಎಂಬುದೇ ಇಲ್ಲ. ಇವರಿಂದ ಯಾರೂ ಏನೂ ಕಲಿಯಬೇಕಾಗಿಲ್ಲ. ಹೇಸರಕತ್ತೆಯಂತೆ ಇವರು ವ್ಯರ್ಥಜೀವಿಗಳು. ಇತ್ತ ಕತ್ತೆಯೂ ಅಲ್ಲ. ಅತ್ತ ಕುದುರೆಯೂ ಅಲ್ಲ. ಅದಕ್ಕೆ ಸಂತಾನವೂ ಇಲ್ಲ. ನಿಸ್ಸಂತತಿಯಾಗಿ ಅದು ಸಾಯುತ್ತದೆ. ಹೀಗೆ ಅನುಕರಣಶೀಲರಿಗೆ ಸೃಷ್ಟಿಶಕ್ತಿಯಿಲ್ಲ. ಇದ್ದರೂ ಅದು ಸುಪ್ತ. ಅದಕ್ಕೆ ವಿಕಾಸಾವಕಾಶವಿಲ್ಲ. ವಾತಾವರಣ ವ್ಯತ್ಯಾಸವಾದರೆ ಸಮಾಜದ ಸಾಮೂಹಿಕ ಪ್ರಗತಿಗೆ ಸ್ವಲ್ಪ ಸಾಧಕವಾದರೂ ಆಗಬಹುದು. ಆದರೆ ಏನೂ ಕ್ರಿಯೆ-ಕರ್ಮ ಇಲ್ಲದೆ ಇರುವಷ್ಟು ದಿನ ಅಂಥ ಗುಂಪು ಇರುವುದೆಂದರೆ ಸಮಾಜಕ್ಕೆ ಅಷ್ಟು ಮಟ್ಟಿಗೆ ನಷ್ಟ. ಅವರು ಉತ್ಪಾದನೆ ಮಾಡದೆ ತಿನ್ನುತ್ತಾರೆ. ಅವರ ಬಾಳು ಕಲಾಕೃತಿಯಲ್ಲ, ಅಚ್ಚುಕೂಟದಿಂದ ಬರುವ ಬಣ್ಣವೇ ಇಲ್ಲದ ಕಪ್ಪು-ಬಿಳುಪಿನ ಬರೀ ಗೊಂದಲ.

ಈ ಶತಮಾನದ ಆರಂಭದಲ್ಲಿ ಪಾಶ್ಚಿಮಾತ್ಯರನ್ನು ಎಲ್ಲಾ ಬಗೆಯಲ್ಲೂ ಅನುಕರಿಸಿ ಜಪಾನೀಗಳು ಈ ಗುಂಪಿಗೆ ಸೇರಿದರು. ಹಿಂದೆ ಭಾರತ, ಚೀನಾಗಳ ಜೊತೆಗಳಲ್ಲಿ ತಾವು ಅನುಸರಿಸುತ್ತಿದ್ದ ಶಾಶ್ವತ

ಆರ್ಥಿಕ ವಿಧಾನವನ್ನು ಬಿಟ್ಟು ಅನುಕರಣಪರತೆಯನ್ನು ಕಲಿತರು. ಅದರ ಪರಿಣಾಮ ಪರೋಪಜೀವನದ ಆರ್ಥಿಕವಿಧಾನದ ಅವಲಂಬನೆ; ಮಂಚೂರಿಯಾ, ಚೀನಾಗಳ ಆಕ್ರಮಣ. ಅಹಿಂಸೆಯನ್ನು ಕೈಬಿಟ್ಟು ಈಗ ಅವರು ಹಿಂಸೆ ವಿನಾಶಗಳನ್ನು ಆರಾಧಿಸುತ್ತಿದಾರೆ.

ಅನುಸರಣಶೀಲ ವರ್ಗ: ಈ ಗುಂಪಿಗೆ ಸೇರಿದವರ ಸೂತ್ರ: ಸಾಲ ಮಾಡಿಯಾದರೂ ಸುಖಪಡು. ನಾಳೆ ಏನೋ ಯಾರೋ? ಹಿಂದಿನ ಗುಂಪಿನವರ ಹಾಗೇ ಇವರೂ ಇತರರ ಅನುಕರಣ ಮಾಡುವವರೇ. ಭೇದ ಇಷ್ಟೇ. ಇತರರ ಸೃಷ್ಟಿಯನ್ನು ಸ್ವಲ್ಪ ವ್ಯತ್ಯಾಸಮಾಡಿ ಇವರು ತಮ್ಮದೆನ್ನುವ ಹಾಗೆ ಮಾಡುತ್ತಾರೆ. ಆದರೆ ಸ್ವತಂತ್ರ ಎನ್ನುವಂತಿಲ್ಲ ಅದು.

ಇತರರ ಸ್ವತಂತ್ರ ರಚನೆಯನ್ನು ಅವಲಂಬಿಸಿ ತಮ್ಮದನ್ನು ನಿರ್ಮಿಸುವ ಜನಕ್ಕೆ ಈಗಿನ ಜಪಾನೀಗಳು ಒಳ್ಳೇ ಉದಾಹರಣೆ. ಹಿಂದೆ ಪಾಶ್ಚಿಮಾತ್ಯರಿಂದ ತಾವು ಕಲಿತದನ್ನೆಲ್ಲ ತಮ್ಮ ದೇಶಕ್ಕೆ ಅಳವಡಿಸಿಕೊಂಡರು. ಉದಾಹರಣೆಗೆ-ಭಾರಿ ಕೈಗಾರಿಕೆಗಳನ್ನು ಪಶ್ಚಿಮದವರಿಂದ ಕಲಿತರು. ಕೇಂದ್ರಿತವಾದ ಆ ಗಿರಣಿಗಳ ವಿಸ್ತಾರವನ್ನು ಒಡೆದು ಚಿಕ್ಕ ಚಿಕ್ಕ ಗೃಹೋದ್ಯೋಗಗಳನ್ನಾಗಿ ಮಾಡಿದರು. ಬೇರೆ ಬೇರೆ ಕಡೆ ಭಾಗಗಳನ್ನು ಮಾಡಿ ತಂದು, ಒಂದು ಕೇಂದ್ರ ಕರ್ಮಾಲಯದಲ್ಲಿ ಅವನ್ನೆಲ್ಲ ಜೋಡಿಸಿ ಬೆಸೆದರು. ಇಂಗ್ಲೆಂಡಿನಲ್ಲಿ ಬಿ.ಎಸ್.ಎ. ಕಂಪನಿ ಇಡೀ ಬೈಸಿಕಲ್ಲನ್ನು ನಿರ್ಮಿಸುತ್ತದೆ. ಜಪಾನು ಮನೆ ಮನೆಗೂ ಉಪಕರಣಗಳನ್ನು ಕೊಟ್ಟು ಆ ಕೆಲಸ ಮಾಡಿಸುತ್ತದೆ. ಒಬ್ಬೊಬ್ಬರು ಒಂದೊಂದು ಭಾಗವನ್ನು ಮಾಡುತ್ತಾರೆ. ಅವೆಲ್ಲವನ್ನೂ ಕಲೆಹಾಕಿ ಕೇಂದ್ರ ಕರ್ಮಾಲಯದಲ್ಲಿ ಪೂರ್ಣಯಂತ್ರವನ್ನು ರಚಿಸುತ್ತಾರೆ.

ಕೇವಲ ಅನುಕರಣಶೀಲರಲ್ಲದಿದ್ದರೂ ನಮ್ಮಲ್ಲಿ ಕೆಲವರು ವೇಷಾದಿಗಳಲ್ಲಿ ಪಾಶ್ಚಿಮಾತ್ಯರಂತೆ ನಡೆಯುತ್ತಾರೆ. ಅದರ ಪರಿಣಾಮ ವಿಕಾರ. ಒಬ್ಬ ಆಧುನಿಕ ಒಂದು ಓಪನ್ ಕಾಲರ್ ಅಂಗಿಯನ್ನು ತೊಟ್ಟು ನಿಷ್ಪ್ರಯೋಜಕವಾದ ನೆಕ್‌ಟೈಯನ್ನೂ ರಟ್ಟಿನಂಥ ಕೊರಳ ಪಟ್ಟಿಯನ್ನೂ ಈ ಬಿಸಿಲಿನ ಸೀಮೆಗೆ ತಕ್ಕಂತೆ ಬಿಡಬಹುದು.

ತಣ್ಣಗಿರಲಿ ಎಂದು ಒಳ ಅಂಗಿಯನ್ನು ಪರಾಯಿಯು ಮೇಲೆ ಬಿಡಬಹುದು. ಕಾಲುಚೀಲವಿಲ್ಲದೆ ಕಾಲಿಗೆ ಬೂಟ್ಸು ತೊಡಬಹುದು. ಬೂಡ್ಸು ತುಟ್ಟಿ ತಾನೆ. ಪೂರಾ ಪಾಶ್ಚಿಮಾತ್ಯ ವೇಷವನ್ನೇ ತೊಡು ವವನಿಗೆ ಇದು ಅಸಹ್ಯವಾದರೂ ಇದರಲ್ಲಿ ಸ್ವಲ್ಪ ಸ್ವತಂತ್ರ ಬುದ್ಧಿಯಿದೆ. ಇಂಥ ಜನ ಅಗ್ಗವಾದ ಕಲ್ಲಚ್ಚಿನ ಚಿತ್ರಗಳಂತೆ. ಅವರಿಗೆ ಇಚ್ಛಾಬಲವಿದೆ, ಆರಿಸುವ ಶಕ್ತಿಯಿದೆ. ಆದರೆ ಯಾವುದನ್ನಾದರೂ ಸಮಗ್ರವಾಗಿ ಮಾಡುವ ದೃಷ್ಟಿಯಿಲ್ಲ. ಅಥವಾ ಸೋಮಾರಿಗಳು. ಅವರು ಮಾಡಿದ ತೇಪೆಯ ಕೆಲಸ ಅಸ್ಥಿರ. ತಮಗೆ ಬೇಕಾದುದನ್ನು ಕೂಡಲೇ ಪಡೆಯ ಬೇಕೆಂಬ ಆಸೆ ಅವರನ್ನು ಹಿಂಸೆಯ ದಾರಿಗೆ ಎಳೆತರುತ್ತದೆ.

**ರಚನಾಶೀಲ ವರ್ಗ :** ಇದು ಪ್ರಯತ್ನಶೀಲ ವರ್ಗದ ಜನರ ಕ್ಷೇತ್ರ. ಯಾರು ಹೇಗಾದರೂ ಹೋಗಲಿ, ನಾನು ಸುಖವಾಗಿದ್ದರೆ ಸಾಕು ಎಂಬ ಸೂತ್ರ ಇವರದು. ಇತರರ ಕಷ್ಟ-ಸುಖದ ಪರಿವೆಯಿಲ್ಲದೆ ತಮ್ಮ ಬದುಕನ್ನು ಹಾಯಾಗಿ ನಡೆಸಬಯಸುವ ಜನ ಇವರು. ಇವರಿಗೆ ಸ್ವತಂತ್ರ ವಿಚಾರವುಂಟು. ತಮ್ಮ ಸ್ವಲಾಭಕ್ಕಾಗಿ ಅದನ್ನು ಇವರು ಕೃತಿಯಲ್ಲಿ ತರುವುದೂ ಉಂಟು. ಪ್ರತಿಯೊಬ್ಬರೂ ತಮ್ಮ ನಿತ್ಯಜೀವನದ ರೀತಿಯಲ್ಲಿ ಸ್ವತಂತ್ರರಾಗಿದ್ದರೆ ಅದೊಂದು ರೀತಿ. ಈಗ ಹಾಗಿಲ್ಲ. ಈಗ ಪದಾರ್ಥಗಳನ್ನು ತಯಾರಿಸುವವರು ಹೇಗೆ ಪಂಕ್ತಿ ಹಾಕಿಕೊಟ್ಟರೆ ಗಿರಾಕಿ ಗಳಾದ ನಾವು ಹಾಗೆ ತೀಡಬೇಕು. ಇದರಿಂದ ಗಿರಾಕಿಗೆ ಬೇಕಾದುದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವೂ ಇಲ್ಲ. ಅವನ ಸೃಷ್ಟಿಶಕ್ತಿಗೂ ಅವಕಾಶ ವಿಲ್ಲದೆ ಅದು ಬಾಡಿ ಬತ್ತಿಹೋಗುತ್ತದೆ.

ರಸಿಕಜನ ಸಂದೋಹ ಮೆಚ್ಚುವಂತೆ ಬರೀ ಬೆನ್ನಿಗೆ ದುಂಬಿಗಳ ಚಿತ್ರವನ್ನು ಬರೆಯಿಸಿಕೊಂಡು ಓಡಾಡುವುದೇ ಸೌಂದರ್ಯ ಎಂದು ಫ್ರಾನ್ಸಿ ನಲ್ಲಿ ಸೌಂದರ್ಯಪಂಡಿತ ಹೇಳಿಯಾನು. ಸೊಗಸುಗಾತಿಯರೆನಿಸಿಕೊಳ್ಳುವ ಬಯಕೆಯುಳ್ಳ ಹೆಂಗಸರೆಲ್ಲ ಸೌಂದರ್ಯಶಾಲೆಗಳಿಗೆ ಹೋಗಿ, ಅರೆ-ನಗ್ನ ಸ್ನಾನವಸ್ತ್ರಗಳನ್ನು ಧರಿಸಿ, ದುಂಬಿಯ ಚಿತ್ರ ಬರೆಯಿಸಿಕೊಂಡ ಬರಿ ಬೆನ್ನಿ ನಿಂದ ಸಮುದ್ರತೀರಕ್ಕೆ ವಿಹಾರಾರ್ಥ ಹೋಗುತ್ತಾರೆ. ಅವರನ್ನು ನೋಡಿ ಜನ ದಂಗುಬಡಿದಾರು. ಪಾಶ್ಚಿಮಾತ್ಯ ವಿಲಾಸ ವೈಖರಿಯಲ್ಲಿ ಜಗತ್ತಿಗೇ

ಅಗ್ರಗಾಮಿ ಪ್ಯಾರಿಸ್. ಲಂಡನ್ ಅದನ್ನು ಅನುಕರಿಸಿ ವ್ಯಾಪಾರಕ್ಕೆ ಅಳವಡಿಸುತ್ತದೆ. ನ್ಯೂಯಾರ್ಕ್ ಅದನ್ನು ಅನುಸರಿಸಿ ಒಂದು ಏಕ ರೂಪಕ್ಕೆ ತರುತ್ತದೆ.

ಪಶ್ಚಿಮ ದೇಶದಲ್ಲಿ ಬಂದಿರುವ ಈ ಏಕರೂಪತೆ ಜನರ (ಗಿರಾಕಿಗಳ) ಬಾಳಿನಲ್ಲಿ ಸ್ವತಂತ್ರ ಭಾವನಾಶಕ್ತಿ ಹೊರ ಹೊಮ್ಮದಂತೆ ಮಾಡಿದೆ. ಅದನ್ನು ಕೊಂದಿದೆ. ಸರ್ವ ಸಾಮಾನ್ಯ ಪದ್ಧತಿಯನ್ನು ಬಿಟ್ಟರೆ ಜನರು ಏನೆನ್ನುತ್ತಾರೋ ಎಂಬುದೇ ಚಿಂತೆ. ಮನೆಯೊಳಗಿನ ಜೀವನವೂ ಹೊರಗಿನವರು – ಕಚೇರಿ, ಶ್ರೀಮಂತರ ಕೂಟ, ವ್ಯಾಪಾರ ಸಂಸ್ಥೆ–ಹಾಕಿಕೊಟ್ಟ ಮಾದರಿಗಳಂತೆ ನಡೆಯಬೇಕಾಗಿದೆ.

ಕೆಲವು ದಿನ ಗುಂಡು ತಟ್ಟೆಗಳಲ್ಲಿ ತಿಂಡಿ ತಿನ್ನುವುದು ಶಿಷ್ಟಾಚಾರ. ಇನ್ನು ಕೆಲವು ದಿನಕ್ಕೆ ಬಾದಾಮಿ ತಟ್ಟೆಗಳಲ್ಲಿ ತಿನ್ನುವುದು ಶಿಷ್ಟಾಚಾರ. ಒಂದು ದಿನ ಚಮಚಾ ಬೇಕು ಇನ್ನೊಂದು ದಿನ ಬೇಡ. ಹೀಗೆ ದಿನಕ್ಕೊಂದು ಆಚಾರವಾದರೆ ವರ್ತಕನಿಗೂ, ಉತ್ಪಾದಕನಿಗೂ ಲಾಭವೇ. ಕೊಳ್ಳುವ ಬಡವನಿಗೋ? ಮನೆಯಲ್ಲಿ ಒಂದೇ ಬಗೆಯ ವಸ್ತುಗಳು ಬಹು ಕಾಲ ಬಳಕೆಯಲ್ಲಿದ್ದರೆ, ತಂದೆ ಕೊಂಡವು ಮಗನಿಗೆ ಉಪಯೋಗವಾದರೆ, ವ್ಯಾಪಾರಕ್ಕೆ ಕಷ್ಟ. ಗಿರಾಕಿ ಬೆಳೆಯಲಿಲ್ಲ. ತಿಂಗಳಿಗೊಂದು ಸಂಪ್ರದಾಯವಾದರೆ ಹೊಸಹೊಸ ಪದಾರ್ಥಬೇಕಾಗಿ, ವ್ಯಾಪಾರಕ್ಕೆ ಅವಕಾಶ ಹೆಚ್ಚುತ್ತದೆ.

ಇಂಥ ಅರ್ಥವಿಲ್ಲದ ಆಚಾರಗಳನ್ನು ಅನುಸರಿಸುವ ಜನ ಅರಿವಿಲ್ಲದವರು ಅಥವಾ ಸಮಾಜದಲ್ಲಿ ಮೇಲಕ್ಕೆ ಬರಬೇಕೆನ್ನುವವರು. ತಮ್ಮ ಪ್ರಚಾರ ಕೌಶಲದಿಂದ ಜಾಣ ವರ್ತಕರು ಗಿರಾಕಿಯಿಲ್ಲದ ಕಡೆ ಇವಕ್ಕೆ ಗಿರಾಕಿ ಹುಟ್ಟಿಸುತ್ತಾರೆ. ಈ ಆಚಾರ–ಪ್ರಚಾರಗಳಿಗೆ ಬಲಿಯಾಗುವ ಜನ ಕ್ರಮೇಣ ಆತ್ಮವಿಶ್ವಾಸವನ್ನು ಕಳೆದುಕೊಂಡು, ದೀನರಾಗಿ, ತಮ್ಮ ರಚನಾಶಕ್ತಿಯನ್ನು ಬತ್ತಿಸಿ ಬಾಳನ್ನು ಬರೀ ಬೇಸರಾಗಿ ಮಾಡಿಕೊಳ್ಳುತ್ತಾರೆ.

ಬೊಂಬಾಯಿನ ಹಲವು ಚಾಳಗಳನ್ನು ನೋಡಿದರೆ ಅಲ್ಲಿನ ಎಲ್ಲಾ ಮನೆಗಳಲ್ಲೂ ಏನಿರಬಹುದೆಂಬುದನ್ನು ಊಹಿಸಬಹುದು. ಒಂದೇ

ರೀತಿಯ ಕುರ್ಚಿ-ಮೇಜುಗಳು, ಅದೇ ಹೂದಾನಿ, ಎಲ್ಲಾ ಒಂದೇ 'ಕಿಸಬಾಯಿ' ರೀತಿ. ಯಾವ ಮನೆಗೆ ಹೋದರೂ ಅದೇ. ವೈವಿಧ್ಯ ವಿಲ್ಲ, ನವ್ಯತೆಯಿಲ್ಲ, ಭಾವ-ಕಲ್ಪನೆ ಇಲ್ಲ; ಒಂದೇ ನಿರ್ಜೀವ ಮಾದರಿ. ಹಳೆಯ ಕಾಲದ ಗೋರಿಗಳಲ್ಲಾದರೂ ಕಲೆ-ಶಿಲ್ಪ ಕಂಡೀತು. ಜೋಂಬಾ ಯಲ್ಲಿ ಬದುಕಿರುವ ಜನರ ಮನೆಯಲ್ಲಿ ಕಾಣಬಾರದು. ಗೋರಿಗಳ ಲ್ಲಾದರೂ ಜೀವವಿದೆ. ಈ ಮನೆಗಳಲ್ಲಿ ಜೀವವೇ ಇಲ್ಲ. ಬದುಕನ್ನು ಓೀಗೆ ಸುಖಮಯ-ಸರಾಗ ಆಗಿಮಾಡುವ ನೆಪದಲ್ಲಿ ನಮಗೆ ಬೇಕಾದುದ ನ್ನೆಲ್ಲ ಮಾಡುವವನು ಉತ್ಪಾದಕ. ಜನರ ಉತ್ತಮ ಗುಣ-ಭಾವನೆ ಗಳನ್ನು ಲಯಗೊಳಿಸಿ ಅಭ್ಯುದಯ-ಪ್ರಗತಿ ಇಲ್ಲದಂತೆ ಮಾಡುತ್ತದೆ ಈ ಸರಾಗ.

ಬಾಳು ರಚನಾಮಯವಾಗಬೇಕೆಂದರೆ ಈ ವ್ಯತ್ಯಾಸವು ಏಕೈಕ ರೂಪ ಹೋಗಬೇಕು. ವ್ಯಕ್ತಿಯ ಅಭಿರುಚಿ ಪ್ರಕಟವಾಗಲು ಅವಕಾಶ, ಅನುಕೂಲ ಇರಬೇಕು. ತನ್ನ ಮನೆಯ ಸಾಮಗ್ರಿಗಳನ್ನು ಮನೆಯನ್ನು ರಚಿಸುವ ಕಾರ್ಯ ತನ್ನ ವ್ಯಕ್ತಿತ್ವ ಪ್ರಕಟನೆಗೆ ಯೋಗ್ಯ ಕ್ಷೇತ್ರ. ನಮ್ಮ ಚಿಂತೆಯನ್ನು ತಗ್ಗಿಸುವ ನೆಪದಲ್ಲಿ ಭಾರಿ ಉತ್ಪಾದಕರು ಮಾನವ ವ್ಯಕ್ತಿತ್ವ ವನ್ನೂ ವೈಶಿಷ್ಟ್ಯವನ್ನೂ ನಾಶಮಾಡುತ್ತಿದಾರೆ. ಅಮೆರಿಕಾದಲ್ಲಿ 'ಸಿದ್ಧ ಗೃಹ'ಗಳನ್ನು ತಂದು ರಾತ್ರಿ-ರಾತ್ರಿಯೇ ಮನೆ ಕಟ್ಟಬಹುದು. ಏನೂ ಕಷ್ಟಪಡಬೇಕಾಗಿಲ್ಲ. ಉತ್ಪಾದಕನಿಗೆ ಟೆಲಿಫೋನ್ ಮಾಡಿ ಇಂಥ ಬೀದಿ, ಇಂಥ ಕಡೆ, ಇಂಥ ಮಾದರಿಯ ಮನೆ-ಅ,ಬ,ಕ,ಡ-ಬೇಕು ಎಂದು ಹೇಳಿದರೆ ಸಾಕು. ಅದರ ಬಾಗಿಲು ಕಿಟಕಿ ಮೊದಲಾದುವೆಲ್ಲ ಸಿದ್ಧವಾಗಿರುತ್ತವೆ. ಅವನ್ನು ತಂದು ಜೋಡಿಸಿಟ್ಟರಾಯಿತು. ಆಹಾರ ದಲ್ಲಿ ವೈಯಕ್ತಿಕ ರುಚಿಯೇ ಮುಖ್ಯ ತಾನೆ. ಅದರಲ್ಲಿಯೂ ತಮ್ಮ ಕುಶಲ ಪ್ರಚಾರದಿಂದ ಉತ್ಪಾದಕರು ವೈಯಕ್ತಿಕತೆಯನ್ನು ತೊಡೆದು ಹಾಕಿದಾರೆ. ಹಿಂದುಸ್ತಾನದ ಅಂಗಡಿಗಳಲ್ಲೂ 'ಸಿದ್ಧಾನ್ನ'ದ ಪೊಟ್ಟಣ ಗಳು ಬರುತ್ತಿವೆ. ಸೂಪಕಲೆಯನ್ನ ಸಾಯಿಸುತ್ತಿವೆ. ತನ್ನ ಪಾಕವಿದ್ಯೆಯ ಬಗ್ಗೆ ಹೆಮ್ಮೆಗೊಳ್ಳಬೇಕು ಹೆಂಗಸು. ಅದರ ಬದಲು ಉಪ್ಪಿನಕಾಯಿ, ಮುರಬ್ಬಾ, ಚಟ್ನಿ, ಮಕ್ಕಳ ಆಹಾರ ಮುಂತಾದವನ್ನು ಸಾವಿರಾರು

ಪೈಲಿಗಳ ದೂರದಿಂದ ತರಿಸಿ ಒಂದೇ ಬೇಸರದ ಮಾದರಿಗೆ ಇಳಿಸಿದೇವೆ.

ವಿಚಾರ ಕಡಮೆಯಾದಷ್ಟು ಜೀವನಕ್ಕೆ ಮನುಷ್ಯ ಅಯೋಗ್ಯನಾಗುತ್ತಾನೆ. ಅವನ ರಚನೆಯೆ ಹಾಗಿದೆ. ಆದುದರಿಂದ ಗಿರಾಕಿಯ ಪರ ತಾನೇ ಎಲ್ಲಾ ವಿಚಾರವನ್ನೂ ಮಾಡುವ ಆಧುನಿಕ ಉತ್ಪಾದಕ ನಿಜವಾಗಿ ಗಿರಾಕಿಯನ್ನು ವಿಚಾರ-ಹೀನನಾಗಿ ಮಾಡುತ್ತಿದಾನೆ. ತಾಯಿ ಕೂಡ ಮಗುವನ್ನು ಅಂಬೆಗಾಲಿಡಲು, ಒಂದೆರಡು ಸಲ ಬೀಳಲು ಬಿಡುತ್ತಾಳೆ. ಮಗು ಒಂದು ಸಲವೂ ಬೀಳದಂತೆ, ಯಾವಾಗಲೂ ತಾನೇ ಅದನ್ನು ಎತ್ತಿಕೊಂಡು ಓಡಾಡಿದರೆ ಕಡೆಗೆ ಆ ಮಗುವಿಗೆ ನೆಟ್ಟಗೆ ನಿಲ್ಲುವ ರೂಢಿಯೆ ಇಲ್ಲದಾಗಿ ಅಂಗವಿಕಲವಾಗುತ್ತದೆ. ಈಗಿನ ಉತ್ಪಾದಕರಿಂದ ಸಮಾಜಕ್ಕೆ ಸಲ್ಲುವ ಸೇವೆ ಇದೇ.

ನಮ್ಮ ದೇಶದಲ್ಲಿ ನಿತ್ಯಜೀವನ ನಾನಾವಿಧವಾದುದು, ಬಹು ಮುಖ್ಯವಾದುದು. ಮನುಷ್ಯನ ರಚನಾ ಸಾಮರ್ಥ್ಯಕ್ಕೆ ಹಲವಾರು ಬಗೆಗಳಲ್ಲಿ, ನಾನಾ ಮೇಳನಗಳಲ್ಲಿ ಅವಕಾಶ ಕೊಡುವಂಥದು. ಬೇರೆ ಬೇರೆ ಪ್ರಾಂತ, ಸೀಮೆಗಳಲ್ಲಿ ಬೇರೆ ಬೇರೆ ರೀತಿ. ಒಂದೇ ಸೀಮೆಯಲ್ಲೂ ಬೇರೆ ಬೇರೆ ಗುಂಪುಗಳಲ್ಲಿ ಬೇರೆ ಬೇರೆ ರೀತಿಯ ಜೀವನ ವಿಕಾಸ. ಈ ಭಾರಿ ವರ್ತಕರ ಮಾಯಾಜಾಲಕ್ಕೆ ಮಾತ್ರ ಬೀಳದೆ ಇದ್ದೆವೋ, ನಮ್ಮಲ್ಲಿ ವ್ಯಕ್ತಿವಿಕಾಸಕ್ಕೆ, ಆತ್ಮ ಪ್ರಕಟನೆಗೆ ಇರುವ ದಾರಿ ಸಾವಿರಾರು. ಈಗಲೂ ಪಟ್ಟಣ ನಗರಗಳನ್ನು ಬಿಟ್ಟರೆ ಹಳ್ಳಿಗಳಲ್ಲಿ ಇನ್ನೂ ಈ ಜಾಲ ಹರಡಿಲ್ಲ. ತೀರಾ ಕೊನೆಯ ಮೂಲೆಗಳಲ್ಲೂ ನಿಟ್ಟು ತಪ್ಪಿದ ಪ್ರಗತಿ ಕಾಲಿಡುತ್ತಿದ್ದರೂ ಇನ್ನೂ ಪರಿಸ್ಥಿತಿ ಹದಗೆಟ್ಟಿಲ್ಲ. ಈ ಸಾವಿನ ಸೋಂಕುರೋಗವನ್ನು ತಡೆಗಟ್ಟಲು ಕೂಡಲೇ ಏನಾದರೂ ಮಾಡಬೇಕು.

ರಚನಾಶೀಲವರ್ಗ ದೇಶಕ್ಕೆ ಸಾಮರ್ಥ್ಯದಾಯಕವಾಗಬಹುದು. ಭಾರಿ ಉತ್ಪಾದಕನೇ ಮುಖ್ಯ ಜೀವಾಳವಾದ ಈ ತಿರುಗುಮುರುಗು ವ್ಯವಹಾರದಲ್ಲಿ ಬರೀ ಉತ್ಪನ್ನಭಕ್ಷಕ, ಗಿರಾಕಿ ಆಗಿ ಪೂರಾ ನಿರ್ವೀರ್ಯನಾಗಿದಾನೆ. ಅತ್ಯಧಿಕ ಸಂಖ್ಯೆಯ ಈ ವರ್ಗದ ಜನ ಆಧುನಿಕ ಗಿರಣಿ-ಕಾರಖಾನೆಗಳ ಭಾರಕ್ಕೆ ಪುಡಿ ಪುಡಿಯಾಗಿದಾರೆ. ಅವರ ರಚನಾ

ಸಾಮರ್ಥ್ಯವೆಲ್ಲ ನಾಶವಾಗಿದೆ. ಈ ಬಗೆಯ ಬದುಕು ಕಲಾಕೃತಿಗಳನ್ನು ಸೃಷ್ಟಿಸುವುದಿಲ್ಲ, ಬರೀ ನಕಲುಗಳನ್ನು ನಿರ್ಮಿಸುತ್ತದೆ.

ಈಗ ಇಂಥ ವಸ್ತು ಬೇಕೆಂದು ಗಿರಾಕಿ ಕೇಳುವಂತಿಲ್ಲ. ಅವನು ಮಾಡುವ ವ್ಯವಹಾರವನ್ನು ಅರ್ಥಶಾಸ್ತ್ರಪಂಡಿತರು ಅರಿವಿಲ್ಲದೆ 'ಬೇಡಿಕೆ' ಎಂದು ಕರೆಯುತ್ತಾರೆ. ಅವನು ಏನನ್ನೂ ಬೇಡುವುದೇ ಇಲ್ಲ. ಅಂಗಡಿಯಲ್ಲಿ ಇದ್ದುದನ್ನು ಮಾತಾಡದೆ ಒಯ್ಯುತ್ತಾನೆ. ಬೇಡಿದುದನ್ನು ಕೊಡುವುದಿಲ್ಲ; ಕೊಡುವುದನ್ನೇ ಬೇಡುವಂತೆ ಮಾಡುತ್ತಾರೆ. ಎಲ್ಲಾ ತಲೆಕೆಳಗು! ಹಿಂದುಸ್ತಾನದ ವಿಷಯವೇ ಗೊತ್ತಿಲ್ಲದ ಇಂಗ್ಲೆಂಡ್ ಕೆಲಸಗಾರರು ಮಾಡಿದ ಚಪ್ಪಲಿಯನ್ನು, ಇನ್ನೆಲ್ಲೋ ಜಗತ್ತಿನ ಮೂಲೆಯಲ್ಲಿ ಮಾಡಿದುದನ್ನು ಕೊಳ್ಳಬೇಕು. ಕೇಳುವವರ ಕಾಲಿನ ಅಳತೆಗೆ ಚಪ್ಪಲಿ ಮಾಡುವುದಿಲ್ಲ. ಸಿದ್ಧವಾಗಿಟ್ಟಿದ್ದ ಚಪ್ಪಲಿಗಳಲ್ಲಿ ಕಾಲಿಟ್ಟು ಎಲ್ಲಕ್ಕಿಂತ ಹೆಚ್ಚು ಸರಿಹೊಂದುವುದನ್ನು ಕೊಳ್ಳಬೇಕು. ಈ ಕಾರಖಾನೆ ಸಿದ್ಧಮಾಡಿದ ಚಪ್ಪಲಿಗಳು ನಮ್ಮ ಯಾರ ಕಾಲಿಗೂ ಸರಿಹೋಗದಿದ್ದರೆ ಆಗ ಬರಿಗಾಲಲ್ಲಿ ಓಡಾಡುವ ರೂಢಿಯುಳ್ಳ ಅಬಿಸೀನಿಯಾದಂಥ 'ದೇಶೀಜನರ' ಸೀಮೆಯನ್ನು ಗೆದ್ದು ಅವರಿಗೆ 'ನಾಗರಿಕತೆ' ಕಲಿಸಿ, ಅವರಿಗೆ ಆ ಚಪ್ಪಲಿ ತೊಡಿಸಬೇಕು. ಗಿರಾಕಿಯೇ ಇಲ್ಲದೆ ವಸ್ತುನಿರ್ಮಾಣಮಾಡುವ ಈ ಪದ್ಧತಿಯೆ ಈಗ ಕಲಹ-ಕಾಳಗಗಳಿಗೆ ಮುಖ್ಯಕಾರಣ. ಕುಲಾವಿಗಳಿವೆಯಲ್ಲ ಎಂದು ಕೂಸು ಹುಟ್ಟಬೇಕು. ಹೀಗೆ ಕೃತ್ರಿಮವಾಗಿ ಬೇಡಿಕೆಯನ್ನು ಸೃಷ್ಟಿಸುವಾಗ ಹಿಂಸೆ ಹೆಚ್ಚುತ್ತದೆ, ಲೋಕದ ಸಮತೂಕ ತಪ್ಪುತ್ತದೆ. ಮತ್ತೆ ತೂಕ ಸಮಮಾಡಿಕೊಳ್ಳುವ ಪ್ರಯತ್ನವೂ ಪುನಃ ಹಿಂಸೆಗೆ ಕಾರಣವಾಗುತ್ತದೆ.

ಸಮಾಜದಲ್ಲಿ ಸ್ಥಿರತೆ, ಅಹಿಂಸೆ ಇರಬೇಕಾದರೆ ಸಮಾಜರಚನೆಯಲ್ಲಿ ಕೊಳ್ಳುವ ಗಿರಾಕಿಯೇ ಮುಖ್ಯಾಂಶವಾಗಬೇಕು. ಅವನ ವೈಯಕ್ತಿಕ ಅಭಿರುಚಿಯೇ ಮುಖ್ಯವಾಗಬೇಕು. ಅಲ್ಲಲ್ಲಿ ಆಯಾ ಸ್ಥಳಗಳಲ್ಲಿಯೆ ದಿನಬಳಕೆಯ ವಸ್ತುಗಳನ್ನು ಗಿರಾಕಿಯ ಕಣ್ಣೆದುರಿಗೇ ಗುಡಿಸಲುಗಳಲ್ಲಿ ಅಣಿಮಾಡಿದಾಗಲೇ ಇದು ಸಾಧ್ಯ. ಅಂಥ ಪರಿಸ್ಥಿತಿಯಲ್ಲಿ ಮಾತ್ರವೇ ಗಿರಾಕಿ ತನ್ನ ವ್ಯಕ್ತಿತ್ವವನ್ನು ಬೆಳೆಯಿಸಿ ಪ್ರಕಟಗೊಳಿಸುವ

ಮೂಲ್ಯಗಳನ್ನು ರೂಢಿಗೆ ತರಬಲ್ಲ. ಆಧುನಿಕ ಉತ್ಪಾದನ ವಿಧಾನ, ವಿಕ್ರಯ ವಿಧಾನಗಳು ಬಾಳನ್ನು ಬರೀ ಬದುಕಾಗಿ ಮಾಡಿದೆ. ಬಾಳು ಮಲತು ನಿಂತಿವೆ. ಗಾಳಿ ಆಡದೆ ಉಸಿರುಗಟ್ಟಿದಂತಾಗಿದೆ. ಈ ರಚನಾಶೀಲ ವರ್ಣಕ್ಕೆ ಸೇರಿದ ಜನ ಕ್ರಿಯಾಶೀಲರಾಗಿ ತಮ್ಮ ವ್ಯಕ್ತಿತ್ವವನ್ನು ಸಾಧಿಸಿದರೆ ಈ ಪರಿಸ್ಥಿತಿ ಬದಲಾಗುತ್ತದೆ. ಈ ವರ್ಣದ ಜನ ಈಗ ಒಪ್ಪಿಕೊಂಡು ಬಳಸುತ್ತಿರುವ ಹಣದ ಅಳತೆಯನ್ನು ಕೈ ಬಿಟ್ಟು, ವಿವಿಧ ಅಸಂಖ್ಯ ಅನೇಕ ಸಾಂಸ್ಕೃತಿಕ ಮೂಲ್ಯಗಳನ್ನು ಮತ್ತೆ ವ್ಯವಹಾರದಲ್ಲಿ ಪ್ರತಿಷ್ಠಿಸಿದರೆ, ಆ ಮೂಲ್ಯಗಳು ಜನಜೀವನವನ್ನು ರೂಪಿಸುವಂತೆ ಮಾಡಿದರೆ, ಆಗ ಎಲ್ಲವೂ ಸರಿಯಾದೀತು.

ಸಂಘ ಸುಧಾರಕ ವರ್ಗ : ಇದು ಸಂಘಜೀವನದ ಆರ್ಥಿಕ ವಿಧಾನದವರ ಕ್ಷೇತ್ರ. ಆದುದರಿಂದ ಪ್ರತಿಯೊಂದು ಸಂದರ್ಭದಲ್ಲೂ, ಯಾವುದನ್ನು ನಿರ್ಧರಿಸುವಾಗಲೂ ತನಗೇನು ಲಾಭ, ತನ್ನ ಗುಂಪಿಗೇನು ಪ್ರಯೋಜನ ಎಂಬುದಲ್ಲ ಒರೆ; ಸಮಾಜಕ್ಕೇನು ಲಾಭ ಎಂಬುದು. ಇಂಥ ಕ್ಷೇತ್ರದಲ್ಲಿ ಹಣಕ್ಕೆ ಬೆಲೆಯೇ ಇಲ್ಲ. ಹಣದ ಅಳತೆ ಇಲ್ಲಿ ಸಲ್ಲದು ಎಂಬುದನ್ನು ಹೇಳಬೇಕಾಗಿಯೆ ಇಲ್ಲ. ತಾತ್ಕಾಲಿಕ ಪ್ರಯೋಜನಕ್ಕಿಂತ ಚಿರಕಾಲದ ಲಾಭವೇ ಇಲ್ಲಿ ಮುಖ್ಯ.

ಇತ್ತೀಚೆಗೆ ಸಾಮಾಜಿಕ-ಆರ್ಥಿಕ ಪ್ರಯೋಗಗಳು ಹಲವು ನಡೆದಿವೆ. ಸೋವಿಯೆಟ್ ಕಮ್ಯುನಿಸಮ್ಮನ್ನು ತಂದು ರಷ್ಯಾ ಈ ಪ್ರಯತ್ನ ಮೊದಲಿಟ್ಟಿತು. ಆಮೇಲೆ ಫ್ಯಾಸಿಸ್ಟರೂ ನಾಜೀಗಳೂ ಪ್ರಯೋಗ ನಡೆಸಿದರು. ಅವರ ಪ್ರಯೋಗಗಳು ಸ್ಥಿರತೆ, ಶಾಶ್ವತತೆ, ಅಹಿಂಸೆಗಳನ್ನು ತರಲಿಲ್ಲ. ವಿಫಲವಾದವು. ತದ್ವಿಪರೀತವಾಗಿ ಮಾನವ ಲೋಕವನ್ನು ನೆತ್ತರು ಹೊಳೆಯಲ್ಲಿ ಮುಳುಗಿಸಿವೆ. ತಮ್ಮ ತಮ್ಮ ವರ್ಗಕ್ಕೆ, ದೇಶಕ್ಕೆ ಹತ್ತಿರದ ಅಡ್ಡದಾರಿ ಹುಡುಕುವುದರಲ್ಲಿ ಇಡೀ ಮಾನವಲೋಕದ ಮಹತ್ತರ ಪ್ರಶ್ನೆಯನ್ನು ಅವು ಮರೆತವು. ಸರಿಯೋ ತಪ್ಪೋ 'ನನ್ನ ದೇಶ ಮಾಡಿದುದೇ ಸರಿ' ಎಂಬ ಸೂತ್ರವನ್ನು ಕಲಿತವು. ಕಡೆಗೆ ಅದರಿಂದ ಹಿಂಸೆ-ಪ್ರಳಯಗಳಿಗೆ ತುತ್ತಾದವು.

ಚಾಳಿಗೊಂದು ಸರಿಯಾದ, ಕ್ರಮವಾದ ಯೋಜನೆ ಅಗತ್ಯ. ಈ ಯೋಜನೆ ಸಫಲವಾಗಬೇಕೆಂದರೆ ಅದರ ಗುರಿ ಸಾರ್ವತ್ರಿಕವಾಗಿ ಅನ್ವಯಿಸುವಂತಿರಬೇಕು, ಜಗತ್ತಿನ ಶಾಶ್ವತ ನಿಯಮಗಳಿಗೆ ಅನುಗುಣವಾಗಿರಬೇಕು. ಕೇಂದ್ರಿತ ಕಾರಖಾನೆಗಳಲ್ಲಿ ಉತ್ಪತ್ತಿಯಾದ ವಸ್ತುಗಳನ್ನು ಮಾರುವ ನಿಮಿತ್ತ ದೇಶದಲ್ಲಿ ಆಚಾರ-ಸಂಪ್ರದಾಯಗಳನ್ನು ಹರಡುವ ಪ್ರಯತ್ನವಾಗಬಾರದು.

ನಮ್ಮ ದೇಶದಲ್ಲಿ ಈ ಕ್ಷೇತ್ರದ ಜನರಿಗೆ ಬೇಕಾದಷ್ಟು ಕೆಲಸವಿದೆ. ಹಳ್ಳಿಯ ಜೀವನ ಸುಗಮವಾಗುವಂತೆ ಕಾರ್ಯಕ್ರಮಗಳನ್ನು ರೂಪಿಸಬಲ್ಲ ಜನರು ಹಳ್ಳಿಯವರಿಗೆ ಬಹಳ ಅಗತ್ಯ. ಅಡವಿಯ ಮೃಗಗಳಿಗಾದರೂ ಹೊಟ್ಟೆತುಂಬಾ ಅನ್ನ ಸಿಗುತ್ತದೆ. ಹಳ್ಳಿಯ ಜನಕ್ಕೆ ಈಗ ಅದೂ ಇಲ್ಲ. ಈಗಿನ ಸಾಮಾಜಿಕ-ಆರ್ಥಿಕ ಪರಿಸ್ಥಿತಿ ಪ್ರಯತ್ನಶೀಲತೆಯನ್ನೇ ಕೊಲ್ಲುತ್ತಿದೆ. ಅಸಹಾಯರಾದ ಜನಕೋಟಿಯ ಜೀವನವನ್ನು ಸರಿಯಾಗಿ ವ್ಯವಸ್ಥೆಗೊಳಿಸಿ, ಅವರು ಮಾನವ-ಸಹಜ ಜೀವನ ನಡೆಸುವಂತೆ ಮಾಡುವುದು ಈ ವರ್ಗದವರ ಕೆಲಸ.

ಈ ಗುರಿಯನ್ನು ಮುಟ್ಟಲು ಯೋಜನೆಮಾಡುವುದೆಂದರೆ ನಾವು ಯಾವ ರೀತಿಯ ಜೀವನಕ್ಕಾಗಿ ಪ್ರಯತ್ನಿಸಬೇಕೋ ನಿರ್ಧರಿಸಬೇಕು. ಆ ಕಲ್ಪನೆ ಯೋಗ್ಯವಾದುದಾದರೆ ಸಮಾಜದಲ್ಲಿರುವ ಸಮಸ್ತ ವ್ಯಕ್ತಿಗಳಿಗೂ ಅವರ ರಚನಾಶಕ್ತಿಯ ಪ್ರಕಟನೆಗೆ ಅವಕಾಶವಾಗುತ್ತದೆ. ಸಹಜವಾದ ಜೀವನಪದ್ಧತಿಯನ್ನು ಉತ್ತಮಗೊಳಿಸಲಾಗಲಿ ಕೆಳಗಿಳಿಸಲಾಗಲಿ ಒಂದು ತಲೆಮಾರಿನಲ್ಲಿ ಸಾಧ್ಯವಿಲ್ಲ. ಹಾಗೆಮಾಡಲು ಹೋದರೆ ಪರಿಣಾಮ ದಾರುಣವಾಗುತ್ತದೆ. ಪ್ರಕೃತಿ ಕೋಟ್ಯಂತರ ವರ್ಷಗಳಿಂದ ಮಾನವ ಜೀವನವನ್ನು ರೂಪಿಸುತ್ತ ಬಂದಿದೆ. ನಮಗಿರುವ ಜೀರ್ಣಕೋಶದಂಥ ದಕ್ಷವಾದರೂ ಅತ್ಯಂತ ಸರಳವಾದ ಯಂತ್ರವನ್ನು ಯಾವ ವಿಜ್ಞಾನಿಯೂ ರಚಿಸಲಾರ. ಹೃದಯದ ಹಾಗೆ ಸ್ವಯಂಚಾಲಕ, ಸ್ವಯಂಶಾಸಕ ಯಂತ್ರವನ್ನು ಯಾವ ಯಂತ್ರಶಾಸ್ತ್ರಜ್ಞನೂ ನಿರ್ಮಿಸಲಾರ. ವಿತಂತಿಯೋ ತಂತಿಯೋ, ಯಾವ ಮಾರ್ಕೋನಿಯೂ ನಮ್ಮ ನರಗಳ ಸಮೂಹದಂಥ ವಾರ್ತಾವಾಹಿನಿಯನ್ನು ರೂಪಿಸಲಾರ. ಮಾನವ

ದೇಹ - ಮನಸ್ಸುಗಳ ಸಹಜ ಕ್ರಿಯಾವಿಧಾನವನ್ನು ಅಜ್ಞಾನಿ ಮನುಷ್ಯ ಹೊಸದಾಗಿ ರಚಿಸಲೂ ಆರ, ಬದಲಿಸಲೂ ಆರ. ಆದುದರಿಂದ ತನ್ನ ಮನಸ್ಸಿಗೆ ತೋಚಿದಂತೆ ಜೀವನದ ದಿಕ್ಕನ್ನು ಬದಲಿಸಲು ಮಾಡಿದ ಮನುಷ್ಯ ಪ್ರಯತ್ನವೆಲ್ಲವೂ ವ್ಯರ್ಥ. ನಾವು ಮಾಡಬೇಕಾದುದೆಲ್ಲ ಪ್ರಕೃತಿ ಯೊಡನೆ ಸಹಕರಿಸುವುದು, ಅತ್ಯುತ್ತಮ ರೀತಿಯಲ್ಲಿ ಪ್ರಕೃತಿ ತನ್ನ ಕೆಲಸ ನಡೆಸಲು ತಕ್ಕ ಪರಿಸ್ಥಿತಿಯನ್ನು ಕಲ್ಪಿಸಿಕೊಡುವುದು. ಈ ರೀತಿ, ಈ ವಿಧಾನ, ಪ್ರಕೃತಿ ನಿರ್ಮಿತ. ಅದನ್ನರಿತು ಪ್ರಕೃತಿಗೆ ಏನು ನೆರವು ಬೇಕೋ ಅದನ್ನು ಒದಗಿಸುವುದು ಮನುಷ್ಯನ ಕೆಲಸ. ಪ್ರಕೃತಿಯ ವಿಧಾನಕ್ಕೆ ತಪ್ಪಿ ನಡೆದರೆ ಸಾಮಾಜಿಕ ಅವ್ಯವಸ್ಥೆಯೆ ಫಲ.

ದೇಹಕ್ಕೆ ಒಂದು ಸಾಮಾನ್ಯ ಶಾಖದ ಪ್ರಮಾಣ ಇದೆ. ಅದನ್ನು ಬದಲಿಸಲು ಪ್ರಯತ್ನಿಸುವುದು ವ್ಯರ್ಥ ಎಂದು ವೈದ್ಯರಿಗೆಲ್ಲ ಗೊತ್ತು. ಸಾಮಾನ್ಯ ಪ್ರಮಾಣಕ್ಕೆ ಹೆಚ್ಚಾದರೆ ಜ್ವರ ಬರುತ್ತದೆ; ಕಡಮೆಯಾದರೆ ನಿತ್ರಾಣ, ನೀರಸತೆ ಬರುತ್ತದೆ. ಎರಡಕ್ಕೂ ಸಾವೇ ಕೊನೆ. ಹೃದಯ ವನ್ನೇ ತೆಗೆದುಕೊಳ್ಳಿ. ಅದರ ಗತಿಯನ್ನು ಅತಿಯಾಗಿ ಹೆಚ್ಚಿಸಿದರೆ ತಡೆದೀತೆ ? ಮಿತಿಮೀರಿದರೆ ರಕ್ತದ ಒತ್ತಡ ಪ್ರಾರಂಭವಾಗುತ್ತದೆ. ಹೀಗೇ ಮಾನವಜೀವನದ ಆವಶ್ಯಕತೆಗಳಿಗೆ ಒಂದು ಇತಿ-ಮಿತಿಯಿದೆ. ಅಷ್ಟನ್ನು ಪೂರಯಿಸಿದರೆ ಬಾಳು ಉತ್ತಮವಾಗಿ ನಡೆಯುತ್ತದೆ. ಆ ಇತಿ-ಮಿತಿ ಯನ್ನು ಕಾಲಕಾಲಕ್ಕೆ ನಿರ್ಧರಿಸಿ ಅದನ್ನು ಪಾಲಿಸಲು ಮಾಡಬೇಕಾದ ಕಾರ್ಯಕ್ರಮವೇ ಯೋಜನೆ.

ಆದರೆ ದುರ್ದೈವದಿಂದ ಈಗ ಹಣವೇ ದೊಡ್ಡದಾಗಿ ಮಾನವೀಯ ವ್ಯಕ್ತಿತ್ವ ಚಿಕ್ಕದಾಗಿದೆ. ಸರ್ವೇ ಜನಾಃ ಕಾಂಚನ ಮಾಶ್ರಯಂತಿ, ಹಣ ವೆಂದರೆ ಹೆಣವೂ ಬಾಯಿಬಿಡುತ್ತದೆ ಎಂಬ ಗಾದೆಗಳನ್ನೆ ನಮ್ಮವರು ಹುಟ್ಟಿಸಿದಾರೆ.

ಎಷ್ಟೋ ಯೋಜನೆಗಳು ಬಂದಿವೆ. ಹೆಚ್ಚುಹೆಚ್ಚು ವಸ್ತುಗಳನ್ನು ಉತ್ಪಾದನ ಮಾಡುವುದೇ ಎಲ್ಲಕ್ಕೂ ಗುರಿ. ಮಾನವ ಸ್ವಭಾವವನ್ನು ಉತ್ತಮಗೊಳಿಸುವ ಯೋಜನೆಯೆ ಇಲ್ಲ. ಇಂಥ ಯೋಜನೆಗಳೆಲ್ಲ ಮೇಜಿನ ಮೇಲಿನ ಪೂದಾನಿಯಲ್ಲಿಟ್ಟ ಹರಿದುತಂದ ಹೂವಿನ ಹಾಗೆ.

ಒಂದೆರಡು ಗಂಟೆಯ ಹೊತ್ತು ಆ ಹೂ ಬಣ್ಣ ಬಣ್ಣವಾಗಿ ಗಮಗಮಿಸು ತ್ತದೆ. ಗಿಡದಿಂದ ಹರಿದುತಂದ ಕಾರಣ ಬೇಗನೆ ಬಾಡಿ ಹೋಗುತ್ತದೆ. ಅವರ ಸೊಬಗು ಒಂದೇ ಗಳಿಗೆಯದು.

ಯೋಜಕರು ತೋಟಗಾರನ ಹಾಗಿರಬೇಕು. ತೋಟಗಾರ ಮೊದಲು ನೆಲವನ್ನು ಹದಮಾಡುತ್ತಾನೆ. ಆಮೇಲೆ ಬೀಜ ಬಿತ್ತಿ ನೀರು ಹಾಯಿಸುತ್ತಾನೆ. ತನ್ನ ಕೆಲಸಮಾಡಿ ತಾನು ದೂರ ಸರಿಯು ತ್ತಾನೆ. ಆ ಗಿಡ ತನ್ನ ಸ್ವಾಭಾವಿಕ ಸಾಮರ್ಥ್ಯದಿಂದ ನೆಲದೊಳಗಿನ ಆಹಾರವನ್ನು ಹೀರಿಕೊಂಡು ಬೆಳೆದು ಹೂ ಬಿಡುತ್ತದೆ. ಎಷ್ಟೇ ಸೊಗ ಸಾಗಿ ಅಲಂಕಾರವಾಗಿ ಇಟ್ಟರೂ ಬಣ್ಣದ ಪೂದಾನಿಯ ಹೂಗಳು ಕ್ಷಣಿಕ; ಅದರಲ್ಲಿ ಸಾವು ಅಡಗಿದೆ. ತೋಟದಲ್ಲಿನ ಹೂವಿನ ಗಿಡ ವಾದರೋ ಸ್ಥಿರ; ನೆಲದೊಳಗಿನ ರಸವನ್ನು ತನ್ನ ಬೇರುಗಳಿಂದ ಹೀರು ತ್ತದೆ; ಅದು ಜೀವನ. ಗಿಡದಲ್ಲಿ ಒಂದೆರಡು ಹೂ ಬಾಡಿದರೂ ಉಳಿದವು ಅರಳುತ್ತವೆ.

ಇದೇ ರೀತಿ ಯಾವ ಯೋಜನೆಯಾದರೂ ಮನುಷ್ಯಪ್ರಾಣಿಗಳ ಬೆಳವಣಿಗೆಗೆ ತಕ್ಕ ಪರಿಸ್ಥಿತಿಯನ್ನು ನಿರ್ಮಿಸಬೇಕು. ಯೋಜನೆಗಳ ಉದ್ದೇಶ್ಯ ಯಾವುದೋ ಒಂದು ಗುರಿ-ಗಮ್ಯ ಅಲ್ಲ. ಇಂತಿಷ್ಟು ಕೆಲಸ ಆಗಬೇಕು ಎಂದು ನಿರ್ಧರಿಸಿ ಅದಕ್ಕಾಗಿ ಯತ್ನಿಸುವುದು ಪ್ರಕೃತಿಯ ಸ್ವಭಾವವಲ್ಲ. ಅದರಿಂದ ಬಲವಂತವಾಗಿ ಕೆಲವು ಫಲ ದೊರೆತಾವು. ಆ ಫಲ ಸಹಜವಲ್ಲವಾದುದರಿಂದ ಬೇಗ ಬಾಡಿಹೋಗುತ್ತವೆ. ಆ ಮೂರು ಗಳಿಗೆಯ ಫಲಭೋಗದ ತರುವಾಯ ಸಾವೇ ಬರಬಹುದು. ಕೃತಕ ವಾದುದು ಯಾವುದೂ ಹೆಚ್ಚು ಕಾಲ ಬದುಕಲಾರದು.

ಮನುಷ್ಯನ ಶಕ್ತಿಗಳೆಲ್ಲ ವಿಕಸಿತವಾಗಿ ಅವನು ಪೂರ್ಣವಾಗಿ ಬೆಳೆಯಲು ಸರ್ವಾನುಕೂಲವೂ ಆಗುವಂತೆ ಪರಿಸ್ಥಿತಿ-ವಾತಾವರಣ ಗಳನ್ನು ನಿರ್ಮಿಸುವುದೇ ಯೋಜನೆಯ ಪ್ರಥಮೋದ್ದೇಶ್ಯ. ಪ್ರತಿಯೊಬ್ಬ ಮನುಷ್ಯನಿಗೆ ಪುಷ್ಟಿಕರವಾದ ಆಹಾರ ಹೊಟ್ಟೆತುಂಬಾ ಸಿಗಬೇಕು. ಮಳೆ ಗಾಳಿ ಚಳಿಗಳ ಬಾಧೆಗೆ ಮೈ ಬಾಧೆಗೊಳ್ಳದಷ್ಟು ಹೊದಿಕೆ ಬೇಕು. ಇರಲು ವಸತಿ ಬೇಕು. ಮೈ-ಮನಗಳನ್ನು ಬಾಳಿನ ಭವ್ಯಕಾರ್ಯಕ್ಕೆ

ಅಣಿಗೊಳಿಸುವ ಶಿಕ್ಷಣ ಬೇಕು. ಆರೋಗ್ಯಕರ ಸನ್ನಿವೇಶವಿರಬೇಕು. ಪರಸ್ಪರ ಸಹವಾಸಕ್ಕೆ, ವಸ್ತುಗಳ ಉತ್ಪಾದನೆ-ವಿನಿಮಯಕ್ಕೆ ಅನುಕೂಲಗಳು ಬೇಕು. ಯೋಜನೆಗಾರರ ಉದ್ದೇಶ್ಯಗಳು ಇವು. ಇವಕ್ಕಿಂತ ಹೆಚ್ಚಿನದನ್ನೆಲ್ಲ ಆಯಾ ವ್ಯಕ್ತಿಯ ಶಕ್ತಿಸಾಮರ್ಥ್ಯಗಳಿಗೇ ಬಿಡಬೇಕು. ಆಗಲೇ ಅವರಿಗೆ ತಮ್ಮ ಸಂಕಲ್ಪ ಶಕ್ತಿಯನ್ನೂ ಮೂಲ್ಯ-ನಿರ್ಧಾರವನ್ನೂ ಉಪಯೋಗಿಸಿ ತಮ್ಮ ಬಾಳನ್ನು ಬರೀ ಬದುಕಾಗಿ ಮಾಡದೆ, ಸಂಸ್ಕಾರವಂತ ರಚನೆಯಾಗಿ ಮಾಡಿ ಮಾನವ ಜಾತಿಯ ಪ್ರಗತಿಗೆ ತಮ್ಮ ಸ್ಥಿರ-ಶಾಶ್ವತ ಕಾಣಿಕೆಯನ್ನು ಸಲ್ಲಿಸಲು ಸಾಧ್ಯವಾಗುತ್ತದೆ.

ತಾನು ಆರಿಸಿಕೊಳ್ಳುವ ಜೀವನ-ವಿಧಾನ ಇತರರ ಸುಖಸಾಧನಕ್ಕೆ, ಹಕ್ಕಿಗೆ ಅಡ್ಡಬಾರದಿದ್ದರಾಯಿತು. ಯಾವ ಯೋಜನೆಯೂ ಮನುಷ್ಯನ ಈ ಸ್ವಾತಂತ್ರ್ಯವನ್ನು, ತನ್ನ ಮನಸ್ಸೊಪ್ಪಿದ ಜೀವನವಿಧಾನವನ್ನು ಅವಲಂಬಿಸುವ ಅಧಿಕಾರವನ್ನು, ಕಿತ್ತುಕೊಳ್ಳಲಾರದು. ಯೋಜನೆಯ ಕೆಲಸ ಮನುಷ್ಯನಿಗೆ ಕನಿಷ್ಠ ಮಿತಿಯ ಜೀವನಾನುಕೂಲತೆಯನ್ನಾದರೂ ಒದಗಿಸುವುದು. ಅದನ್ನು ಮೀರಿ ಪ್ರತಿಯೊಬ್ಬನಿಗೂ ತನ್ನ ತನ್ನ ಬೆಲೆಗಳ ಪ್ರಕಾರ ಬದುಕಲು ಅವಕಾಶವಿರಬೇಕು. ಹಾಗಿಲ್ಲದೆ ಈ ಸ್ವಾತಂತ್ರ್ಯವನ್ನು ಮೊಟಕಿಸಿ, ಮನುಷ್ಯ ತನ್ನ ಮೂಲ್ಯಗಳನ್ನು ನಿರ್ಧರಿಸಿ ಅದರಂತೆ ನಡೆಯಲು ಸಾಧ್ಯವಿಲ್ಲದಂತೆ ಮಾಡುವ ನಿಷ್ಠುರ ಯೋಜನೆ ಮನುಷ್ಯನನ್ನು ಯಂತ್ರದ ಒಂದು ಮೊಳೆ, ಕಂಬಿ ಆಗಿಸಿಬಿಡುತ್ತದೆ. ಹಾಗೆ ಹುಟ್ಟಿದಂದಿನಿಂದ ಸಾಯುವವರೆಗೆ ಬದುಕು ಪರತಂತ್ರವಾದರೆ, ಅದರಲ್ಲಿ ಎಷ್ಟೇ ಕ್ಷಮತೆಯಿದ್ದರೂ ಅದು ವ್ಯರ್ಥ. ಮನುಷ್ಯನ ವ್ಯಕ್ತಿತ್ವ ಪ್ರಕಟನೆಗೆ ಅವಕಾಶವಿರಬೇಕೆಂಬುದೇ ಮೊಟ್ಟಮೊದಲನೆ ನಿಯಮ. ಅದೇ ಇಲ್ಲದ ಮೇಲೆ ಏನಿದ್ದೇನು?

ನಿಯಮ-ನಿಯಂತ್ರಣ ಸಾಮೂಹಿಕ ಕರ್ಮಕ್ಕೆ, ಕಾರಖಾನೆ ಸೈನ್ಯಗಳಲ್ಲಿ ಒಟ್ಟಾಗಿ ಗುಂಪಾಗಿ ಕೆಲಸಮಾಡುವ ಜನರಿಗೆ; ವ್ಯಕ್ತಿತ್ವ ವಿಕಾಸವೆ ಗುರಿಯಾದ ವೈಯಕ್ತಿಕ ಕರ್ಮಕ್ಕಲ್ಲ: ಸಾಮೂಹಿಕ ಕರ್ಮ ದಲ್ಲಿ ವ್ಯಕ್ತಿ ಮುಖ್ಯವಲ್ಲ; ಇಷ್ಟು ಆಳುಗಳಲ್ಲಿ ಅವನೂ ಒಂದಾಳು.

ಆ ಕೆಲಸವೆ ಮುಖ್ಯ. ಸಮಗೆ ವ್ಯಕ್ತಿವಿಕಾಸವೆ ಗುರಿ. ಸಂಘ-ಸಂಸ್ಥೆ ಅದಕ್ಕೆ ಸಾಧನ. ಇಲ್ಲಿ ನಿಯಮ-ನಿಯಂತ್ರಣಗಳಿಗೆ ಎಡೆಯಿಲ್ಲ.

ಉತ್ತಮ ವ್ಯವಸ್ಥೆಯುಳ್ಳ ಗೋಶಾಲೆಯಲ್ಲಿ ಹಸುಗಳಿಗೆ ಸರಿಯಾಗಿ ಸಮವಾಗಿ ಬೆರೆಸಿದ ಹಿಂಡಿ-ತಿಂಡಿಯನ್ನು, ನೀರು-ಉಪ್ಪನ್ನು ಕಾಲಕ್ಕೆ ಸರಿಯಾಗಿ ಕೊಡುತ್ತಾರೆ. ಬೆಚ್ಚಗಿರುವ ಮನೆಯಲ್ಲಿ ಕಟ್ಟುತ್ತಾರೆ. ಬಿಸಿಲಿನಲ್ಲಿ ಸಾಕಷ್ಟು ವ್ಯಾಯಾಮ, ನಿತ್ಯ ಸ್ನಾನ, ಮೈತಿಕ್ಕುವುದು, ಕಾಲಕ್ಕೆ ಸರಿಯಾಗಿ ಹಾಲು ಹಿಂಡುವುದು, ಎಲ್ಲವೂ ನಡೆಯುತ್ತವೆ. ಆದರೆ ಮೃಗ-ಜೀವನಕ್ಕಿಂತ ಮೇಲೇರಬಯಸಿದರೆ ಮನುಷ್ಯಪ್ರಾಣಿಗೆ ಈ ಬಗೆಯ ಜೀವನ ಉಪಯೋಗವಿಲ್ಲ. ಒಳ್ಳೆಯ ಜೈಲಿನಲ್ಲಿ ಈ ವ್ಯವಸ್ಥೆಯೆಲ್ಲಾ ಇದ್ದೀತು. ಜೈಲಿನಲ್ಲಿ ಊಟ, ನಿದ್ದೆ, ವಿಶ್ರಾಂತಿ ಯಾವುದನ್ನು ಬಿಟ್ಟರೂ ತಪ್ಪೇ. ಅದರಿಂದ ಆರೋಗ್ಯ ಕೆಟ್ಟೀತು. ಸೆರೆಯಾಳಿನ ದೇಹಾರೋಗ್ಯದ ಬಗ್ಗೆ ಅಷ್ಟು ಗಮನ. ಆದರೆ ಕ್ರಿಯಾಸ್ವಾತಂತ್ರ್ಯ, ರುಚಿ ಸ್ವಾತಂತ್ರ್ಯ ಇಲ್ಲದ ಆ ಬಾಳು ಬಾಳಲ್ಲ.

ಆದುದರಿಂದ ಅಸಾಧ್ಯ ನಿರ್ಬಂಧಗಳ ಕೋಟೆ ಕಟ್ಟಿ ಬಾಳನ್ನು ಸೆರೆಮನೆಯ ವಾಸದಂತೆ ಮಾಡಬಾರದು ಯೋಜನೆ. ತೋಟಕ್ಕೆ ಬೇಲಿಯಿದ್ದ ಹಾಗೆ ರಕ್ಷಣೆಯ ಕೆಲಸ ಮಾಡಬೇಕು. ಗಾಳಿ ಬೆಳಕೇ ಬಾರದಂತೆ ಮಾಡಿದರೆ ಬೇಲಿಯೇ? ಈ ವರ್ಗಕ್ಕೆ ಸೇರಿದ ಜನರು ತಮ್ಮ ಬಾಳನ್ನು ಲೋಕಹಿತಕ್ಕಾಗಿ ಸಮರ್ಪಣೆ ಮಾಡುತ್ತಾರೆ. ಅವರ ಸಮರ್ಪಿತ ಜೀವನ ಲೋಕದಲ್ಲಿ ಸ್ವತಂತ್ರ ಜೀವನವನ್ನು ರೂಪಿಸುವ ಯೋಜನೆಗಳಲ್ಲಿ ನಿರತವಾಗಬೇಕು.

**ಉದಾತ್ತ ಜೀವನ ಕ್ಷೇತ್ರ**: ಇದು ಸೇವಾ ಜೀವನದ ವರ್ಗ. ಈ ಕ್ಷೇತ್ರದಲ್ಲಿ ಹಕ್ಕು-ಅಧಿಕಾರ ಇಲ್ಲವೇ ಇಲ್ಲ. ಎಲ್ಲವೂ ಕರ್ತವ್ಯ-ಕರ್ಮ. ಇಲ್ಲಿ ಸಂಕಲ್ಪಬಲದ ಉಪಯೋಗ ಇಂದ್ರಿಯ ಜೀವನದ ನಿಗ್ರಹಕ್ಕೆ, ಸ್ವಾರ್ಥದ ಸಂಯಮಕ್ಕೆ; ಎಲ್ಲ ಕೃತಿ-ಕರ್ಮವನ್ನೂ ಯೋಗ್ಯಮಾರ್ಗದಲ್ಲಿ ಹರಿಯಿಸಲಿಕ್ಕೆ. ಇಲ್ಲಿನ ಮೂಲ್ಯಗಳು ಲೋಕಹಿತ-ಸಾಧಕ, ಸ್ವಾರ್ಥ ಸಂತೋಷ ಸಾಧಕವಲ್ಲ. ಆದುದರಿಂದ ಇಲ್ಲಿ ಸ್ವಲಾಭವಲ್ಲ ಗುರಿ, ತಾತ್ಕಾಲಿಕ ಫಲವಲ್ಲ; ದೂರದ ಚಿರಫಲ.

ಈ ವರ್ಗದ ವ್ಯಕ್ತಿ ರಚನಾಶೀಲನಾಗುವ ಮೊದಲು ಸಮಾಜದ ಗುಣ ದೋಷಗಳೊಡನೆ ತಾದಾತ್ಮ್ಯ ಹೊಂದಬೇಕು. ಬರೀ ಬುದ್ಧಿಯಿಂದ ಯಾವ ಕೆಲಸವೂ ಇಲ್ಲಿ ಸಾಧ್ಯವಿಲ್ಲ. ತನ್ನ ಬಾಳಿನಲ್ಲಿ ಪ್ರತಿಯೊಂದನ್ನೂ ಪ್ರಯೋಗ ಮಾಡಿ, ಅಲ್ಲಿ ಫಲಸಿದ್ಧಿಯಾದರೆ ಆಮೇಲೆ ಲೋಕದ ಮುಂದೆ ಆ ಮಾತನ್ನು ಆಡಬೇಕು. ಆಹಾರಶಾಸ್ತ್ರ ಪಂಡಿತ ಮೊದಲು ಇಲಿ, ಕೋತಿ, ಹಂದಿಗಳನ್ನು ಹಿಡಿದು ಪ್ರಯೋಗ ನಡೆಸುತ್ತಾನೆ. ಬೇರೆ ಬೇರೆ ಆಹಾರ, ಅದರ ಪರಿಣಾಮ ಎಲ್ಲವೂ ಇಲ್ಲಿ ಗೊತ್ತಾದ ಮೇಲೆ ಮನುಷ್ಯರಿಗೆ ಯಾವ ಆಹಾರ ಸರಿ ಎಂದು ಸಿದ್ಧಾಂತ ಮಾಡುತ್ತಾರೆ. ಹಾಗೆಯೇ ಎಲ್ಲಾ ಸಮಾಜ ಸುಧಾರಣೆಗಳಲ್ಲೂ ಮಾನವ ಜೀವನದಲ್ಲಿ ಹೊಸ ಹೊಸ ವಿಚಾರಗಳ ಪ್ರಯೋಗ ನಡೆಯಬೇಕು. ಆದುದರಿಂದ ಈ ವರ್ಗದ ಜನ ಪ್ರಯೋಗಮಾಡುವ ಪಂಡಿತರೂ ಆಗಬೇಕು, ಪ್ರಯೋಗಕ್ಕೆ ಗುರಿಯಾಗುವ ಪ್ರಾಣಿಗಳೂ ಆಗಬೇಕು. ತಮ್ಮ ಬಾಳಿನಲ್ಲಿಯೆ ಪ್ರಯೋಗ ಮಾಡಬೇಕು.

ಕಟ್ಟಕಡೆಯು ಈ ವರ್ಗದವರು ಜನತೆಗಾಗಿ ಯೋಜನೆ ಮಾಡಬೇಕು. ಆ ಯೋಜನೆಗೆ ಪ್ರಯೋಗಸಿದ್ಧ ತತ್ವಗಳೆ ಆಧಾರವಾಗಬೇಕು. ಮನಸ್ಸಿದ್ದಲ್ಲಿ ಮಾದೇವ. ಇತರರ ದುಃಖವನ್ನು ನಾವು ಅರಿತರೆ, ನಮಗೆ ರಚನಾ ಸಾಮರ್ಥ್ಯವಿದ್ದರೆ, ಆ ದುಃಖ ನಿವಾರಣೆಗೆ ಮಾರ್ಗ ಸ್ಫುರಿಸಿಯೆ ತೀರುತ್ತದೆ. ಈ ವರ್ಗದ ವ್ಯಕ್ತಿ ಪರರಿಗಾಗಿ ತಾನು ತಪಿಸಿಯಾನು, ದುಃಖವನ್ನನುಭವಿಸಿಯಾನು. ತನ್ನದಕ್ಕಿಂತ ಪರರ ಭಾವನೆಗಳಿಗೇ ಗಮನ ಕೊಟ್ಟಾನು. ಅವರ ಇಂಗಿತವರಿತಾನು. ಅಳುವವರೊಡನೆ ಅತ್ತಾನು, ನಲಿವವರೊಡನೆ ನಲಿದಾನು. ಅವನ ಮೂಲ್ಯಗಳು ಪರಹಿತ ಕಾರಿ ಮೂಲ್ಯಗಳು. ತನ್ನ ಹಕ್ಕು-ಅಧಿಕಾರಗಳ ಪರಿವೆಯೆ ಅವನಿಗಿಲ್ಲ. ಅನಾಥರನ್ನು ಕಾಯುವುದರಲ್ಲಿ, ಗೆಳೆಯರಿಲ್ಲದವರಿಗೆ ಗೆಳೆಯನಾಗುವುದರಲ್ಲಿ ತನ್ನ ಪಿತೃತ್ವವನ್ನು ಉದಾತ್ತಗೊಳಿಸಿ, ವಸುಧೈವ ಕುಟುಂಬಕನಾದಾನು.

ವಿಜ್ಞಾನಿಗಳೆಷ್ಟೋ ಮಂದಿ ಪ್ರಯೋಗಗಳಲ್ಲಿ ತಾವೇ ಆಹುತಿಯಾಗಿದಾರೆ. ಆ ಹುತಾತ್ಮರ ಬಲಿದಾನವೇ ಮಾನವ ಪ್ರಗತಿ ಪಥದ ಕೈಗಂಬ.

ಗಾಂಧೀಜೀ ಸರ್ವವಸ್ತ್ರ ಪರಿತ್ಯಾಗ ಮಾಡಿ ಕೇವಲ ಕೌಪೀನಧಾರಿಯಾದು ದಕ್ಕೆ ಕಾರಣ ನಮ್ಮ ದೇಶದ ನಿರ್ಗತಿಕ ಅರ್ಧನಗ್ನ ಜನಕೋಟಿಯೊಡನೆ ಆತ್ಮಾಪಮ್ಯವನ್ನು ಸಾಧಿಸುವ ಉದ್ದೇಶ್ಯ.

ಸಾಮಾಜಿಕ-ಆರ್ಥಿಕ ಸಮಸ್ಯೆಗಳಿಂದ ತುಂಬಿದ ನಮ್ಮೀ ದೇಶದಲ್ಲಿ ಜನತೆಯ ದುಃಖ-ದಾರಿದ್ರ್ಯ-ದೈನ್ಯಗಳನ್ನು ತಮ್ಮ ಸ್ವಂತ ಜೀವನದಲ್ಲಿ ಅನುಭವಿಸುವ ವ್ರತ ತೊಟ್ಟ ಜನರು ಬೇಕು. ಪರದುಃಖ ದುಃಖಿತ ರಾಗಿ ಅದಕ್ಕೆ ಅವರು ಪರಿಹಾರವನ್ನು ಅರಸಬಲ್ಲರು. ಈ ಉದ್ದೇಶ್ಯ ದಿಂದಲೇ ಆಶ್ರಮ-ಸಂಸ್ಥೆ, ಶಾಂತಿನಿಕೇತನ, ಚರಖಾಸಂಘ, ಗ್ರಾಮೋ ದ್ಯೋಗ ಸಂಘಗಳಂಥ ಪ್ರಯೋಗ ಶಾಲೆಗಳು ಏರ್ಪಾಡಾದುದು. ದೇಶದ ತೋಟಗಳಿಗೆಲ್ಲ ಸಸಿಗಳನ್ನು ಸಿದ್ಧಮಾಡಿ ಕೊಡುವ ಕೈತೋಟವಿದ್ದಂತೆ ಅವು. ಈ ಪ್ರಯೋಗಶಾಲೆಯಲ್ಲಿ ದೊರೆತ ಫಲವನ್ನು ಲೋಕಕ್ಕೆ ಅರ್ಪಿಸುವುದು ಅದರ ಲಕ್ಷ್ಯ.

ಹಿಂಸೆ-ವೈರಗಳಿಂದ ಕುದಿಯುತ್ತಿರುವ ಈ ಲೋಕದ ಸಂಕಟ-ಪೀಡೆಗಳಿಗೆ ಪರಿಹಾರ ಸಿಗಬೇಕಾದರೆ ಈ ಉದಾತ್ತ ಜೀವನ ಕ್ಷೇತ್ರದಲ್ಲೇ. ಜನತೆಯ ಬಾಳಿಗೆ ಯೋಜನೆ ಬೇಕು; ಸ್ವೈರ ಸ್ವಾರ್ಥದ ವೈಯಕ್ತಿಕ ದೃಷ್ಟಿಯದಲ್ಲ, ನಿಸ್ವಾರ್ಥ ಚಿರಸ್ಥಾಯಿ ಅನಾಸಕ್ತ ದೃಷ್ಟಿಯದು. ಆ ರೀತಿ ಯೋಜನೆ ಮಾಡಿದರೆ ಎಂಥ ಸ್ಥಾನದಲ್ಲಿಯೇ ಇರಲಿ ಪ್ರತಿಯೊಬ್ಬ ಮನುಷ್ಯನಿಗೂ ಸರ್ವಹಿತಕ್ಕಾಗಿ ಲೋಕಾಭ್ಯುದಯಕ್ಕಾಗಿ ತನ್ನ ಕೈಲಾದು ದನ್ನು ನೀಡುವ ಅವಕಾಶ ದೊರೆಯುತ್ತದೆ. ಆಗ ಬಾಳು ಕಾಲದೇಶ ಪರಿಸ್ಥಿತಿಗಳ ಲಕ್ಷ್ಯವಿಲ್ಲದ ಬರೀ ಅಂಧಾನುಕರಣವೂ ಆಗದು, ಉತ್ಪಾದ ಕರ ಲಾಭಕ್ಕಾಗಿ ಗಿರಾಕಿ ಹುಟ್ಟಿಸುವ ಅನುಸರಣವೂ ಆಗದು. ಹಾಗೆ ಯೋಜನೆ ಮಾಡಿದ ಬಾಳು ವ್ಯಕ್ತಿ-ಸಂಘಗಳ ಆವಶ್ಯಕತೆಗಳನ್ನು ಪೂರಯಿಸೀತು, ಸಮಸ್ತ ಲೋಕದ ಸುಖಕ್ಕೂ ದಾರಿ ಮಾಡೀತು; ವ್ಯಕ್ತಿವಿಕಾಸಕ್ಕೆ ಆತ್ಮಾಭ್ಯುದಯಕ್ಕೆ ವಿಶಾಲ ಕ್ಷೇತ್ರವನ್ನು ಕಲ್ಪಿಸಿ, ನೆರೆಹೊರೆಯವರ ಯೋಗಕ್ಷೇಮಕ್ಕೆ ಮನುಷ್ಯ ಕಂಟಕವಾಗದಂತೆ ಮಾಡೀತು.

---

## ೧೧. ಜೀವನದ ಮಟ್ಟಗಳು

ಹಿಂದಿನ ಅಧ್ಯಾಯದಲ್ಲಿ ತಿಳಿಸಿದಂತೆ, ಜನತೆಯ ನಿತ್ಯ-ಜೀವನ ಅವರ ವ್ಯಕ್ತಿತ್ವವನ್ನು ಹೊರಗೆಡಹಲು ಅನುಕೂಲಿಸುವಂತೆ ರೂಪಿತವಾಗಬೇಕು, ನಿಯಮಿತವಾಗಬೇಕು. ಇದು ಅನುಲ್ಲಂಘನೀಯ. ನಾವು ಏನು ತಿನ್ನುತ್ತೇವೆ, ಏನು ಉಡುತ್ತೇವೆ, ಹೇಗೆ ಬಾಳುತ್ತೇವೆ ಎಂಬುದು ನಮ್ಮ ಬಾಳಿಗಷ್ಟೇ ಸಂಬಂಧಿಸಿಲ್ಲ; ಮಾನವ ಜಾತಿಯ ಭವಿಷ್ಯಕ್ಕೂ ಸಂಬಂಧಿಸಿದೆ. ಮನುಷ್ಯ ತಾನು ಉಪಯೋಗಿಸುವ ಅಳತೆ - ಮೂಲ್ಯಗಳ ಮೂಲಕ ತನ್ನ ವಿವೇಕ - ವಿಚಾರಗಳನ್ನು ತಿಳಿಸುವಂತೆ, ಅವನ ಬಾಳಿನ ರೀತಿ ಅವನ ವ್ಯಕ್ತಿತ್ವವನ್ನು ಪ್ರಕಟಿಸುತ್ತದೆ. ಆದುದರಿಂದ ಸರ್ವ ಸಾಮಾನ್ಯವಾದ ಕೆಲವು ಆದರ್ಶಗಳು ಬೇಕು. ಈ ಆದರ್ಶಗಳನ್ನು ಏರ್ಪಡಿಸುವಾಗ ಮನುಷ್ಯನಿಗೆ ತನ್ನ ಸಕಲ ಶಕ್ತಿಗಳನ್ನೂ ವಿಕಾಸಪಡಿಸಿ ಕೊಳ್ಳಲು, ತನ್ಮೂಲಕ ವ್ಯಕ್ತಿತ್ವವನ್ನು ಸ್ಫುಟಗೊಳಿಸಲು ಸಂಪೂರ್ಣ ಅವಕಾಶ ಇರುವ ಹಾಗೆ ವಾಸ್ತವ ದೃಷ್ಟಿಯಿಂದ ಏರ್ಪಡಿಸಬೇಕು. ಈ ಆದರ್ಶ ಕೇವಲ ದೈಹಿಕ ಆವಶ್ಯಕತೆಗಳನ್ನು ಸಾಧಿಸಿದರೆ ಸಾಲದು; ಬರೀ ಇರುವಿಕೆಯಿಂದ ಬದುಕನ್ನು ಮೇಲೆತ್ತಿ ಬಾಳನ್ನು ಗುಣಸಂಪನ್ನ ವಾಗಿ ಮಾಡುವ ಅಸಂಖ್ಯ ಅಂಶಗಳನ್ನೂ ಸಾಧಿಸಬೇಕು. ಮನುಷ್ಯ ಜೀವನವನ್ನು ಯೋಗ್ಯ ರೀತಿಯಲ್ಲಿ ನಡೆಸಲು ಅಗತ್ಯವಾದ ಅನ್ನ, ಆವಶ್ಯಕವಾದ ಔಷಧೋಪಚಾರ, ಮೈಮುಚ್ಚಿಕೊಳ್ಳಲು ಮಾತ್ರವಲ್ಲದೆ ಕಲೆ - ಚೆಲುವುಗಳನ್ನು ತೋರಿಸುವಂಥ ಬಟ್ಟೆಬರೆ, ಒಳಗಿನ ಶಕ್ತಿ- ಸಾಮರ್ಥ್ಯಗಳನ್ನು ಹೊರಗೆಳೆದು ಬಾಳನ್ನು ಬೆಳಗಿಸುವ ಶಿಕ್ಷಣ, ಮನುಷ್ಯರ ರಚನಾಕೌಶಲವನ್ನು ಹೊರಹೊಮ್ಮಿಸುವ ಸ್ವಭಾವಾನುಗುಣ ವಾದ ಕೆಲಸ, ವ್ಯಕ್ತಿ- ಸಮಾಜ ಎರಡೂ ದಾರಿಯಲ್ಲಿ ಪ್ರಗತಿಯನ್ನು ಸಾಧಿಸುವ ಉಳಿದೆಲ್ಲ ಪರಿಕರಗಳು - ಇವೆಲ್ಲವನ್ನೂ ಒದಗಿಸಬೇಕು ಈ ಆದರ್ಶ.

ಈ ಎಲ್ಲ ಅಂಶಗಳನ್ನೂ ತೃಪ್ತಿಕರವಾಗಿ ನಿರ್ವಹಿಸುವ ಆದರ್ಶ ಅಥವಾ ಮಟ್ಟ ವ್ಯಕ್ತಿಗೂ ಸಮಾಜಕ್ಕೂ ಉಭಯಸಮ್ಮತವಾಗಿರಬೇಕಾ

ದುದು ಸಹಜ. ಕೇವಲ ಒಂದೇ ಕಡೆಯ ಹಿತವನ್ನು ಮಾತ್ರ ಗಮನಿಸ ಲಾಗುವುದಿಲ್ಲ. ಯಾವ ಅಂಕೆಯೂ ಇಲ್ಲದೆ ವ್ಯಕ್ತಿ ತನ್ನ ಇಷ್ಟಬಂದಂತೆ ಹೋಗಲಿ ಎಂದು ಬಿಟ್ಟರೆ, ಆ ವ್ಯಕ್ತಿ ಅನುಕರಣಶೀಲ ಅಥವಾ ಅನುಸರಣ ಶೀಲ ವರ್ಗದವನಾದರೆ, ಅವನ ಬಾಳಿನ ರೀತಿ ಸಮಾಜಕ್ಕೆ ಕಿಂಚಿತ್ತೂ ಲಾಭಕರವಾಗಲಾರದು; ಘಾತಕವೇ ಆಗಬಹುದು. ರಚನಾಶೀಲ ನಾದರೆ ಅವನ ರಚನೆಗಳು ಇತರರ ರಚನೆಗಳಿಗೆ ವಿರುದ್ಧವಾಗಿ, ಘರ್ಷಣೆ ನಡೆದು ಪ್ರಗತಿಗೆ ಅಡ್ಡವಾಗಬಹುದು. ಉತ್ಪಾದಕನನ್ನು ಅವನ ಪಾಡಿಗೇ ಬಿಟ್ಟರೆ, ಅವನ ತನ್ನ ವಸ್ತುಗಳನ್ನು ಪ್ರಚಾರದ ಮೂಲಕ, ಸಮಾಜದಲ್ಲಿ ಸಂಪ್ರದಾಯ-ರೂಢಿಗಳನ್ನು ತಂದೊಡ್ಡುವ ಮೂಲಕ, ಹೇಗೆ ಹೆಚ್ಚು ಹೆಚ್ಚಾಗಿ ಮಾರಬಹುದೋ ಅದನ್ನೇ ಯೋಚಿಸುತ್ತಾನೆ. ಹಾಗಲ್ಲದೆ ಸಮಾಜಕ್ಕೇ ಸರ್ವಾಧಿಕಾರವನ್ನು ಕೊಟ್ಟರೆ ಅದರ ಪದಹತಿಗೆ ವ್ಯಕ್ತಿ ಜರ್ಝರಿತನಾಗಿ ಕೇವಲ ಯಂತ್ರವತ್ ಆದಾನು. ಸಾಮಾನ್ಯ ಜನರಿಗೆ ಈಗ ಬಂಡವಾಳಷಾಹಿ, ಫ್ಯಾಸಿಸಂ, ನಾಜಿಸಂ, ಸರಕಾರಿ-ಸಮತಾವಾದಗಳಲ್ಲಿ ಒದಗಿರುವ ಅಧೋಗತಿ ಅದೇ ಅಲ್ಲವೆ. ಈಗ ಜಗತ್ತು ಉತ್ಪಾದಕನ ಕೈಯಲ್ಲಿ ಅವನು ಹಾಡಿದ ರಾಗಕ್ಕೆ ಜಗತ್ತು ತಾಳ ಹಾಕಬೇಕು. ಈ ಉತ್ಪಾದಕರಿಗಾದರೂ ಒಂದು ಯೋಜನೆ, ನಿಯಮ ಇದೆಯೆ? ಏನೂ ಇಲ್ಲ. ಅದರಿಂದ ಬರೀ ದೊಂಬಿ, ಅವ್ಯವಸ್ಥೆ ಆಗಿದೆ. ಪ್ರತಿಯೊಬ್ಬ ಉತ್ಪಾದಕನೂ ತನಗೆ ತೋಚಿದಂತೆ ನಡೆಯುತ್ತಾನೆ. ಅದರಿಂದ ಗೊಂದಲವಾಗಿ ಬಾಳಿನ ಬಗೆಯಲ್ಲಿಯೆ ಕಕ್ಕಾಬಿಕ್ಕಿಯಾಗಿದೆ.

ಬಾಳಿನ ಮಟ್ಟ ಎನ್ನುತ್ತಾರೆ. ಹಾಗೆಂದಾಗ ಅವರ ಅರ್ಥವೇನೋ ತಿಳಿಯುವುದು ಕಷ್ಟವಾಗಿದೆ. ಬಹಳ ಅಸ್ಪಷ್ಟ, ಅನಿರ್ದಿಷ್ಟ ಶಬ್ದ ಅದು. ತಾವು ಏನು ಹೇಳುತ್ತಾರೋ ಅದನ್ನು ಖಚಿತವಾಗಿ ತಿಳಿಸದೆ ಈ ಶಬ್ದ ವನ್ನು ಧಾರಾಳವಾಗಿ ಬಳಸಬಹುದು. ಇದಕ್ಕೆ ಪ್ರತಿಯೊಬ್ಬನಿಗೂ ಬೇರೆ ಬೇರೆ ಅರ್ಥವಿದೆ. ಒಂದು ರೇಡಿಯೋ, ಒಂದು ಮೋಟರು ಇದ್ದರೆ ಅದು ಕನಿಷ್ಠ ಮಿತಿಯ ಬಾಳ ಮಟ್ಟ ಒಬ್ಬನಿಗೆ. ಎರಡುಹೊತ್ತು ಹೊಟ್ಟೆ ತುಂಬಾ ಊಟವೇ ಇನ್ನೊಬ್ಬನಿಗೆ ಮಹದೈಶ್ವರ್ಯ. ಆದುದರಿಂದ ನಮ್ಮ ದೇಶದ ಪರಿಸ್ಥಿತಿಯನ್ನು ಗಮನಿಸಿ ಒಂದು ವಾಸ್ತವಿಕ

ಮಟ್ಟವನ್ನು ಏರ್ಪಡಿಸಬೇಕು. ಈ ಮಟ್ಟ-ಆದರ್ಶ ಬರೀ ಆರ್ಥಿಕ ದೃಷ್ಟಿಯಿಂದ ರೂಪಿತವಾಗಬೇಕೆ? ಸಾಂಸ್ಕೃತಿಕ, ಸಾಮಾಜಿಕ ಸಂದರ್ಭಗಳೂ ಅದನ್ನು ರೂಪಿಸಬೇಡವೆ? ಮೇಲ್ಮಟ್ಟ ಕೆಳಮಟ್ಟ ಎಂದರೇನು? ಇಹಭೋಗದ ಸಕಲಾನುಕೂಲವೂ ಇದ್ದರೆ ಮೇಲ್ಮಟ್ಟ, ದೇಹಯಾತ್ರೆಗೆ ಎಷ್ಟು ಅಗತ್ಯವೋ ಅಷ್ಟು ಸೌಕರ್ಯವಾದರೆ ಕೆಳಮಟ್ಟ. ಹೀಗೆಯೇ?

ಹಿಂದಿನ ಅಧ್ಯಾಯಗಳಲ್ಲಿ ಬಾಳನ್ನು ಎಷ್ಟು ಬಗೆಯಲ್ಲಿ ಕಾಣಬಹುದೋ, ಬಾಳಿನಲ್ಲಿ ಎಷ್ಟು ಬಗೆಯ ಮೂಲ್ಯಗಳಿವೆಯೋ ನೋಡಿದೇವೆ. ಅದೆಲ್ಲದರ ಫಲವಾಗಿ, ಬಾಳನ್ನು ಬರಿ ಹಣದ ಗಳಿಕೆಯಿಂದ ಅಳೆಯಬಾರದು; ತಾತ್ಕಾಲಿಕ, ಕ್ಷಣಿಕ ಪ್ರಯೋಜನದಿಂದಲೂ ಕೂಡದು; ಬಾಳನ್ನು ವಿಶಾಲ, ವ್ಯಾಪಕ ಆಗಿಸುವ ವಿವಿಧ ಅಂಶಗಳನ್ನು ಒಳಗೊಂಡು ಶಾಶ್ವತತೆ, ಅಹಿಂಸೆಗಳನ್ನು ಸ್ಥಾಪಿಸುವ ಸಮತೂಕದ ಆರ್ಥಿಕ ವಿಧಾನವೇ ನಮ್ಮ ಗುರಿ ಎಂಬ ಸಿದ್ಧಾಂತಕ್ಕೆ ಬಂದಿದೇವೆ. ಅಂಥ ವಿಧಾನದಲ್ಲಿ ಹಣ ತೀರಾ ಕಟ್ಟಕಡೆಯ ಅಂಶ; ಅತ್ಯಂತ ಅಪ್ರಧಾನ ಅಂಶ.

ಇಂಗ್ಲೆಂಡಿನಲ್ಲಿ ಜೀವನದ ಮಟ್ಟ ಬಹಳ ಉನ್ನತವೆಂದು ಹೇಳುತ್ತಾರೆ. ಇಲ್ಲಿ ಒಬ್ಬ ತೋಟಗಾರನಿಗೂ ಎರಡಂತಸ್ತಿನ ಮಹಡಿ ಮನೆ. ಮಹಡಿಯ ಮೇಲೆ ಮೂರು ನಾಲ್ಕು ಶಯ್ಯಾಗೃಹಗಳು; ಅವಕ್ಕೆ ಆನಿಕೊಂಡು ಒಂದು ಮೂತ್ರಿ, ಒಂದು ಕಕ್ಕಸು. ಕೆಳಗಡೆ ಒಂದು ಭೋಜನಶಾಲೆ, ವಾಸಕ್ಕೆ ಮನೆ, ಅಡಿಗೆ-ಉಗ್ರಾಣದ ಮನೆಗಳು. ಮನೆಯ ಕಿಟಕಿಗಳಿಗೆ ಕನ್ನಡಿಯ ಬಾಗಿಲು. ಅವಕ್ಕೆ ಜವನಿಕೆಗಳು. ತಂಗಾಳಿ ನುಗ್ಗಿ ಬಾರದಂತೆ ಬಾಗಿಲಿಗೆ ಭಾರವಾದ ಪರದೆಗಳು. ನೆಲಕ್ಕೆ ಕಂಬಳಿ, ಗೋಡೆಗೆ ಬಣ್ಣ-ಕಾಗದ. ಪ್ರತಿಯೊಂದು ಕೊಠಡಿಗೂ ಅದಕ್ಕೆ ತಕ್ಕ ಮೇಜು ಕುರ್ಚಿಗಳು. ಊಟದ ಮನೆಯಲ್ಲಿ ದೊಡ್ಡ ಮೇಜು, ಕೈಯಿಲ್ಲದ ಕುರ್ಚಿಗಳು, ಪಕ್ಕದಲ್ಲೊಂದು ನಿಲುವುಗನ್ನಡಿ; ಊಟದ ಮೇಜಿಗೆ ಅಗತ್ಯವಾದ ಬಟ್ಟೆಬರೆ, ಪಿಂಗಾಣಿ ಸಾಮಾನು, ಚಾಕು ಚೂರಿ ಇತ್ಯಾದಿ. ಮೇಜಿನ ಮೇಲೆ ಊಟಕ್ಕೆ, ಸಮಾರಾಧನೆಯೇನಲ್ಲದಿದ್ದರೂ, ತಟ್ಟೆ

ಬಟ್ಟಲು, ಚಾಕು ಚೂರಿ, ಚಂಚಾ ಛರ್ಚೆ ಎಲ್ಲವೂ ಬೇಕು. ಒಂದೊಂದು ಪದಾರ್ಥ ತಿನ್ನಲಿಕ್ಕೂ ಬೇರೆ ಬೇರೆ ತಟ್ಟೆ ಬಟ್ಟಲು, ಚಾಕು ಚೂರಿ. ಒಂದರ ಸಾಮುಗ್ರಿ ಇನ್ನೊಂದಕ್ಕೆ ಉಪಯೋಗವಿಲ್ಲ. ಒಬ್ಬ ಊಟಕ್ಕೆ ಕೂತರೆ ಸುಮಾರು ಐವತ್ತು ಪಾತ್ರೆ ಬೀಳುತ್ತವೆ ತೊಳೆಯಲಿಕ್ಕೆ. ಇದು ಉನ್ನತ ಮಟ್ಟದ ಅವಸ್ಥೆ.

ಭಾರತದಲ್ಲಿ ಸಂಸ್ಕೃತಿವಂತನಾದ ಒಬ್ಬ ಜನನಾಯಕ, ಒಂದು ರಾಜ್ಯದ ಮುಖ್ಯಮಂತ್ರಿ, ಕೋಟಿಗಟ್ಟಲೆ ಜನರ ಯೋಗಕ್ಷೇಮಕ್ಕೆ ಬಾಧ್ಯನಾದರೂ ಅವನ ಮನೆಯಲ್ಲಿ ಹೇಳಿಕೊಳ್ಳುವಷ್ಟು ಕುರ್ಚಿ-ಮೇಜು-ಸೋಫಾಗಳಿಲ್ಲ. ಮನೆ ಅರಮನೆಯಷ್ಟು ದೊಡ್ಡದೇ. ಅವನ ದಿವಾಣ ಖಾನೆಯಲ್ಲಿ ಕೊಳೆ-ಕಸ ಕೂಡಹಾಕುವಂಥ ಷಿರಾಜ್‌ಗಳೂ ಪತರಂಜಿಗಳೂ ಇಲ್ಲ. ನೆಲಕ್ಕೆ ಸೊಗಸಾದ ಅಮೃತಶಿಲೆ. ನೆಲವನ್ನು ಚೊಕ್ಕಟವಾಗಿ ಗುಡಿಸಿ ಸಾರಿಸಬಹುದು. ಮನೆಯಲ್ಲಿ ಬರಿಗಾಲಲ್ಲೇ ಓಡಾಡಿಯಾನು. ಮಂತ್ರಿ ದಕ್ಷಿಣ ಭಾರತದಲ್ಲಿ ಉತ್ತಮೋತ್ತಮರೆಲ್ಲರೂ ಹಾಗೇ ಮಾಡುತ್ತಾರೆ. ಊಟಕ್ಕೆ, ನೆಲದ ಮೇಲೆ ಒಂದು ಆಸನದ ಮೇಲೆ ಕುಳಿತು ಮುಂದೆ ಬಾಳೆಯೆಲೆ ಹರಡಿಕೊಂಡು ಊಟಮಾಡಿಯಾನು. ಚಾಕು ಚೂರಿಗಳ ವಿದ್ಯೆ ಅವನಿಗೆ ತಿಳಿಯದು. ದೇವರು ಕೊಟ್ಟ ಕೈಯನ್ನೇ ಉಪಯೋಗಿಸುತ್ತಾನೆ. ಊಟ ಮುಗಿದ ಮೇಲೆ ಏನನ್ನೂ ಉಜ್ಜಿ ತೊಳೆಯಬೇಕಾಗಿಲ್ಲ. ಆ ಎಲೆಯನ್ನು ಎತ್ತಿ ಬಿಸುಟರೆ ಅದನ್ನು ಹಸು ತಿಂದು ಹಾಲಾಗಿ ಮಾಡುತ್ತದೆ. ಸುಮ್ಮನೆ ಕೈತೊಳೆದರೆ ಸಾಕು. ಇದು 'ಕೀಳು' ಮಟ್ಟ!

ಆಡಂಬರದ ಆ ಜೀವನ ಮಟ್ಟ ತನ್ನ ಆರಾಧಕನನ್ನು ವ್ಯರ್ಥ ಶ್ರಮಕ್ಕೆ ಗುರಿಮಾಡುತ್ತದೆ. ಬ್ರಿಟಿಷ್ ತೋಟಗಾರನ ಹೆಂಡತಿ ಬೆಳಗಿನಿಂದ ಬೈಗಿನವರೆಗೆ ಏನಾದರೊಂದು ಮಾಡುತ್ತಲೇ ಇರಬೇಕಾಗುತ್ತದೆ. ನೆಲಕ್ಕೆ ಹಾಸಿದ ಕಂಬಳಿ ಕೊಡಹು, ಕಿಟಕಿಯ ಧೂಳು ಒರಸು, ಪರದೆಗಳನ್ನು ಒಗೆ, ತಟ್ಟೆ ಚಾಕು ಚೂರಿಗಳನ್ನು ತೊಳೆ, ಮಗ್ಗಲುಹಾಸಿಗೆ ದಿಂಬಿನ ಚೀಲಗಳನ್ನು ಬೆಳ್ಳಗೆ ಮಾಡು; ಇದರ ಜೊತೆಗೆ ದಿನಗಟ್ಟಲೆ ತರಕಾರಿ ಹೆಚ್ಚು, ಅಡಿಗೆ ಮಾಡು, ಪೇಟೆಗೆ ಹೋಗಿ ಸಾಮಾನು ತಾ-

ಎಷ್ಟುಮಾಡಿದರೂ ಸಾಲದು ಒಂದು ಚಾಕು ಚೂರಿ ತೊಳೆಯುವುದೇ ಕೈತೊಳೆಯುವುದಕ್ಕಿಂತ ಹೆಚ್ಚು ಶ್ರಮ, ಹೆಚ್ಚು ಹೊತ್ತು. ಇಂಥ ಆಡಂಬರದ ಬದುಕು ಇದ್ದಲ್ಲಿ ಹೆಂಗಸರು, ಮಕ್ಕಳು ಬೇಡ ಎನ್ನುವುದು ಅಚ್ಚರಿಯೆ? 'ಮಕ್ಕಳಿಗೂ ನಾಯಿಗಳಿಗೂ ಸ್ಥಳವಿಲ್ಲ' ಎಂಬ ಎಚ್ಚರಿಕೆ ಆ ದೇಶಗಳಲ್ಲಿ ಸರ್ವತ್ರ ಕಾಣಬರುತ್ತದೆ. ಬಿಡುವು ಇಲ್ಲದ ಈ ದಿನಚರಿಗೆ ತಾಯ್ತನ ಒಂದು ಹೊರೆ. ಈ ಆಡಂಬರದ ವ್ಯರ್ಥಕರ್ಮದ ಜೀವನವೇ ಅವರ ಜೀವನಮೂಲ್ಯಗಳ ಕುರುಹು. ಉತ್ಪಾದಕರು ಪ್ರಚಾರ, ಜಾಹೀರಾತು, ಹೊಸ ಸಂಪ್ರದಾಯಗಳ ಏರ್ಪಾಟು, ಇತ್ಯಾದಿ ರೀತಿಗಳಿಂದ ಈ ಬಗೆಯ ಆಡಂಬರದ ಜೀವನವನ್ನು ಅವಲಂಬಿಸುವಂತೆ ಗೃಹಿಣಿಯರನ್ನು ಮರುಳುಗೊಳಿಸುತ್ತಾರೆ. ಇದೊಂದು ದೊಡ್ಡ ಬಲೆ. ಈ ಬಲೆಗೆ ಬಿದ್ದರೆ ಅದು ಬೇಕು ಇದು ಬೇಕು ಎಂಬ ದಾಹಕ್ಕೆ ದಾಸರಾಗುವುದು ಖಂಡಿತ. ಅದರಿಂದ ಬರುವ ಫಲ ಏನೂ ಇಲ್ಲ; ಕೆಲಸಕ್ಕೆ ಬಾರದ ಚಿಲ್ಲರೆ ವಿಷಯಗಳಿಂದ ಬದುಕನ್ನು ತುಂಬುವುದೊಂದೇ.

ಹೊಸ ಹೊಸ ವಸ್ತುಗಳನ್ನು ಮಾರುವ ಜಾಣರು, ಯಂತ್ರಗಳನ್ನು ಬಳಸಿದರೆ ಹೆಂಗಸರಿಗೆ ಬಿಡುವು ಸಿಗುತ್ತದೆ ಎಂಬ ಉಪದೇಶಮಾಡುತ್ತಾರೆ. ಆದರೆ ನಾವು ಮಾಡುವ ಕೆಲಸಕ್ಕೆ ಒಂದು ಯಂತ್ರವನ್ನು ಒಂದು ಕಡೆ ಬಳಸಿದೆವೋ, ಆದರಿಂದ ಉಳಿತಾಯವಾದ ಹಣಕ್ಕೂ ಕಾಲಕ್ಕೂ ಸಂಚಕಾರವಾಗಿ ಇನ್ನೊಂದು ಯಂತ್ರ ಹಿಂದೆಯೇ ಬರುತ್ತದೆ. ಕಡೆಗೆ ಸಾಕಾಪ್ಪಾ ಸಾಕು ಎನಿಸಿಬಿಡುತ್ತದೆ.

ಈ ಆಡಂಬರದ ಬದುಕಿನಲ್ಲಿ ವ್ಯಕ್ತಿಯ ಕಲೆ ಕೌಶಲ ಯಾವುದಕ್ಕೂ ಅವಕಾಶವಿಲ್ಲ. ವಿಚಾರ ಮನನಗಳಿಗಂತೂ ಎಡೆಯೇ ಇಲ್ಲ. ಪ್ರತಿಯೊಂದನ್ನೂ ತಾನೇ ಮಾಡಿಕೊಳ್ಳಬೇಕು. ಒಂದು ಪುಸ್ತಕ, ಪತ್ರಿಕೆ ನೋಡಲಿಕ್ಕೂ ಬಿಡುವಿಲ್ಲ. ಬೆಳಗಿನಿಂದ ಸಂಜೆಯವರೆಗೆ ಏನೋ ಕೆಲಸ. ನಿಜವಾದ ಜೀವನವನ್ನು ನೀಡುವ ಕೆಲಸವಲ್ಲ; ಶುದ್ಧ ಶೂನ್ಯ ಕೆಲಸ. ಇದು ಬದುಕೆ? ಬರೀ ಇರುವಿಕೆ.

ಅದೇ 'ಸರಳ' ಜೀವನವಾದರೋ—'ಉನ್ನತ'ವಾಗಿ, ಮನುಷ್ಯ

ಜೀವನದ ಉತ್ತಮಾಂಶಗಳ ವಿಕಾಸಕ್ಕೆ ದಾರಿ ಮಾಡುತ್ತದೆ. ಆಡಂಬರದ ರೀತಿ ವ್ಯಕ್ತಿತ್ವವನ್ನೇ ಕೊಲ್ಲುತ್ತದೆ.

ಊಟದ ಮಾತು. ಭಾರತೀಯ ಪದ್ಧತಿಯಾಗಲಿ ಪಾಶ್ಚಾತ್ಯ ಪದ್ಧತಿಯಾಗಲಿ ಆಹಾರದ ಪೌಷ್ಟಿಕಾಂಶವೇನು ಹೆಚ್ಚು ಕಡಿಮೆ ಯಾಗದು. ಭಾರತೀಯ ಭೋಜನಪದ್ಧತಿ ಶುಚಿಗೆ ಶುಚಿ, ಅಗ್ಗಕ್ಕೆ ಅಗ್ಗ. ಬಡಿಸುವುದರಲ್ಲಿ ಕಲೆಗಾರಿಕೆಗೆ ಬೇಕಾದಷ್ಟು ಅವಕಾಶವಿದೆ. ಹಸಿರಾದ ಹೊಸ ಬಾಳೆಯೆಲೆಯ ಮೇಲೆ ಬಡಿಸಿದ ಊಟಕ್ಕಿಂತ ಮನೋ ಹರವಾದುದು ಏನಿದೆ? ಮಲ್ಲಿಗೆಯಂಥ ಅನ್ನ, ಬಂಗಾರದಂಥ ತೊವ್ವೆ, ಬೆಳುದಿಂಗಳಿನಂಥ ಮೊಸರು, ತಾಮ್ರದಂಥ ಚಟ್ನಿ, ಕೆಂಪು ಉಪ್ಪಿನ ಕಾಯಿ, ನಾನಾ ವರ್ಣಗಳ ಪಲ್ಯ-ಎಂಥ ವರ್ಣ ಸಮ್ಮೇಳನ! ಎಷ್ಟು ಚೆಲುವು! ಊಟವಾದ ಮೇಲೆ ಎಲೆಯನ್ನೆತ್ತಿ ಬಿಸುಟು ನೆಲ ಸಾರಿಸಿದ ರಾಯಿತು. ಕೈಯಿಂದ ಊಟಮಾಡುವ ನಮ್ಮ ಭೋಕ್ತೃಗಳು ಬಾಯಿ ಮುಕ್ಕಳಿಸಿ, ಹಲ್ಲುತಿಕ್ಕಿ ಮುಖ ತೊಳೆಯುತ್ತಾರೆ. ಎಂಥ ಆರೋಗ್ಯ ವರ್ಧಕ ಅಭ್ಯಾಸ. ಚಾಕು ಭರ್ಚಿ ಚೂರಿಗಳಿಂದ ಊಟಮಾಡುವವರಿಗೆ ಈ ಒಳ್ಳೆಯ ರೂಢಿ ತಪ್ಪಿಹೋಗಿದೆ. ಬಹಳವಾದರೆ ಕೈಬೆರಳುಗಳನ್ನು ಒಂದು ದೊಡ್ಡ ನೀರಿನ ಬಟ್ಟಲಲ್ಲಿ ಅದ್ದಿ, ತುಟಿ ಒದ್ದೆಮಾಡಿಕೊಂಡು ಒಂದು ಬಟ್ಟೆಯಿಂದ ಒರೆಸಿಕೊಳ್ಳುತ್ತಾರೆ. ಈ ಆಡಂಬರದ ಪಾಶ್ಚಾತ್ಯ ಪದ್ಧತಿಯಲ್ಲಿ ಏನಿದೆ ಉತ್ತಮ ಗುಣ? ಈ ಪದ್ಧತಿಯಿಂದ ಶುಚಿಯಾಗಲಿ ಕಲೆಯಾಗಲಿ ಹೆಚ್ಚಲಿಲ್ಲ; ವೆಚ್ಚವೇನೋ ಹೆಚ್ಚಿತು. ಅಂತೇ ಪಾಶ್ಚಾತ್ಯ ಪದ್ಧತಿ 'ಉನ್ನತ,' ನಮ್ಮದು 'ಕೀಳು' ಎಂಬುದು ತಪ್ಪು. ನಮ್ಮದು 'ಸರಳ,' ಅವರದು 'ಆಡಂಬರ' ಎಂಬುದು ಸರಿ.

ಆದರೆ ಒಂದೇ ಸಂಪ್ರದಾಯದಲ್ಲಿ, ಒಂದೇ ಪದ್ಧತಿಯ ಜೀವನದಲ್ಲಿ ಮೇಲು-ಕೀಳು ಮಟ್ಟ ಇರಬಹುದು. ನಯವಾದ ಪಂಚೆ ಉಡುವವನ ಜೀವನದ ಮಟ್ಟ ಮೇಲು, ಒರಟಾದ ಪಂಚೆಯುಡುವವನದು ಕೀಳು. ಆದರೆ ಪಂಚೆಯುಟ್ಟು ಬನೀನು ತೊಟ್ಟವನಿಗಿಂತ ಪಾಶ್ಚಾತ್ಯ ರೀತಿಯ ಷರಾಯಿ-ಅಂಗಿ-ಟೋಪಿ ಧರಿಸಿದವನ ಮಟ್ಟ ಹೆಚ್ಚಲ್ಲ. ಮೇಜಿನ ಮೇಲೆ ಊಟ ಮಾಡಿದರಲ್ಲ. ಭೋಜನದಲ್ಲಿ ಮೇಲು ಮಟ್ಟ ಪೌಷ್ಟಿಕವಾದ

ಆಹಾರ ಉಂಡವನ ಮಟ್ಟ ಮೇಲು. ಬರೀ ಅನ್ನ ಚಟ್ನಿ ತಿನ್ನುವವನ ಮಟ್ಟ ಕೀಳು.

ಸೇವಾವಿಧಾನದ ಜೀವನ ನಡೆಸುವವನ ಮಟ್ಟಕ್ಕಿಂತ ಪರಾಪಹಾರ, ಪರೋಪಜೀವಿ ವಿಧಾನಗಳ ಬದುಕು ಕೀಳು. ಎಷ್ಟೇ ವೈಭವೋಪೇತವಾದರೂ ಎಷ್ಟು ತುಟ್ಟಿಯಾದರೂ ಒಬ್ಬ ಕೋಟ್ಯಾಧೀಶನ ಬಾಳಿನ ಮಟ್ಟ ದೇಶಸೇವಾ ನಿರತನಾದ ಆಶ್ರಮವಾಸಿಯ ಬಾಳಿಗಿಂತ ಕೀಳು.

ಆಧುನಿಕ ಕಾಲದಲ್ಲಿ ಸ್ಪರ್ಧೆಯಿಂದ ಆಡಂಬರದ ಸಂಪ್ರದಾಯಗಳನ್ನು ಹೆಚ್ಚಿಸುವುದೇ ಕೆಲಸವಾಗಿದೆ. ಅದರಿಂದ ಮಾನವೀಯತೆಯ ಮಟ್ಟ ಇಳಿಯುತ್ತಲಿದೆ. ಅಮೆರಿಕಾದಲ್ಲಿ ತಪ್ಪು ತಿಳಿವಳಿಕೆಯಿಂದ ಅಸತ್ಯ ವಿಚಾರಗಳ ಪ್ರಚಾರದಿಂದ ಗೃಹಜೀವನವೇ ಇಲ್ಲದಾಗುತ್ತಿದೆ. ಗಂಡಹೆಂಡಿರು ಒಂದು ಚಾಳದಲ್ಲಿ ಎರಡು ಕೋಣೆ ಹಿಡಿಯುತ್ತಾರೆ. ಅಲ್ಲಿ ಸಕಲ ಯಂತ್ರೋಪಕರಣಗಳೂ ಉಂಟು. ಬೆಳಗಾಗುತ್ತಲೇ ಗಂಡ-ಹೆಂಡಿರಿಬ್ಬರೂ ಕೆಲಸಕ್ಕೆ ಹೋಗುತ್ತಾರೆ. ಇಬ್ಬರೂ ದಾರಿಯಲ್ಲಿ ಯಾವುದೋ ಒಂದು ಹೋಟೆಲಿನಲ್ಲಿ ಮಧ್ಯಾಹ್ನದ ಊಟ ಮುಗಿಸುತ್ತಾರೆ. ಸಂಜೆಗೆ ಇಬ್ಬರಿಗೂ ಭೇಟಿ. ಅಷ್ಟು ದಣಿದ ಮೇಲೆ ಅಡಿಗೆಯೇನು? ಇಬ್ಬರೂ ಹತ್ತಿರದ ಹೋಟೇಲಿನಲ್ಲಿ ರಾತ್ರಿಯ ಊಟಮಾಡಿ ಬರುತ್ತಾರೆ. ಇಬ್ಬರೂ ದುಡಿದು ತಂದ ಸಂಬಳ ಕೈತುಂಬಾ ಆದರೆ ಮೋಟಾರಿನಲ್ಲಿ ಓಡಾಡಿ, ಒಂದು ಸಿನಿಮಾ ನೋಡಿ, ತಮ್ಮ ಕೋಣೆಗೆ ಬಂದು ರೇಡಿಯೋ ಕೇಳುತ್ತಾರೆ. ಮನೆಗೆಲಸವಿಲ್ಲ, ಅಡಿಗೆಯಿಲ್ಲ ; ಮನೆಗೆ ಸಂಬಂಧಿಸಿದ್ದು ಏನೂ ಇಲ್ಲ. ಅವರಿಗೆ ಮಕ್ಕಳ ತಾಪತ್ರಯ ಬೇಡ. ಅವರ 'ಉನ್ನತ' ಮಟ್ಟದ ಜೀವನದಲ್ಲಿ ಮಕ್ಕಳಿಗೆ ಅವಕಾಶವೂ ಇಲ್ಲ. ಗಿರಣಿಗಾರರು ತಮಗೆ 'ಆಳು'ಗಳು ಬೇಕೆಂದು ಏರ್ಪಡಿಸಿದ ಈ ಉನ್ನತ ಮಟ್ಟದ ಮಾಯೆಗೆ ಮರುಳಾಗಿ ಗುಲಾಮರಾದವರು ಇವರು. ಹಳ್ಳಿಗಳಲ್ಲಿ ಕೆಲಸ ಬಿದ್ದಾಗ ಮನೆಯಾಕೆಗೆ, ಯಜಮಾನನಿಗೆ ನೆರವಾಗುತ್ತಿದ್ದ ಬಿಡಿಕೆಲಸಗಾರರು ಈ ಗಿರಣಿಗಾರರ ದೆಸೆಯಿಂದ ನಿರುದ್ಯೋಗಿಗಳಾದರು. ಈಗ ಗಿರಣಿಗಳ ಬಾಗಿಲಿಗೇ ಬಂದು ಅಲ್ಲಿ 'ಉನ್ನತ' ಜೀವನದ ಗುಲಾಮರಾದರು.

ಈ 'ಉನ್ನತ' ಮಟ್ಟವನ್ನು ಹೊಗಳುವವರು ಲೋಕೋಪಕಾರಕ್ಕಾಗಿ ಹೊಗಳುತ್ತಿಲ್ಲ. ತಮ್ಮ ವಸ್ತುಗಳನ್ನು ಮಾರಲು ಹೊಗಳುತ್ತಾರೆ. ಗಿರಣಿಗಾರರು ಕೆಲಸಗಾರರನ್ನು ಬರೀ ಆಳುಗಳಾಗಿ ಮಾಡಿ ಇಂಥ ಮಟ್ಟವನ್ನು ಕಲ್ಪಿಸಿ ಅವರ ಸ್ವೇಚ್ಛಾ-ಸ್ವಾತಂತ್ರ್ಯವನ್ನೇ ಅಪಹರಿಸುತ್ತಾರೆ. ಜೀವನದ ಮಟ್ಟ ಹೆಚ್ಚಿದಂತೆ ಕೆಲಸಗಾರರ ಚೌಕಾಸಿಯ ಬಲ ಕಡಮೆಯಾಗುತ್ತದೆ.

ತನ್ನ ಕೆಲಸಗಾರರು ಆಗಾಗ ತಪ್ಪಿಸದಂತೆ, ನಿಯತವಾಗಿ ದುಡಿಯುವಂತೆ ಮಾಡಲು ಗಿರಣಿಗಾರ ತನ್ನ ಕೆಲಸಗಾರರಿಗೆ 'ಉನ್ನತ' ಮಟ್ಟದ ಆಡಂಬರವನ್ನು ಕಲಿಸುತ್ತಾನೆ. ಅದರಿಂದ ಅವನ ಉತ್ಪತ್ತಿ ಏರಿಳಿಯದೆ ಒಂದೇ ಸಮವಾಗಿರುತ್ತದೆ. ಇದಕ್ಕಾಗಿ ಕೆಲಸಗಾರರಿಗೆ ಹೆಚ್ಚು ವೇತನ ಕೊಡುತ್ತಾನೆ. ಅವರಿಗಾಗಿ ಕ್ಲಬ್ಬು, ಆಟಪಾಟ, ಸಿನಿಮಾ, ಒಳ್ಳೆಯ ಮನೆಗಳು, ಪಾರ್ಕು ಮುಂತಾದವನ್ನೆಲ್ಲ ಮಾಡುತ್ತಾನೆ. ಈ ಅನುಕೂಲಗಳಿಗೆಲ್ಲ ಕೆಲಸಗಾರರ ಮನಸ್ಸು ಒಗ್ಗಿಹೋಗುತ್ತದೆ. ಅಮೆರಿಕಾದ ಗಂಡಹೆಂಡಿರ ದೃಷ್ಟಾಂತದಂತೆ ಆಡಂಬರದ ಬಾಳಿಗೆ ಮನಸೋತು, ಗಿರಣಿಗಾರ ದಾರಿತಪ್ಪಿದರೂ ಅವನನ್ನು ವಿರೋಧಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ ಕೆಲಸಗಾರರು. ಈ ಮಟ್ಟದಲ್ಲಿ ಬದುಕಿದ ಕೆಲಸಗಾರ ಒಂದು ಬಿಡಿ ಕಾಸನ್ನೂ ಕೂಡಿಡಲಾರ. ಸದಾ ಸುಖ-ಸಂತೋಷಗಳಿಗಾಗಿ ಹಣ ವೆಚ್ಚ ಮಾಡುವ ರೂಢಿ ಕಲಿತು, ಅದೇ ಚಟವಾಗಿ ಬಿಡುತ್ತದೆ. ಆಮೇಲೆ ಆ ಅನುಕೂಲಗಳಿಲ್ಲದ ಬದುಕೇ ದುಸ್ಸಹವಾಗುತ್ತದೆ. ಇಂಥ ಸ್ಥಿತಿಯಲ್ಲಿ ತನ್ನ ಕೆಲಸವನ್ನು ಕಳೆದುಕೊಳ್ಳುವ ಧೈರ್ಯ ಅವನಿಗೆ ಇರುವುದಿಲ್ಲ. ಸ್ವಾತಂತ್ರ್ಯವನ್ನು ನೀಗಿ ಗಿರಣಿಗೆ ಅಂಟಿಕೊಂಡು ಬಿಡುತ್ತಾನೆ. ಆ ಜೀವನದ ಮಟ್ಟ ಅವನ ಪಾಲಿಗೆ ಮೂಗುದಾರವಿದ್ದಂತೆ. ಅತ್ತ ಇತ್ತ ಕೊಸೆದಾಡದಂತೆ ಅದು ಬಿಗಿಹಿಡಿದು ಅವನನ್ನು ಗಿರಣಿಗಾರನಿಗೆ ಗುಲಾಮನನ್ನಾಗಿಸುತ್ತದೆ.

ಪರದೇಶಿ ಸರಕಾರದಲ್ಲಿ ಕೊಡುವ ಅಧಿಕ ವೇತನಗಳೂ ಇವೇ ಜಾತಿಯವು. ಆ ಬಲೆಗೆ ಬಿದ್ದು ಅನೇಕ ದೇಶಭಕ್ತರು ಕರ್ತವ್ಯಭ್ರಷ್ಟರಾಗಿದಾರೆ. ಅವರ ಅಂತರಾತ್ಮ ಸಂಡಿಹೋಗಿದೆ. ತಮ್ಮ ದೇಶೀಯ

ರನ್ನೇ ಅತಿ ನಿಷ್ಠುರವಾಗಿ ಕಠಿಣವಾಗಿ ಕಂಡಿದಾರೆ. ಆ ಆಸಕ್ತಿಯಿರ ದಿದ್ದರೆ ಹೀಗೆಂದೂ ಮಾಡುತ್ತಿರಲಿಲ್ಲ. ಸುಖ ಸೊಬಗಿನ ಬಾಳಿಗೆ ಮನಸೋತು ಹೀಗಾಗಿದೆ.

ಈ ರೀತಿಯ ಕೃತಕ ಜೀವನದ ಅಂತಸ್ತನ್ನು ರೂಢಿಗೊಳಿಸಲು ಬೇರೆ ಕಾರಣಗಳೂ ಇವೆ. ಅವು ಜನತೆಯ ಜೀವನಕ್ಕೆ ಹೆಚ್ಚು ಸಂಬಂಧಿ ಸಿಲ್ಲವಾದ್ದರಿಂದ ಸ್ಥೂಲವಾಗಿ ಸೂಚಿಸುತ್ತೇನೆ. ಆಡಂಬರ, ವೈಭವ, ಅಟ್ಟಹಾಸಗಳಿಗೆ ಈ ಬಗೆಯ ಕೃತ್ರಿಮ ಅಂತಸ್ತು ಅತ್ಯಗತ್ಯ. ಮನೆಯ ಆಳುಗಳಿಗೆ ಸಮವಸ್ತ್ರ (ಯೂನಿಫಾರಂ) ತೊಡಿಸಿದರೆ ಏನೋ ಗಾಂಭೀರ್ಯ ಬಂದ ಹಾಗೆ, ಜನರ ದೃಷ್ಟಿಯನ್ನು ಸೆಳೆದ ಹಾಗೆ ಆಗುತ್ತದೆ. ಸಮವಸ್ತ್ರ ತೊಟ್ಟರೆ ಆಳಿನ ವ್ಯಕ್ತಿತ್ವ ಮುಳುಗಿ ಅವನು ಬರೀ ಆಳಾಗುತ್ತಾನೆ. ಅವನು ರಾಮ-ಭೀಮನಲ್ಲ; ಬಾಯ್, ಪ್ಯೂನ್, ಚಪ್ರಾಸಿ ಮುಂತಾ ದುದು ಆಗುತ್ತಾನೆ. ಆ ಬಡಪಾಯಿಗಳಿಗೆ ಇಂಥ ಬಟ್ಟೆ ಎಲ್ಲಿ ಬರಬೇಕು? ಆದುದರಿಂದ ಆವರು ಅದನ್ನು ಪ್ರೀತಿಸುತ್ತಾರೆ. ನಾಲ್ಕು ಜನರ ಕಣ್ಣು ಕುಕ್ಕುವಂತೆ ವೆಚ್ಚಮಾಡುವ ವೈಭವಪ್ರಿಯತೆ ಇದು. ನಮ್ಮ ಈ ಬಡ ದೇಶದಲ್ಲಿ ಆ ಅಟ್ಟಹಾಸ ಅಕ್ಷಮ್ಯ.

ಹತ್ತೂ ಜನರಂತಲ್ಲದೆ ತಾನೇ ಬೇರೆ ಎನ್ನುವವನು ಈ ಆಡಂಬರದ ಅಂತಸ್ತನ್ನು ಅವಲಂಬಿಸಬೇಕು. ಹೆಚ್ಚು ಬಾಡಿಗೆ ಕೊಟ್ಟು ಭಾರಿ ಮನೆ ಹಿಡಿಯುವುದು, ರೈಲಿನಲ್ಲಿ ಮೊದಲನೆ ತರಗತಿಯಲ್ಲಿ ಪ್ರಯಾಣ ಮಾಡು ವುದು ಇದರ ಲಕ್ಷಣ.

ನಮ್ಮ ದೇಶಕ್ಕೆಲ್ಲ ಒಂದೇ ಸರ್ವಸಾಧಾರಣ ರೂಢಿ ಸಾಧ್ಯವಿಲ್ಲ. ಆಯಾ ಸ್ಥಳದ ವಾಯುಗುಣ, ಆಹಾರಾವಶ್ಯಕತೆ, ವ್ಯಕ್ತಿವಿಕಾಸಾನು ಕೂಲತೆ, ಪ್ರಗತಿ ಸಾಧನ ಇತ್ಯಾದಿಗಳನ್ನು ಅನುಸರಿಸಿ ಅಲ್ಲಲ್ಲಿಗೆ ಒಂದು ರೀತಿಯನ್ನು ಏರ್ಪಡಿಸಬಹುದು. ದಕ್ಷಿಣ ಭಾರತದಲ್ಲಿ ಅಕ್ಕಿಯೇ ಮುಖ್ಯಾಹಾರ. ಆದರೆ ಅಕ್ಕಿ ಗಿರಣಿಯಲ್ಲಿ ತೊಳಸಿದುದಾಗಬಾರದು. ಅದಕ್ಕೆ ಬೇಳೆ-ಕಾಯಿಪಲ್ಯ, ಎಣ್ಣೆ-ತುಪ್ಪ, ಹಾಲು ಮುಂತಾದ ಸಾಧನಗಳಿದ್ದರೆ ಅದು ಪೌಷ್ಟಿಕ. ಇಲ್ಲಿನ ವಾಯುಗುಣಕ್ಕೆ ಹೆಚ್ಚು ಬಟ್ಟೆ ಬೇಕಾಗಿಲ್ಲ. ಕಾಲಿಗೆ ಏನೂ ಬೇಡ. ಹಾಸಿಕೊಳ್ಳಲು ಒಂದು

ಚಾಪೆಯಾದರೂ ಸಾಕು. ಉತ್ತರ ದೇಶದಲ್ಲಿ ಅಕ್ಕಿಗೆ ಬದಲು ಗೋಧಿ ಮುಖ್ಯ ಆಹಾರ. ಉಳಿದ ಪದಾರ್ಥಗಳೆಲ್ಲ ಯಥಾ ಪ್ರಕಾರ. ಅಲ್ಲಿನ ಚಳಿಗೆ ಹಾಸಿಗೆ ಹೊದಿಕೆಯೂ ಹೆಚ್ಚು ಬೇಕು. ಕಾಲಿಗೂ ರಕ್ಷೆ ಬೇಕು. ಮಲಗಲು ಮಂಚವೋ ಹೊರಸೋ ಬೇಕು. ಒಂದು ಕಡೆ ಅತ್ಯಗತ್ಯ ವಾದುದು ಇನ್ನೊಂದು ಕಡೆ ಅನಗತ್ಯವಾಗುತ್ತದೆ. ಆದುದರಿಂದಲೇ ಆಯಾ ಸ್ಥಳದ ಪರಿಸ್ಥಿತಿಗೆ ಅನುಸಾರವಾಗಿ ರೂಢಿ – ಸಂಪ್ರದಾಯಗಳು ಏರ್ಪಡಬೇಕು.

ಶಾಶ್ವತತೆ, ಅಹಿಂಸೆಗಳಿಗೆ ದಾರಿ ಮಾಡಿಕೊಡಬೇಕು ಸಾಮಾನ್ಯ ರೂಢಿ. ಎಂದರೆ ಅದು ಜನರ ಸ್ಥಳೀಯ ಆರ್ಥಿಕ ಜೀವನಕ್ಕೆ ಹೊಂದಿ ಕೊಳ್ಳಬೇಕು. ಪ್ರಕೃತಿಯ ಜೀವನ ಚಕ್ರ ಹೇಗೆ ಒಂದಕ್ಕೊಂದು ಪೋಣಿಸಿಕೊಂಡು ಸಾಗುತ್ತದೆಯೋ, ಆ ಚಕ್ರವನ್ನು ಎಲ್ಲಾದರೂ ಅಡ್ಡಗಟ್ಟಿದರೆ ಹೇಗೆ ಹಿಂಸೆ ತಲೆದೋರುತ್ತದೆಯೋ, ವಿನಾಶದಲ್ಲಿ ಕೊನೆಗಾಣುತ್ತದೆಯೋ ಹಿಂದಿನ ಅಧ್ಯಾಯವೊಂದರಲ್ಲಿ ತಿಳಿಸಿದೇನೆ. ಜನ ಜೀವನದ ಸಾಮಾನ್ಯ ಪದ್ಧತಿ ವ್ಯಕ್ತಿಯ ಗುಣ ವಿಶೇಷಗಳ ವಿಕಾಸಕ್ಕೆ ಅನುಕೂಲ, ವ್ಯಕ್ತಿತ್ವ ಪ್ರಕಟಣೆಗೆ ಒಂದು ರಾಜಮಾರ್ಗ ಆಗಬೇಕು. ಅಲ್ಲದೆ, ಸಮಾಜದ ಬೇರೆ ಬೇರೆ ವ್ಯಕ್ತಿಗಳ ನಡುವಿನ ಬೆಸುಗೆಯಾಗಿ ಶಕ್ತಿವಂತರಾದವರು ಅಶಕ್ತರಿಗೆ ನೆರವಾಗುವ ರೀತಿಯಲ್ಲಿ ಇರಬೇಕು.

ನಮ್ಮ ನಾಯಕರು, ಮಂತ್ರಿಗಳು ಸರಳಜೀವನ ನಡೆಸಿದರೆ ದಪ್ಪ ಚಾಪೆಯ ಮೇಲೆ ಮಲಗಬಹುದು. ಜೊಂಡನ್ನು ಮೂವತ್ತೆರಡಾಗಿ ಸಣ್ಣಗೆ ಸೀಳಿ, ನಡುವೆ ರೇಶಿಮೆ ಹಾಸನ್ನು ಹೊಯ್ದರೆ ಮೆತ್ತನೆ ಚಾಪೆ ಯಾಗುತ್ತದೆ. ಈ ಚಾಪೆಗಳು ದೇಶೀ, ಸ್ಥಳೀಯ ಉತ್ಪಾದನೆ. ಹಾಸಿಗೆ, ಸ್ಪ್ರಿಂಗ್ಗಳಿಗಿಂತ ತಂಪು. ಈ ದೇಶಕ್ಕೆ ಬೇಕಾದ್ದು ಉಷ್ಣವಲ್ಲ, ತಂಪು. ಅಲ್ಲಲ್ಲಿಯ ಚಾಪೆ ಹೆಣೆಯುವವರಿಗೆ ಇದರಿಂದ ಜೀವನ ನಡೆಯಿತು. ಅವರ ರಚನಾ ರಚನಾ ಸಾಮರ್ಥ್ಯ ಕೌಶಲಗಳಿಗೆ ಅವಕಾಶವಾಯಿತು. ಅವರ ವ್ಯಕ್ತಿತ್ವ–ವಿಕಾಸಕ್ಕೆ ದಾರಿಯಾಯಿತು. ಈ ಚಾಪೆಗಳನ್ನು ಮಡಿಸಬಹುದು. ಅಷ್ಟು ನಯ. ತೊಳೆಯಬಹುದು. ಅದರಲ್ಲಿ ಬಹಳ ಅಂದವಾದುದು ಹೆಚ್ಚು ಬೆಲೆಯಾಗುತ್ತದೆ. ಆದರೆ ಆ ಹಣವೆಲ್ಲ

ಅಲ್ಲಲ್ಲಿಯ ಕೆಲಸಗಾರರಿಗೇ ಸಿಗುತ್ತದೆ. ಜೊಂಡು ಅಲ್ಲಿಯದು, ಕೈಗಾರಿಕೆ ಅಲ್ಲೇ, ಹಣದ ವಿನಿಯೋಗವೂ ಅಲ್ಲೇ. ಈ ಆರ್ಥಿಕ ವಿಧಾನಕ್ಕೆ ದಂಡು-ದಳವಾಯಿ ಅಗತ್ಯವಿಲ್ಲ. ಎಲ್ಲಿಂದಲೋ ಕಚ್ಚಾ ಮಾಲನ್ನು ತಂದು ಕೊಳ್ಳುವ ಅಗತ್ಯವಿಲ್ಲ. ಮಾಡಿದ ವಸ್ತುವಿಗೆ ಗಿರಾಕಿಯನ್ನು ಹುಡುಕಿ ಕೊಂಡು ಹೋಗಬೇಕಾಗಿಲ್ಲ. ಅದಕ್ಕಾಗಿ ಸಮುದ್ರದ ಕಾವಲು ಕಾಯ ಬೇಕಾಗಿಲ್ಲ. ಆ ಹಿಂಸಾಕಾಂಡ ಅಗತ್ಯವಿಲ್ಲ. ಆ ನಾಯಕ ಇಂಗ್ಲೆಂಡಿನ ಚಾಪೆಗಳನ್ನೋ ಪರ್ಷಿಯಾದ ಕಂಬಳಿಗಳನ್ನೋ ಕೊಳ್ಳಲು ಮೊದಲಿಟ್ಟರೆ ಆ ಹಿಂಸಾಪರಂಪರೆ ಅನಿವಾರ್ಯವಾಗುತ್ತದೆ.

ಅದೇ ರೀತಿ ಆ ಮಂತ್ರಿ, ನಾಯಕ ಉಡುವ ಖಾದಿ ಪಂಚೆ ಹೇಳಿ ಮಾಡಿಸಿದುದು. ಸ್ಥಳದ ನೂಲುಗಾರ, ನೇಕಾರನಿಗೆ ಅದರಿಂದ ಜೀವನ ವಾಯಿತು. ಹೀಗೆ ನಮಗೆ ಬೇಕಾದ ಎಲ್ಲಾ ವಸ್ತುಗಳೂ ಸ್ಥಳೀಯ ಉತ್ಪಾದನೆಗೆ, ಕೈಗಾರಿಕೆಗೆ ತಳಹದಿಯಾಗಬೇಕು. ಬದುಕು ಒಂದ ಕ್ಕೊಂದು ಹೆಣೆದುಕೊಂಡು ಆರ್ಥಿಕ ದುರ್ಗವನ್ನೇ ಕಟ್ಟಬೇಕು. ಆಗಲೇ ಹಿಂಸೆಯ ವಿಧ್ವಂಸನಕ್ಕೆ ಬಾಗದೆ ಬಾಳು ಚೆನ್ನಾಗಿ ಪುಷ್ಟಿಯಾಗಿ ಬೆಳೆಯುತ್ತದೆ.

ಸುತ್ತ ಮುತ್ತಲಿನ ಜನರ ಜೀವನಕ್ಕೆ ಸ್ವಲ್ಪವೂ ಸಂಬಂಧವಿಲ್ಲದೆ ಬರೀ ದುಡ್ಡಿನ ಅಳತೆಯಿಂದಲೇ ಆಗಾಗ ಜೀವನದ ಮಟ್ಟವನ್ನು ಅಳೆಯುವುದುಂಟು. ಆ ಮಟ್ಟಗಳೆಲ್ಲ ಕೃತಕ, ಅಸ್ಥಿರ. ಜನಜೀವನದಲ್ಲಿ ಅದಕ್ಕೆ ಬೇರಿಲ್ಲ, ಬರೀ ಹಂದರ. ಬ್ರಿಟಿಷ್ ತೋಟಗಾರನ ಜೀವನ ಪದ್ಧತಿ ಆ ಬಗೆಯದು.

ಜೀವನದ ಪೂರ್ಣತೆಗೆ ಏನೇನು ವಿವರಗಳು ಬೇಕೋ ಎಲ್ಲವನ್ನೂ ನಾವು ನಿರ್ಧರಿಸಬೇಕಾಗಿಲ್ಲ. ಅತ್ಯವಶ್ಯಕವಾಗಿ ಮೂಲಭೂತವಾದುದನ್ನು ಗಮನಿಸಿ, ಜನರಿಗೆ ಕಚ್ಚಾಮಾಲು ಸುಲಭವಾಗಿ ಎಟುಕುವಂತೆ ಮಾಡಿ ಉತ್ಪಾದನದ ಕಾರ್ಯಕ್ಕೆ ಅನುಕೂಲ ಮಾಡಿದರೆ, ಉಳಿದುದೆಲ್ಲ ತಾನೇ ಸರಿ ಹೋಗುತ್ತದೆ. ಜನರು ತಮ್ಮ ಬುದ್ಧಿಶಕ್ತಿ, ಕೌಶಲದಿಂದ ಬೆಳೆಯುತ್ತಾರೆ, ಬೆಳೆಸುತ್ತಾರೆ. ಕೆರೆಯ ನೀರಿನ ಮಟ್ಟ ಹೆಚ್ಚಿಸಬೇಕಾಗಿದ್ದರೆ ಹೆಚ್ಚು

ನೀರನ್ನು ಕೆರೆಗೆ ಬಿಟ್ಟರೆ ಸಾಕು. ನೀರು ತುಂಬಿದಂತೆ ಪುಟ್ಟಿ ತಾನೇ ಏರುತ್ತದೆ. ಅದು ಪ್ರಕೃತಿ ನಿಯಮ.

ನಮ್ಮ ದೇಶದ ಜನಕ್ಕೆ ಆರೆಹೊಟ್ಟೆ, ಅರೆಬಟ್ಟೆ. ಆವರೇನು ಆಂದ ಗಾರಿಕೆಯ ಸ್ಪರ್ಧೆಗಾಗಿ ಸೊರಗಿಸುತ್ತಿಲ್ಲ ಪ್ನೆಯನ್ನು! ನಗ್ನ ಸಂಸ್ಕೃತಿ ಯನ್ನು ಆರಾಧಿಸುತ್ತಲೂ ಇಲ್ಲ. ಏನು ತಿನ್ನಬೇಕೋ ಏನು ಉಡ ಬೇಕೋ ಅವರಿಗೆ ಗೊತ್ತಿದೆ ಅವರಿಗೆ ಈ ಪಾಠ, ಪ್ರಚಾರ ಬೇಕಿಲ್ಲ; ಬೇಕಾದುದು ಆ ವಸ್ತುಗಳು-ಅನ್ನ ಬಟ್ಟೆ. ಅದನ್ನು ಹೇರಳವಾಗಿ ಉತ್ಪತ್ತಿ ಮಾಡಲು ತಕ್ಕ ವ್ಯವಸ್ಥೆಮಾಡಬೇಕು.

ಜನರಲ್ಲಿ ಉತ್ಪಾದನೆ ಹೆಚ್ಚಿ ಅವರೇ ಅದನ್ನು ಉಪಯೋಗಿಸು ವಂತಾದರೆ, ಅಣಿಮಾಡಿದ ವಸ್ತುಗಳಿಗೆ ಅಲ್ಲಲ್ಲಿಯೆ ಗಿರಾಕಿ ಸಿದ್ಧವಾಗಿ ದೊರೆತು, ಜನರ ಜೀವನಕ್ರಮ ಜನರ ಪ್ರತಿಭೆ-ಸಂಸ್ಕೃತಿಗಳಿಗೆ ದ್ಯೋತಕ ವಾಗಿ ಸ್ಥಿರವಾಗಿ ನಿಲ್ಲುತ್ತದೆ.

ಆ ಬ್ರಿಟಿಷ್ ತೋಟಗಾರನ ಬದುಕು ಬರೀ ವೈಯಕ್ತಿಕ; ಸುತ್ತಲಿನ ಜನಜೀವನಕ್ಕೆ ಸಂಬಂಧಿಸಿರಲಿಲ್ಲ. ಬರೀ ತನ್ನ ಮನೆಯ ಪೂರ್ತಿ. 'ಇಂಗ್ಲೀಷರವನ ಮನೆ ಒಂದು ಕೋಟೆ'ಯಂತೆ. ನಿಜ. ಒಳಗಡೆ ಎಷ್ಟೇ ಸುಖ-ಸಂಪತ್ತು ಇದ್ದರೂ ಹೊರಗಣ ಪ್ರಪಂಚಕ್ಕೆ ಅದು ಅಭೇದ್ಯ ದುರ್ಗವೇ. ಪಾಶ್ಚಾತ್ಯ ಜೀವನಕ್ರಮವನ್ನು ಅವಲಂಬಿ ಸಿದ ನಮ್ಮ ಜನರೂ ಇಂಥ ಏಕಾಂತ ದುರ್ಗವನ್ನು ಕಟ್ಟಿಕೊಳ್ಳುತ್ತಾರೆ.

ನಮ್ಮ ಲಕ್ಷ್ಯ ಒಂದು ಕುಟುಂಬದ, ಒಂದು ವರ್ಗದ ಸುಖವಲ್ಲ. ಎಲ್ಲರ ಜೀವನ ಸೌಖ್ಯವೂ ನಮ್ಮ ಲಕ್ಷ್ಯ. ಎಲ್ಲರ ಜೀವನವೂ ಅನ್ಯೋ ನ್ಯಾಶ್ರಯ ಬದ್ಧವಾಗಿದೆ. ನಮ್ಮ ಪುರಾತನ ಗ್ರಾಮಜೀವನದಲ್ಲಿ ಈ ಬಗೆಯ ವ್ಯವಸ್ಥೆಯಿತ್ತು. ಪ್ರತಿಯೊಬ್ಬ ಗ್ರಾಮಸ್ಥನಿಗೂ ಇಡೀ ಹಳ್ಳಿಯ ಬೆಳೆಯಲ್ಲಿ ಒಂದು ಪಾಲು ಸಿಗುತ್ತಿತ್ತು. ಅದನ್ನು 'ಆಯ', 'ಬಲೋತಾ' ಎನ್ನುತ್ತಿದ್ದರು. ಹಳ್ಳಿಯ ಜನರೆಲ್ಲರೂ ಸೇರಿ ಒಂದು ಸಮಷ್ಟಿ ಎಂದು ಆ ಕಲ್ಪನೆ. ಆದರೆ ಬರೀ ಹಿಟ್ಟು ಆದರೆ ಸಾಲದು, ಪ್ರತಿಯೊಬ್ಬನಿಗೂ ತನ್ನ ರಚನಾಸಾಮರ್ಥ್ಯ, ಸೃಷ್ಟಿಶಕ್ತಿಗಳನ್ನು ವಿಕಾಸಮಾಡಿಕೊಳ್ಳುವ ಅವಕಾಶ ಬೇಕು.

ನಮ್ಮ ಮಂತ್ರಿ–ನಾಯಕನನ್ನೆ ತೆಗೆದುಕೊಳ್ಳಿ. ಆತನಿಗೆ ಒಂದು ತೊಗಲಿನ ಪೆಟ್ಟಿಗೆ ಬೇಕು. ಆತ ಮೋಚಿಗೆ ಹೇಳುತ್ತಾನೆ. ಅದಕ್ಕೆ ಬೇಕಾದ ಚರ್ಮವನ್ನು ಹದಮಾಡಿ ಕೊಡಲು ಆ ಮೋಚಿ ಚಮ್ಮಾರನನ್ನು ಕೇಳುತ್ತಾನೆ. ಇದರಿಂದ ಹಲವು ಸಮಸ್ಯೆ ಏಳುತ್ತವೆ, ಹಲವು ತೊಡಕು ಉಂಟಾಗುತ್ತವೆ. ಅವನ್ನು ಪರಿಹರಿಸಲು ಮೋಚಿ–ಚಮ್ಮಾರ ಇಬ್ಬರೂ ಯತ್ನಿಸುತ್ತಾರೆ. ಅವರ ಉಪಜ್ಞತೆ, ಉಪಾಯಶಾಲಿತನಗಳಿಗೆ ಪುಟ ಕೊಟ್ಟಂತಾಗುತ್ತದೆ. ಈ ನಾಯಕ ಸ್ಥಳೀಯ ವಸ್ತುವನ್ನು ಬಯಸಿದುದರಿಂದ ಸುತ್ತಲಿನವರ ಸಾಮರ್ಥ್ಯ ಪ್ರಕಟನೆಗೆ ದಾರಿಯಾಯಿತು. ಹಾಗಿಲ್ಲದೆ ಆತ ಒಂದು ವಿದೇಶೀ ಪದಾರ್ಥಗಳ ಅಂಗಡಿಗೆ ಹೋಗಿ ಸಿದ್ಧವಾಗಿದ್ದ ಪೆಟ್ಟಿಗೆಗಳಲ್ಲಿ ಒಂದನ್ನು ತೆಗೆದುಕೊಂಡರೆ, ತನಗೆ ಬೇಕಾದಂಥದುವನ್ನೇ ತೆಗೆದುಕೊಳ್ಳುತ್ತಾನೆ ಎಂಬ ನಿಯಮವಿಲ್ಲ. ಇದ್ದುದರಲ್ಲಿಯೆ ಒಂದನ್ನು ಆರಿಸಬೇಕಲ್ಲ. ಅಲ್ಲದೆ ಹಾಗೆ ಕೊಳ್ಳುವಾಗ ಎಂಥದು ಬೇಕು ಎಂದು ಆತ ಯೋಚಿಸುವ ಸಂಭವವೆ ಕಡಮೆ. ಮಾಡಬೇಕಾದ ಯೋಚನೆಯನ್ನೆಲ್ಲ ಉತ್ಪಾದಕರೇ ಮಾಡಿರುತ್ತಾರೆ. ಅದನ್ನೇ ಸ್ಥಳದಲ್ಲಿ ಹೇಳಿ ಮಾಡಿಸಿದಾಗ ಆ ಪದಾರ್ಥದ ವಿವರಗಳನ್ನೆಲ್ಲ ಯೋಚಿಸುತ್ತಾನೆ. ಇಂಥದು ಬೇಕು ಎಂದು ನಿರ್ಧರಿಸುತ್ತಾನೆ. ಆಮೇಲೆ ಅದನ್ನು ಮಾಡಲು ಹೇಳುತ್ತಾನೆ. ಹೀಗೆ ಉತ್ಪಾದಕನಿಗೂ ಗಿರಾಕಿಗೂ ಅತಿನಿಕಟ ಸಂಬಂಧ ಬೆಳೆಯುತ್ತದೆ. ಅವನು ಹೂಡಿದ ಸಮಸ್ಯೆಗೆ ಇವನು, ಇವನ ಸಮಸ್ಯೆಗೆ ಅವನು ಉತ್ತರ ಕೊಡುತ್ತಾರೆ. ನಾವು ಒಬ್ಬೊಬ್ಬರೇ ಒಂದೊಂದು ಬಿಡಿ ಜೀವವಲ್ಲ. ಒಬ್ಬರಿಗೊಬ್ಬರು ಸಂಬಂಧಿತರು. ಒಬ್ಬೊಬ್ಬರೂ ಒಂದು ಬಿಡಿ ಮುತ್ತಾದರೆ ನಮ್ಮ ಜೀವನ ಕ್ರಮ, ಬಾಳಮಟ್ಟ ಈ ಬಿಡಿಮುತ್ತುಗಳನ್ನು ಪೋಣಿಸುವ ರೇಷ್ಮೆದಾರವಾಗಬೇಕು. ನಾಯಕನ ಬಾಳು ಅಂಥದು. ನೂಲುಗಾರರು, ನೇಕಾರರು, ಚಾಪೆಮಾಡುವವರು, ಚಮ್ಮಾರರು, ಮೋಚಿಗಳು ಇವರೆಲ್ಲರ ಬದುಕಿನೊಡನೆ ಆ ಬಾಳು ಹೆಣೆದುಕೊಂಡಿದೆ. ಆತ ಉಂಡು ಬಿಸುಟ ಬಾಳೆಯೆಲೆಯನ್ನು ತಿನ್ನುವ ಹಸುವಿಗೂ ಹೊಂದಿಕೊಂಡಿದೆ. ತನಗಾಗಿಯೆ ಯಾರೂ ಬದುಕರು. ಆದರೆ ಗಿರಣಿಯ ವಸ್ತುಗಳನ್ನು ಬಳಸಿದಾಗ ಸುತ್ತಲಿನ ಜನಜೀವನಕ್ಕೆ

ಸಂಬಂಧವೇ ಬಾರದು. ಆಗ ನಮ್ಮ ಬಾಳು ಆತ್ಮಶೂನ್ಯ, ನಿರ್ಜೀವ ಯಂತ್ರಗಳಿಗೆ ಗಂಟುಹಾಕಿಕೊಳ್ಳುತ್ತದೆ. ಆ ಯಂತ್ರಗಳಿಂದ ಮನುಷ್ಯನ ರಚನಾ ಸಾಮರ್ಥ್ಯ ಎಳ್ಳಷ್ಟೂ ಬೆಳೆಯದು.

ಆದುದರಿಂದ, ಸಮಾಜದ ನಾನಾ ಭಾಗಗಳಲ್ಲಿ ಸಹಕಾರಪೂರ್ಣ ಸಮರಸತೆ ತಂದು, ಎಲ್ಲಾ ಒಂದೇ ಜೀವ ಎಂಬಂತೆ ನಡೆಯಲು ಅನುಕೂಲವಾಗುವಂತೆ ಮಾಡಬೇಕು ಜೀವನಕ್ರಮ, ಬಾಳಮಟ್ಟ. ಬಿಡಿ ಬಿಡಿ ಏಕಾಕಿಗಳ ಸುಖ-ಭೋಗಕ್ಕಲ್ಲ ಜೀವನಕ್ರಮ ರೂಪಿತವಾಗಬೇಕಾದುದು; ಇಡೀ ಸಮಾಜವನ್ನು ಒಂದಾಗಿ ಕಟ್ಟುವ ಪ್ರೇಮದ ಸಿದ್ಧಿಗಾಗಿ. ಆಗ ಪರಸ್ಪರ ವಿಶ್ವಾಸ, ಒಗ್ಗಟ್ಟು, ಸುಖ ಲಭಿಸೀತು; ಅದರಿಂದ ಸಮಾಜಕ್ಕೆ ಬಲ ಬಂದೀತು.

ಹತ್ತಿಯ ತೊಳೆಯ ಒಂದೊಂದು ನಾರೂ ದುರ್ಬಲವೇ. ಅದು ಒಂದೇ ಆದರೆ ಬರೀ ಕಸ. ಆ ನಾರನ್ನೇ ಸಾವಿರಾರು ಎಳೆಗೂಡಿಸಿ ನೂತರೆ, ಆ ದಾರವನ್ನು ಹೊಸೆದು ಹಗ್ಗಮಾಡಿದರೆ, ಎಂಥ ಭಾರಿ ಹಡಗನ್ನಾದರೂ ಅದು ತಡೆದು ನಿಲ್ಲಿಸುತ್ತದೆ. ತೃಪ್ತಿಕರವಾದ ಜೀವನದ ಮಟ್ಟದಿಂದ ಬರುವ ಫಲ ಇಂಥದಾಗಬೇಕು. ಉತ್ಪಾದಕನನ್ನೂ ಉಪಯೋಗಿಸುವವನನ್ನೂ ಒಟ್ಟಿಗೆ ಗೆಳೆತನದಿಂದ ಹೊಸೆದು, ಸಮಾಜವನ್ನು ಒಗ್ಗಟ್ಟಾದ ಒಂದು ವಿರಾಟ್ ವ್ಯಕ್ತಿಯಾಗಿ ಮಾಡಬೇಕು. ಆಗಲೇ ಆ ಆರ್ಥಿಕ ವಿಧಾನ ಸ್ಥಿರ, ಶಾಶ್ವತ.

## ೧೨. ಕೆಲಸ

'ಕೆಲಸ' ಎಂಬ ಮಾತು ಎಲ್ಲರ ಬಾಯಲ್ಲೂ ಬರುತ್ತದೆ. ಆದರೆ ಬಹಳ ಸ್ವಲ್ಪ ಜನ ಅದಕ್ಕೆ ಸರಿಯಾದ ಅರ್ಥ ತಿಳಿದುಕೊಂಡಿದ್ದಾರೆ. ಕೆಲಸ ಎಂದರೇನು? ಪ್ರಕೃತಿಯ ವ್ಯವಸ್ಥೆಯಲ್ಲಿ ಕೆಲಸಕ್ಕೆ ಏನು ಸ್ಥಾನ?

ಈಗ ಎಲ್ಲಾ ರಾಷ್ಟ್ರಗಳನ್ನೂ ಬಾಧಿಸುತ್ತಿರುವ ಸಮಸ್ಯೆ-ತಮ್ಮ ದೇಶದ ಜನಕೋಟಿಗೆ ಏನು ಕೆಲಸ ಒದಗಿಸಬೇಕು ಎಂಬುದು. ಆದುದರಿಂದ ಕೆಲಸ ಎಂದರೇನೋ ಪೂರ್ಣವಾಗಿ ಅರಿತುಕೊಳ್ಳಬೇಕಾದುದು ಅಗತ್ಯ. ಪ್ರಕೃತಿಯಲ್ಲಿ ಸ್ಥಿರತೆಗೆ. ಶಾಶ್ವತತೆಗೆ, ಪರಂಪರೆಗೆ ಕಾರಣವಾದ

ಅಂಶಗಳನ್ನೆಲ್ಲ ಹೇಗೆ ಪ್ರಕೃತಿಯು ವಿವಿಧ ಅಂಗಾಂಗಗಳು ಒಟ್ಟಿಗೆ ತಂದು ಜೋಡಿಸಿ ಪ್ರಾಣ ಪ್ರವಾಹವನ್ನು ಅಖಂಡವಾಗಿ ಸಾಗಿಸುತ್ತಿವೆಯೆಂಬು ದನ್ನು ಮೊದಲನೆ ಅಧ್ಯಾಯಗಳಲ್ಲಿಯೆ ತಿಳಿದುಕೊಂಡಿದ್ದೇವೆ. ಮಣ್ಣು ಹುಳು ನೆಲವನ್ನು ಹದಮಾಡುತ್ತದೆ, ಹಕ್ಕಿಗಳು ಬೀಜವನ್ನು ಚೆಲ್ಲುತ್ತವೆ. ದುಂಬಿಗಳು ಗಿಡಗಳು ಫಲಿಸುವಂತೆ ಮಾಡುತ್ತವೆ. ಇದು ಕೆಲಸ– ಕಾರ್ಯ. ಪ್ರಕೃತಿಯು ಈ ಜೀವಿಗಳ ಜೀವನಧರ್ಮ ಇದು.

ಮನುಷ್ಯನ ವಿಷಯವಾಗಿಯೂ ಬಾಳು ಎಂದರೇನು, ಬರೀ ಬದುಕು ಅಲ್ಲದೆ ಬಾಳಿನಲ್ಲಿ ಮತ್ತೇನಿದೆ ಎಂಬುದನ್ನು ಚರ್ಚಿಸಿದೇವೆ. ಮಾನವೇತರ ಪ್ರಾಣಿವರ್ಗದಿಂದ ಭಿನ್ನವಾಗಿ, ತನ್ನ ಸಂಕಲ್ಪಬಲದಿಂದ ಪ್ರಕೃತಿಯು ವಿವಿಧ ಅಂಗಗಳನ್ನು ಒಂದೆಡೆ ತಂದು ಸೇರಿಸಿ ಆ ಪ್ರಕೃತಿಯು ಮೂಲೋದ್ದೇಶ್ಯವನ್ನು ಮನುಷ್ಯ ಮತ್ತಷ್ಟು ಸಮರ್ಪಕಗೊಳಿಸಬಲ್ಲ. ಆ ಪ್ರಯತ್ನದಲ್ಲಿ ತನ್ನ ಶಕ್ತಿ ವಿಶೇಷಗಳನ್ನು ಬೆಳೆಸಿಕೊಂಡು, ತನ್ನಿದಿರಿನ ವಾಸ್ತವ ಪ್ರಶ್ನೆಗಳನ್ನು ಬಿಡಿಸುವುದರಲ್ಲಿ ಮೂಲ್ಯ– ನಿರ್ಣಯಮಾಡಿ ತನ್ಮೂಲಕ ತನ್ನ ವ್ಯಕ್ತಿತ್ವವನ್ನು ಬೆಳೆಸಲಿಲ್ಲ. ಇದು ಮನುಷ್ಯನ 'ಕೆಲಸ'– ಇದೇ ಆ ಕೆಲಸದ ಉದ್ದೇಶ್ಯ.

ಕೆಲಸ ಎಂದರೆ ಈಗ ನಾನಾ ಅರ್ಥ, ಅಲಂಕಾರ ತುಂಬಿಕೊಂಡಿವೆ. ಇದನ್ನೆಲ್ಲ ಬದಿಗೆ ಸರಿಸಿ ಮನುಷ್ಯನ ಆದಿಕಾಲದ ಇತಿಹಾಸದಲ್ಲಿ ಕಾಣುವ ಕೆಲಸದ ತೀರಾ ಸರಳ ಲಕ್ಷಣವನ್ನು ಗಮನಿಸಿದರೆ ಆಗ ಸರಿಯಾಗಿ ತಿಳಿಯುತ್ತದೆ. ತಮ್ಮ ಪ್ರಕೃತಿ– ಸ್ವಭಾವಾನುಸಾರ ನಡೆವ ಪ್ರಾಣಿಗಳ ರೀತಿಯನ್ನು ಬಿಟ್ಟು, ಮನುಷ್ಯ ತನ್ನದೇ ಒಂದು ಮಾರ್ಗ ತುಳಿಯಲು ಮೊದಲಿಟ್ಟು ಕಲ್ಲಿನ ಆಯುಧಗಳನ್ನು ಮಾಡಿಕೊಳ್ಳಲು ಪ್ರಾರಂಭಿಸಿದಾಗ, ಶುದ್ಧ ಮೂಲಾರ್ಥದಲ್ಲಿ ಅದು ಕೆಲಸ ಆಯಿತು. ಹಕ್ಕಿ ಗೂಡು ಕಟ್ಟಿಕೊಂಡು ತನ್ನ ಆಹಾರಕ್ಕಾಗಿ ಹಾರಾಡದೆ ? ಅದರಂತೆಯೆ ತನ್ನ ಬುದ್ಧಿ ಸಾಮರ್ಥ್ಯ, ಮುನ್ನ ಯೋಚನೆ, ಸಮಯ ಸ್ಫೂರ್ತಿಗಳ ಬಲದಿಂದ ತನ್ನ ಆವಶ್ಯಕತೆಗಳನ್ನು ಪೂರಯಿಸಿಕೊಳ್ಳುವುದು ಮನುಷ್ಯನ ಕೆಲಸ. ಸೇವೆ ಮಾಡಿ ಸಂತೋಷಪಡಲು ಮನುಷ್ಯ ಕೆಲಸ ಮಾಡತೊಡಗಿದ. ತನ್ನ ಸ್ವಂತ ಆವಶ್ಯಕತೆಗಳನ್ನು ತೃಪ್ತಿಗೊಳಿಸುವುದೇ

ಅವನಿಗೆ ಅದರಿಂದ ದೊರಿತ ಪ್ರತಿಫಲ – ಕೂಲಿ. ಈ ಕ್ಷೇಮಕಾರಿ ಚಟುವಟಿಕೆ ಅವನ ಶಕ್ತಿಗಳನ್ನು ಪ್ರಜ್ವಲಗೊಳಿಸಿತು. ಅವನನ್ನು ವಿಚಾರಶೀಲ ಪ್ರಾಣಿಯಾಗಿ ಬೆಳೆಯುವಂತೆ ಮಾಡಿತು. ತನ್ನ ಸುತ್ತಾಟ ದಲ್ಲಿ ದೊರೆತ, ತಾನು ಬೇಟೆಯಾಡಿ ಕೊಂದ ಪದಾರ್ಥಗಳನ್ನೆಲ್ಲ ತನ್ನ ಗುಹೆಗೆ ತರುತ್ತಿದ್ದ. ಅಲ್ಲಿ ಅವನ ಹೆಂಗಸರು ಅವನ್ನು ಅಟ್ಟು ತಿನ್ನಲು ಅಣಿಮಾಡುತ್ತಿದ್ದರು. ಆಗ ಹೆಂಗಸಿಗೆ ಮನೆಗೆಲಸದ ಅಂಕುರಾರ್ಪಣ ವಾಯಿತು. ಈವೊತ್ತಿಗೂ ನಮ್ಮ ದೇಶದಲ್ಲಿ ಹೆಂಗಸರ ಕೆಲಸ ಅದೇ: ಮನೆಯಲ್ಲಿಯೆ ತಮಗೆ ಬೇಕಾದುದನ್ನೆಲ್ಲ ಅಣಿಮಾಡಿ ತಮ್ಮ ಆವಶ್ಯಕತೆ ಗಳನ್ನು ತೃಪ್ತಿಪಡಿಸಿಕೊಳ್ಳುವುದು.

ಕೆಲಸವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅದರಲ್ಲಿ ಹಲವು ಭಾಗ ಗಳಿರುವುದು ಕಾಣುತ್ತದೆ. ಪ್ರತಿಯೊಂದು ಭಾಗವೂ ಅಂತಿಮಸಿದ್ಧಿಗಾಗಿ ತನ್ನ ತನ್ನ ಪಾಲಿನ ಕೆಲಸವನ್ನು ಮಾಡುತ್ತದೆ. ಮುಖ್ಯವಾಗಿ ದಿನಚರಿ, ವಿರಾಮ, ಪ್ರಗತಿ, ಸಂತೋಷಗಳು ಅದರ ಭಾಗಗಳು. ಈ ಭಾಗಗಳಲ್ಲಿ ಒಂದೊಂದನ್ನೇ ಬೇರೆ ಮಾಡಿ ಅದಕ್ಕೆ ಪ್ರಾಣಪ್ರತಿಷ್ಠೆ ಮಾಡಲು ಸಾಧ್ಯ ವಿಲ್ಲ. ಒಬ್ಬನಿಗೆ ದಿನಚರಿ, ಒಬ್ಬನಿಗೆ ವಿರಾಮ ಹಂಚಿಕೊಡಲಾಗದು. ಮೂರನೆಯವನಿಗೆ ಬರೀ ಸಂತೋಷವನ್ನು ಕೊಡಲು ಆದೀತೆ? ಸಂಗೀತ ದಲ್ಲಿ ಪ್ರತಿಯೊಂದು ಹಂತದಲ್ಲೂ ಆರೋಹಣ, ಅವರೋಹಣಗಳಿವೆ. ಒಂದಿಲ್ಲದೆ ಒಂದಕ್ಕೆ ಅರ್ಥವೇ ಇಲ್ಲ. ಸಂಗೀತಗಾರನಾಗಬೇಕೆನ್ನುವವನು ದಿನವೂ ಸ್ವರಾಭ್ಯಾಸ ಮಾಡಬೇಕು. ಆ ದಿನಚರಿ ನಡೆದರೇನೇ ಕಟ್ಟಕಡೆ ಯಲ್ಲಿ ಅವನು ತನ್ನ ಭಾವವನ್ನು ನಾದದಲ್ಲಿ ಪ್ರಕಟಿಸಿ ಅದರ ಆನಂದ ವನ್ನು ಪಡೆಯಬಲ್ಲ. ಒಬ್ಬನು ಸ್ವರಾಭ್ಯಾಸ ಮಾಡಲಿ, ಇನ್ನೊಬ್ಬ ಹಾಡಿನ ಹಿಗ್ಗನ್ನು ಪಡೆಯಲಿ ಎಂದರೆ ಸಾಧ್ಯವೆ? ರೇಡಿಯೋ ತಿರುಗಿಸಿ ಸಂಗೀತ ಕೇಳಿ ಹಿಗ್ಗಬಹುದು. ಆದರೆ ಅದರಿಂದ ಅವನು ಸಂಗೀತಗಾರ ನಾಗಲಾರ. ಹಾಗೆಯೇ ಮಾಡಲು ಯೋಗ್ಯವಾದುದೆಲ್ಲ ಪದೇ ಪದೇ ಅಭ್ಯಾಸಮಾಡಿ ಸಾಧಿಸುವಂಥದೇ.

ಇನ್ನೊಂದು ಉದಾಹರಣೆ ತೆಗೆದುಕೊಳ್ಳೋಣ: ಸರಿಯಾದ ಆಹಾರದಲ್ಲಿ ಪೌಷ್ಟಿಕ ಪದಾರ್ಥವೂ ಬೇಕು, ಹೊಟ್ಟೆ ತುಂಬಿಸಿ ಜೀರ್ಣಕ್ಕೆ

ಸಹಕಾರ ಮಾಡುವ ಕಾಯಿ-ಪಲ್ಯ, ಸೊಪ್ಪು ಮುಂತಾದುದೂ ಬೇಕು, ರುಚಿಯೂ ಬೇಕು. ಆಹಾರವನ್ನು ಅಗಿಯದೆ ಬರೀ ರುಚಿಯೇ ಬೇಕೆನ್ನುವವನಿಗೆ ಎಷ್ಟೇ ಪೌಷ್ಟಿಕ ಪದಾರ್ಥ ಕೊಟ್ಟರೂ ಉಪಯೋಗವಿಲ್ಲ. ಕಾಯಿಪಲ್ಯ ಸೊಪ್ಪು ಇತ್ಯಾದಿ ಅನ್ನಪಚನೆಗೆ ಅತ್ಯಂತ ಅಗತ್ಯ. ಆಹಾರದ ಸತ್ವವನ್ನು ಹೀರಲು ಅವು ಬೇಕು. ಹೀಗೆಯೇ ಕೆಲಸದ ಎಲ್ಲಾ ಅಂಗಗಳೂ ಆ ಕೆಲಸದ ಪೂರ್ಣ ಫಲ ದೊರೆಯಲು ಅತ್ಯಗತ್ಯ. ಪ್ರತಿಯೊಂದೂ ತನ್ನ ತನ್ನ ಕರ್ತವ್ಯವನ್ನು ಮಾಡಬೇಕು.

ಅನಾದಿಕಾಲದಿಂದಲೂ ಕೆಲಸವನ್ನು ವಿಭಾಗಮಾಡಲು ಮನುಷ್ಯ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿದಾನೆ. ಭಾರವಾದ, ಪದೇ ಪದೇ ಮಾಡಬೇಕಾದ ಗೋಜಿನ ಕೆಲಸವನ್ನೆಲ್ಲ ಕೈಲಾಗದ ದುರ್ಬಲರ ತಲೆಯ ಮೇಲೆ ಹೇರಿ, ಬಲಿಷ್ಠರಾದವರು ಕೆಲಸದ ಸುಖ-ಸಂತೋಷವನ್ನು ಮಾತ್ರ ಹಂಚಿಕೊಂಡಿದಾರೆ. ಕಷ್ಟದ ಕೆಲಸ ಗುಲಾಮರಿಗೆ, ಕೆಲಸದ ಫಲ-ಸುಖ ಧಣಿಗೆ. ಗ್ರೀಸ್, ರೋಂಗಳ ನಾಗರಿಕತೆ ದುಡಿತವನ್ನು ತಪ್ಪಿಸಿ ವೈಕದ್ದು ಸುಖ-ಫಲವನ್ನು ಮಾತ್ರ ಬಾಚಿಕೊಳ್ಳುವ ಬುದ್ಧಿಯಿಂದ ಹುಟ್ಟಿತು. ಆದುದರಿಂದಲೇ ಅವು ಹೇಳಲು ಹೆಸರಿಲ್ಲದಂತೆ ಬರೀ ಮಣ್ಣಾಗಿ ಹೋದವು. ಅವುಗಳ ವಿನಾಶದಿಂದ ಮನುಷ್ಯನಿಗೆ ಒಂದು ಪಾಠ. ಆದರೆ ಆ ಪಾಠವನ್ನು ಗಮನಿಸದೆ ಆಧುನಿಕ ಸಾಮ್ರಾಜ್ಯಗಳೂ ಅದೇ ದಾರಿ ಹಿಡಿದಿವೆ. ಕಚ್ಚಾ ಪದಾರ್ಥವನ್ನು ಸರಬರಾಜು ಮಾಡುವ ದುಡಿತಗಾರ ದೇಶಗಳಿಗೆ ದಟ್ಟದಾರಿದ್ರ್ಯ, ಗಿರಣಿಗಳಲ್ಲಿ ವಸ್ತೂತ್ಪಾದನೆ ಮಾಡುವ ಕಾರಖಾನೆ ದೇಶಗಳಿಗೆ ಸಕಲ ಸುಖ-ಸಂಪತ್ತು. ಈ ವಿಧಾನ, ಈ ಆರ್ಥಿಕಕ್ರಮ ಪ್ರಕೃತಿವಿರುದ್ಧ. ಆದುದರಿಂದ ನಶಿಸಲೇಬೇಕು. ಪ್ರಕೃತಿಗೆ ವಿರುದ್ಧ ನಿಂತಾಗ ಉದ್ಭವಿಸಿದ ಪ್ರಳಯಸಮ ಹಿಂಸೆಯನ್ನು ನಾವು ನಮ್ಮ ಕಾಲದಲ್ಲಿ ಕಣ್ಣಾರೆ ಕಂಡಿದೇವೆ. ಹಲವು ವರ್ಷಗಳಿಗೊಮ್ಮೆ ನಡೆವ ಈ ಜಗತ್ ಯುದ್ಧಗಳು ಸಾಮ್ರಾಜ್ಯಶಾಹಿ ರಾಷ್ಟ್ರಗಳು ತಮ್ಮ ಇಷ್ಟವನ್ನು ಇತರ ರಾಷ್ಟ್ರಗಳ ಮೇಲೆ ಹೊರಿಸಲು ಮಾಡಿಕೊಂಡ ಒಂದು ಸಾಧನ. ಒಂದೆರಡು ಬಾರಿ ಅದು ಸಫಲವಾದಂತೆ ಕಂಡೀತು. ಆದರೆ ಅದರ ಗರ್ಭ

ವಲ್ಲಿಯೆ ಕ್ಷಯ-ವಿನಾಶದ ಬೀಜ ಅಡಗಿದೆ. ಹಿಂಸೆಯ ಮೂಲಕ ಯಾವುದನ್ನು ಕಟ್ಟಿದರೂ ಅದಕ್ಕೆ ಅಳಿವು ಖಂಡಿತ.

ಕೆಲಸ ಕಡಮೆಮಾಡುವ ಯಂತ್ರಗಳನ್ನು ಬಳಕೆಗೆ ತಂದು, ಜಾಣತನದಿಂದ ಪ್ರಚಾರಮಾಡಿ ಹಳ್ಳಿಯ ಕೆಲಸಗಾರರನ್ನೆಲ್ಲ ಊರು ಬಿಟ್ಟೋಡಿಸಿ ಅವರನ್ನೆಲ್ಲ ಗಿರಣಿ ಕೆಲಸಗಾರರಾಗಿ ಮಾಡಿದರು. ಅಲ್ಲಿ ಇವರ ಯಂತ್ರಗಳನ್ನು ನಡೆಸಬೇಕಲ್ಲ! ಇದರಿಂದ ಇಂಗ್ಲೆಂಡಿನ ಹಳ್ಳಿಗಳಲ್ಲಿ ಹೊಲ ಪಾಳುಬಿದ್ದವು. ಬರೀ ಕಬ್ಬಿಣ, ಕಲ್ಲಿದ್ದಲು, ತಗಡು ತಿಂದು ಬದುಕೀತೆ ದೇಶ? ಅನ್ನ ಬೇಕೇ ಬೇಕು. ತಮ್ಮ ದೇಶದಲ್ಲಿ ಸಿಗದ ಅನ್ನ ಬೇರೆ ದೇಶಗಳಿಂದ ಬರಬೇಕು. ಇಲ್ಲದಿದ್ದರೆ ಸಾವೇ. ಆದುದರಿಂದ ಇಂಗ್ಲೆಂಡು ಇತರ ದೇಶಗಳನ್ನು ರಾಜಕೀಯ ದಾಸ್ಯದಲ್ಲಿ ಬಲವಾಗಿ ಹಿಡಿದಿಡಬೇಕಾಯಿತು. ಇತರ ದೇಶಗಳು ಸುಲಭವಾಗಿ ಗುಲಾಮಗಿರಿಗೆ ಒಪ್ಪುತ್ತವೆಯೆ? ಬಲಾತ್ಕಾರದಿಂದ ಒಪ್ಪಿಸಬೇಕು. ಹೀಗೆ ಇಂಗ್ಲೆಂಡಿನ ಬಾಳಿಗೆ ಹಿಂಸೆ ಆಧಾರವಾಯಿತು. ಈ ವ್ಯವಸ್ಥೆಯನ್ನು ಕಾಪಾಡಿಕೊಳ್ಳಲೆಂದು ಪ್ರತಿ ಎರಡನೆಯ ಪೀಳಿಗೆಯೂ ಯುದ್ಧರಂಗದಲ್ಲಿ ತನ್ನ ತರುಣರನ್ನು ಬಲಿಕೊಡಬೇಕು. ಹೀಗೆ ಕಾಲ ಕಾಲಕ್ಕೆ ಮಕ್ಕಳನ್ನು ಬಲಿಕೊಡುವ ಈ ವ್ಯವಸ್ಥೆ ಬರೀ ಮೂರ್ಖತನ ಎಂದು ಮನುಷ್ಯಮಾತ್ರದವನು ಯಾರಾದರೂ ಹೇಳುತ್ತಾನೆ. ಈ ಸುಲಭವಾದ ವಿಚಾರವನ್ನು ಮರೆಮಾಚಿ ಮಂಕುಬೂದಿ ಎರಚಲು ಎಲ್ಲಾ ಬಗೆಯ ಉಪಾಯವೂ ನಡೆಯುತ್ತವೆ. ಅಟ್ಟಹಾಸದ ಜೀವನ ಮಟ್ಟ ಬೇಕೆನ್ನುತ್ತಾರೆ, ಸುಳ್ಳು ಬೆಲೆ ಕಟ್ಟುವುದನ್ನು ಕಲಿಸುವ ಶಿಕ್ಷಣ ಕೊಡುತ್ತಾರೆ, ಹಿಂಸೆಯನ್ನು ಹೊಗಳಿ ಆಟ್ಟದಮೇಲೆ ಕೂಡಿಸುತ್ತಾರೆ. ಹೀಗೆ ಮಾಡಿ ಈ ವ್ಯವಸ್ಥೆಯ ರಕ್ಷಣೆಗೆ ಜನರ ಅನುಮತಿ ಪಡೆಯುತ್ತಾರೆ. ತಾಯಿ ಮಗನನ್ನು ಹೆಮ್ಮೆಯಿಂದ ಬಲಿಕೊಡುತ್ತಾಳೆ. ಯುದ್ಧಕ್ಕೆ ಹೋಗಲು ಗಂಡಂದಿರನ್ನು ಹೆಂಡಿರೇ ಹುರಿದುಂಬಿಸುತ್ತಾರೆ. ಈ ಪ್ರಚಾರದ ವಿನಾಶಕರ ಪರಿಣಾಮಕ್ಕೆ ಬೇರೇನು ಸಾಕ್ಷಿ ಬೇಕು? ಯಾವುದೋ ದೇಶದ ತಬ್ಬಲಿಗಳನ್ನು ಕೊಲ್ಲಲು ತನ್ನ ಮಗ ತರಪೇತಾಗುತ್ತಿದ್ದಾನೆ ಎಂಬ ಹೆಮ್ಮೆ ಯಾವ ತಾಯಿಗೆ ಸಹಜ? ಅಂತರರಾಷ್ಟ್ರೀಯ ಲೂಟಿ

ಸುಲಿಗೆಗೆ ತನ್ನ ಗಂಡ ಬಲಿಯಾಗಲೆಂದು ಯಾವ ಹೆಂಡತಿ ಸಹಜವಾಗಿ ಬಯಸಿಯಾಳು? ಇವೆಲ್ಲವೂ ನಡೆಯುತ್ತಿವೆ. ಸುಳ್ಳಿನ ಕಂತೆಯನ್ನು ಹರಡಿ, ಅಸತ್ಯ ಮೂಲ್ಯಗಳನ್ನು ಕಲಿಸಿ, ಜನರ ಮನಸ್ಸು ಹಿಂಸೆ-ವಿನಾಶ ಗಳ ಕಡೆ ವಾಲುವಂತೆ ಮಾಡುತ್ತಾರೆ.

ಈ ಅಸಹಜ ತಿರುಗುಮುರುಗನ್ನು ಸಾಧಿಸಲು ಹಿಂಸೆಗೆ ಆರತಿ ಬೆಳಗಿದಾರೆ. ಒಬ್ಬನನ್ನು ಕೊಂದರೆ ಅದು ಕೊಲೆ. ಅದಕ್ಕೆ ಮರಣ ದಂಡನೆ. ಏನೂ ಅರಿಯದ ತಬ್ಬಲಿಗಳನ್ನು ಹಿಂಡು ಹಿಂಡಾಗಿ ಕೊಂದರೆ ಅದಕ್ಕೆ ರಾಷ್ಟ್ರಚಕ್ರ, ವೀರಚಕ್ರದಂಥ ಗೌರವ-ಮರ್ಯಾದೆ! ಊರು ತುಂಬಾ ಅದಕ್ಕೆ ಸ್ಮಾರಕಗಳು. ಹೀಗೆ ಏನಾದರೂ ಕುತಂತ್ರಮಾಡಿ ಬದುಕಿಕೊಳ್ಳಬೇಕಾದ ವ್ಯವಸ್ಥೆಯಲ್ಲಿ ಏನೋ ದೋಷವಿಲ್ಲವೆ? ಈ ತಿರುಗುಮುರುಗು ರಚನೆಯಿಂದ ಜನತೆಯ ಉತ್ತಮ ಗುಣಗಳೆಲ್ಲ ಮಸಕಾಗಿ ಹೋಗಿವೆ. ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಅಟ್ಟಹಾಸದ ಜೀವನಕ್ರಮದಲ್ಲಿ ಇದನ್ನೆಲ್ಲ ಶಾಂತವಾಗಿ ಚಿಂತನಮಾಡುವಷ್ಟು ಬಿಡುವೇ ಇಲ್ಲ. ಜನಕ್ಕೆ ಏನೋ ಬಾಳೆಲ್ಲ ತುಂಬಿಕೊಂಡ ಹಾಗೆ, ತೃಪ್ತರಾದ ಹಾಗೆ ಎನಿಸುತ್ತದೆ. ಅದರಿಂದ ಅಧಿಕಾರದಲ್ಲಿರುವವರು ತಮ್ಮ ಮನಸ್ಸಿಗೆ ಬಂದಂತೆ ಮಾಡಲು ಅನುಕೂಲವಾಗುತ್ತದೆ.

ಇದಕ್ಕೆಲ್ಲ ಬಳಸುವ ಉಪಾಯವೂ ಬಹಳ ಸುಲಭ, ಸರಳ. ಮನುಷ್ಯ ಆತ್ಮತೃಪ್ತಿಗಾಗಿ ಕೆಲಸಮಾಡುವುದು ಪ್ರಕೃತಿನಿಯಮ. ಆದುದ ರಿಂದ ಅವನ ಪ್ರಯತ್ನಗಳಿಗೆ ಬೀಜ ಅವನ ಬಯಕೆ, ಇಷ್ಟಾರ್ಥ. ಅವನ ಬಯಕೆಗಳು ಹೆಚ್ಚಿದರೆ, ಅದರ ಸಿದ್ಧಿಗಾಗಿ ಅವನ ಪ್ರಯತ್ನವೂ ಅಷ್ಟು ಹೆಚ್ಚಬೇಕು. ಜನರ ಜೀವನದ ಮಟ್ಟವನ್ನು ಹೆಚ್ಚಿಸಬೇಕು, ಅಟ್ಟ ಹಾಸದ ಜೀವನವನ್ನು ಬಳಕೆಗೆ ತರಬೇಕು ಎಂಬುದರ ಗುಟ್ಟು ಇದೇ. ಹೀಗೆ ಮಾಡಿ ಅವನಿಗೆ ಮೂಗುದಾರ ಹಾಕಿದರೆ ತಾನೆ ಅವನ ಸ್ವೇಚ್ಛೆ, ಸ್ವಾತಂತ್ರ್ಯ, ಚಲನ-ವಲನ ಮೊಟಕಾಗಿ ಯಾರು ಮೂಗುದಾರ ಹಿಡಿದು ನಡೆಸುತ್ತಾರೋ ಅವರು ತೋರಿದ ದಾರಿಯಲ್ಲಿ ಹೋಗುವಂತೆ ಆಗು ವುದು. ಹೀಗೆ ಲಗಾಮು ಹಾಕಿಕೊಂಡವನಿಗೆ ವಿಚಾರ-ಆಲೋಚನೆ

ಏನು ಬಂತು? ಕಣ್ಣುಮುಚ್ಚಿ, ಬಾಯಿಮುಚ್ಚಿ ಹೇಳಿದತ್ತ ಹೊರಳು ವುದೇ!

ಈಗ ಜಗತ್ತು ಭಾರಿ ಉತ್ಪಾದಕನ ಕೈಲಿದೆ. ಜನಗಳ ಬಾಯಿ ಮುಚ್ಚಿಸಿ ಎರಡೂ ಕೈಯಲ್ಲಿ ಬಾಚಿ ದೋಚಿಕೊಳ್ಳುವಂಥ ವ್ಯವಸ್ಥೆ ಕಟ್ಟಿದಾನೆ ಅವನು. ಶಾಂತಿಯ ಕಾಲದಲ್ಲಿ ಬೈಸಿಕಲ್ ಮಾಡಿ ಮಾರುತ್ತಾನೆ. ಯುದ್ಧಕಾಲದಲ್ಲಿ ಬಾಂಬು ಬಂದೂಕು ಮಾಡಿ ಮಾರುತ್ತಾನೆ. ಅವನ ಸ್ವಾರ್ಥಪೂರ್ಣ ಉಪಾಯಗಳನ್ನು ಅರಿಯಲಾರದೆ, ಈ ಆರ್ಥಿಕ ವ್ಯವಸ್ಥೆಯನ್ನು ಕಾಪಾಡಲು ಜನ ತಮ್ಮ ಮಕ್ಕಳನ್ನು ಬಲಿಕೊಡುತ್ತಾರೆ. ಇದೆಲ್ಲವೂ ಏತಕ್ಕಾಗಿ? ಕೆಲಸಕ್ಕೆ ಅಗತ್ಯವಾದ ಶರೀರಶ್ರಮವನ್ನು ತಪ್ಪಿಸಿಕೊಂಡು, ಇತರರ ಶ್ರಮದ ಫಲವಾದ ಸುಖ-ಸಂತೋಷವನ್ನು ಅನುಭವಿಸಲಿಕ್ಕೆ!

ಸರಿಯಾದ ಪೌಷ್ಟಿಕಾಹಾರ ಮೈಗೆ ಶಕ್ತಿ ಸಾಮರ್ಥ್ಯ, ಆರೋಗ್ಯಗಳನ್ನು ಕೊಡುವಂತೆ ಸರಿಯಾದ ಕೆಲಸವೂ ಕೊಡುತ್ತದೆ. ಮೈಗೆ ವ್ಯಾಯಾಮ, ಮನಸ್ಸಿಗೆ ವಿಕಾಸ, ಆತ್ಮತೃಪ್ತಿಗಳನ್ನು ಕೊಡುತ್ತದೆ. ಶಿಸ್ತು ಕಷ್ಟಗಳನ್ನು ತಪ್ಪಿಸಿ, ಅದನ್ನೆಲ್ಲ ತಬ್ಬಲಿಗಳಾದ ನಿರ್ಭಾಗ್ಯರ ವರ್ಗಕ್ಕೆ ಹೊರಿಸಿ, ಕೆಲಸದ ಸುಖ-ಸಂತೋಷಗಳನ್ನೆಲ್ಲ ಮುಂಬರಿದವರಿಗೇ ಮೀಸಲಾಗಿಟ್ಟುಕೊಳ್ಳುವುದು ಈಗಿನ ಮನೋವೃತ್ತಿ. ಆದುದರಿಂದ ಕೆಲಸದ ಬೇರೆ ಬೇರೆ ಅಂಗಗಳನ್ನು ವಿಂಗಡಿಸಿ ಬೇರೆ ಮಾಡಿ ಆಟ-ಪಂದ್ಯಗಳನ್ನೇ ರ್ಪಡಿಸಿ ಅದರಲ್ಲಿ ಆನಂದವನ್ನುಂಟುಮಾಡುವ ಉಪಾಯಗಳನ್ನು ಮಾಡಿದಾರೆ. ಕೆಲಸದಲ್ಲಿ ಹೀಗೆ ದುಡಿತ ಬೇರೆ, ಆಟ ಬೇರೆ ಆಗಿ ದುಡಿತವೆಲ್ಲ ಕೆಲವರಿಗೆ, ಆಟ-ವಿನೋದವೆಲ್ಲ ಕೆಲವರಿಗೆ, ಆಗಿದೆ. ಹೀಗೆ ವಿಭಾಗವಾದಾಗ ದುಡಿತದ ಕೆಲಸ ಬೇಸರವಾಗುತ್ತದೆ. ಆಟದ ಕೆಲಸ ವ್ಯಸನವಾಗುತ್ತದೆ. ಎರಡೂ ಹಿತವಲ್ಲ. ದುಡಿತಗಾರ ಉಪವಾಸದಿಂದ ಸಾಯುತ್ತಾನೆ. ಯುಗಯುಗದಲ್ಲೂ ಈ ಪ್ರಯೋಗ ನಡೆದಿವೆ. ಮಾನವನನ್ನು ಪರಿಪಕ್ವತೆಗೆ ಒಯ್ಯಲು ಈ ಏರ್ಪಾಟು ಅಸಮರ್ಥ ಎಂಬುದು ಸಿದ್ಧವಾಗಿದೆ. ನಮ್ಮ ಕಾಲದಲ್ಲಿಯೆ ಶ್ರಮವಿಲ್ಲದೆಯೆ ಸುಖಪಡಬೇಕೆಂಬ

ಪ್ರಯತ್ನದ ಫಲವಾಗಿ ಮಾನವ ಜಾತಿ ಯುದ್ಧ, ರೋಗರುಜಿನ, ಬರ, ಸಾವುಗಳಿಗೆ ತುತ್ತಾಗುತ್ತಿರುವುದನ್ನು ನೋಡುತ್ತಿದೇವೆ.

ಇದು ಇನ್ನು ಸಾಕು ಎಂದು ನಾವು ಕೂಗಬೇಡವೆ? ಇನ್ನಾದರೂ ನಾವು ಎಚ್ಚರಬೇಡವೆ?

---

## ೧೨. ಶ್ರಮ ವಿಭಾಗ

ಶ್ರಮವಿಭಾಗದಿಂದ ದಕ್ಷತೆ, ಕೌಶಲಗಳು ಲಭಿಸುತ್ತವೆ. ಇದನ್ನು ಯಾರೂ ಇಲ್ಲವೆನ್ನರು. ಈ ಬಗೆಯ ವಿಶಿಷ್ಟ ಕೌಶಲ ಸಂಪಾದನೆ ಆದಿಯಿಂದಲೂ ರೂಢಿಯಲ್ಲಿದೆ ನಮ್ಮ ದೇಶದಲ್ಲಿ. ಕಡೆಕಡೆಗೆ ಆ ಪದ್ಧತಿ ವಂಶಪಾರಂಪರ್ಯವಾಗಿ ಜಾತಿಗಳಿಗೆ ಜನ್ಮ ಕೊಟ್ಟಿತು. ಈ ಬಗೆಯ ನಾನಾ ತೊಡಕುಗಳುಂಟಾಗಿ, ನಮಗೆ ಮುಂದೆ ದಾರಿಯೇ ಕಾಣದಾಗಿದೆ.

ಶ್ರಮವಿಭಾಗ ಮಾಡುವ ನೆಪದಲ್ಲಿ ಪಾಶ್ಚಾತ್ಯ ಗಿರಣಿಗಾರರು ಉದ್ಯೋಗವಾದಿಗಳು ಕೆಲಸವನ್ನು ತೀರಾ ಸೂಕ್ಷ್ಮ ಕ್ರಿಯೆಗಳಾಗಿ ವಿಭಾಗಿಸಿದಾರೆ. ಅದರಿಂದ ಕೆಲಸವೆಂದರೂ ಕತ್ತೆಚಾಕರಿ ಎಂದರೂ ಒಂದೇ ಆಗಿದೆ. ಕೆಲಸವೆಂದರೆ ಒಂದು ಶಾಪ ಆಗಿಬಿಟ್ಟಿದೆ.

ಕೆಲಸ ಮಾಡಿದರೆ ಬರುವ ಉಳಿದ ಫಲ ಏನೇ ಇರಲಿ, ಕೆಲಸಗಾರನಿಗೆ ಆ ಕೆಲಸ ಹಿತಕರವಾಗಿರಬೇಕು. ಕೆಲಸದಲ್ಲಿ ಉಲ್ಲಾಸ ಹುಟ್ಟುವಂತಿರಬೇಕು. ಅದರ ಪ್ರತಿಯೊಂದು ಅಂಶದಲ್ಲೂ ಸಾಕಷ್ಟು ವೈಶಿಷ್ಟ್ಯವಿರಬೇಕು. ಇಲ್ಲದಿದ್ದರೆ ಕೆಲಸ ಜಡವಾಗುತ್ತದೆ, ಮೈಗೆ ಆಯಾಸವಾಗುತ್ತದೆ. ಆದುದರಿಂದ ಶ್ರಮವಿಭಾಗದ ಪ್ರಯೋಜನಕ್ಕೂ ಕೆಲವು ಮಿತಿಗಳಿವೆ. ಅದನ್ನು ದಾಟಿದರೆ ಶ್ರಮವಿಭಾಗ ಅನರ್ಥಕಾರಿಯಾಗುತ್ತದೆ.

ಒಂದು ಕೆಲಸವನ್ನು ವಿಭಾಗಿಸಿದಾಗ ಒಂದೊಂದು ಅಂಶವೂ ಸಾಧ್ಯವಿದ್ದಮಟ್ಟಿಗೆ ಇಡೀ ಕೈಗಾರಿಕೆಯನ್ನೆ ಮಾಡಿದಂತಿರಬೇಕು. ಗಾಣದೆತ್ತಿನಂತೆ ಬರೀ ಚಕ್ರ ಸುತ್ತುವ ಕೆಲಸವಾಗಬಾರದು. ಬಡಗಿ ಕೆಲಸವನ್ನು ಹಂಚುವುದಾದರೆ, ಗಾಲಿ ಮಾಡುವುದೊಂದು, ಗಾಣ ಮಾಡುವುದೊಂದು

ವಿಭಾಗ ಮಾಡಬಹುದು. ಎರಡೂ ಬಹಳ ಕುಶಲವಾದ ವೃತ್ತಿಗಳೇ. ಕೆಲಸಗಾರರ ಸಮಸ್ತ ಕೌಶಲಕ್ಕೂ ಇಲ್ಲಿ ಅವಕಾಶವಿದೆ. ಅದರಲ್ಲಿ ಉತ್ಪತ್ತಿಯಾದ ವಸ್ತುಗಳೂ ಪೂರ್ಣವಸ್ತುಗಳು. ಮಾರಾಟಕ್ಕೆ ಸಿದ್ಧ. ಇದನ್ನು ಬಿಟ್ಟು ಈ ಕೈಗಾರಿಕೆಯನ್ನು ಇನ್ನೂ ವಿಭಾಗ ಮಾಡಿ, ಗುಂಬ ಮಾಡುವವನು ಬೇರೆ, ಅರೆಕಾಲು ಮಾಡುವವನು ಬೇರೆ, ಮರ ಕಡಿಯುವವನು ಬೇರೆ, ಹೀಗೆ ಹಂಚಿದರೆ ಆ ಕೆಲಸ ಕೈಗಾರಿಕೆಯಾಗದೆ ಬರೀ ಜಡಕರ್ಮವಾಗುತ್ತದೆ. ಚರ್ಮದ ಕೆಲಸದಲ್ಲಿ ಪಾದರಕ್ಷೆಗಳನ್ನು ಮಾಡುವುದು ಒಂದು ಸಂತೋಷಕರ ವಿಭಾಗವಾಗಬಹುದು. ಕೆರದ ಹಿಮ್ಮಡಿಯ ಬಿಲ್ಲೆಗಳನ್ನೋ ಬರೀ ಉಂಗುಟದ ಪಟ್ಟಿಗಳನ್ನೋ ಕತ್ತರಿಸಿ ಕೊಡುವ ಕೆಲಸವಾದರೆ ಬೇಸರವಾಗುತ್ತದೆ. ಅದೇ ಒಂದು ವಿಭಾಗವಾಗಲಾರದು. ಈಗಿನ ಕಾಲದ ಗಿರಣಿಗಳಲ್ಲಿ ಶ್ರಮವಿಭಾಗ ಎಷ್ಟು ದೂರ ಹೋಗಿದೆಯೆಂದರೆ, ಒಬ್ಬ ಮನುಷ್ಯ ದಿನವೆಲ್ಲಾ ಮೊಳೆ ಹೊಡೆಯಬೇಕು, ಇಲ್ಲವೆ ತಿರುಪು ತಿರುವಬೇಕು. ದಿನವೂ ಎಂಟೆಂಟು ಗಂಟೆ ಇಂಥ ಕೆಲಸ ಮಾಡುತ್ತ ವರ್ಷದಲ್ಲಿ ೩೦೦ ದಿನ ಕಳೆಯಬೇಕಾದರೆ ಕೆಲಸಗಾರನ ನರಗಳೆಲ್ಲ ಸೆಟೆದುಕೊಂಡು ಕಟ್ಟಕಡೆಗೆ ಅವನು ಹುಚ್ಚರ ಆಸ್ಪತ್ರೆ ಸೇರಬೇಕಾದೀತು. ಗಿರಣಿಗಾರಿಕೆಯಲ್ಲಿ ಬಹಳ ಮುಂಬರಿದ ಅಮೆರಿಕಾ ದೇಶದಲ್ಲಿ ಜನಕ್ಕೆ ಉಳಿದೆಲ್ಲ ಬೇನೆಗಳಿಗಿಂತ ನರಗಳ ಬಾಧೆಯೇ ಹೆಚ್ಚು. ಮನುಷ್ಯನ ರಚನೆ ಯಂತ್ರದ ರಚನೆಯ ಹಾಗಲ್ಲ. ಅವನ ಕೆಲಸದಲ್ಲಿ ಸಮತೂಕ, ಸಾಮರಸ್ಯ ಬೇಕು; ದೇಹದ ಎಲ್ಲ ಶಕ್ತಿಗಳೂ ಉಪಯೋಗವಾಗಬೇಕು. ಕೆಲಸ ಸಾಕಷ್ಟು ಪೂರ್ಣವಾದುದು ಆದರೇನೇ ಇದು ಸಾಧ್ಯ.

ಕೇವಲ ಒಂದು ಅಲ್ಪ ಕ್ರಿಯೆ ಎನಿಸುವಷ್ಟು ತೀರಾ ಚಿಕ್ಕ ಅಂಶವಾದರೆ ಮನುಷ್ಯಶಕ್ತಿ ವ್ಯರ್ಥವಾಗಿ, ಕೆಲಸಗಾರರು ಬಹುಬೇಗ ನಿರುದ್ಯೋಗಿಗಳಾಗಲು ದಾರಿಯಾಗುತ್ತದೆ. ಕಷ್ಟಪಟ್ಟು ದುಡಿಯುವ ಕೆಲಸಗಾರ ೪೫ ವರ್ಷವಾಗುವುದರೊಳಗಾಗಿಯೆ ನಿಶ್ಯಕ್ತನಾಗುತ್ತಾನೆ. ಈ ಮನುಷ್ಯಬಲ ವಿನಾಶವೆಲ್ಲ ಸಮಾಜದ್ದು ; ಯಾರು ಸತ್ತರೂ ಯಾರು ಸುಣ್ಣವಾದರೂ, ಗಿರಣಿಗಾರನ ಕೆಲಸವೇನು ನಿಲ್ಲದು. ಅವನ ಉದ್ಯೋಗ

ಪದ್ಧತಿಯಿಂದ ಎಷ್ಟು ಹಾನಿ ಎಂಬುದೂ ತಾನು ಎಂಥ ಲೋಕಕಂಟಕ ನಾದಾನು ಎಂಬುದೂ, ಕೂಲಿಮಾಡಿಸಿಕೊಳ್ಳುವ ಈ ಬಂಡವಾಳಗಾರನಿಗೆ ಅರ್ಥವಾಗದು. ಒಬ್ಬ ಕೆಲಸಗಾರ ಹಾಸಿಗೆ ಹಿಡಿದರೆ ಅವನನ್ನು ತೆಗೆದು ಹಾಕಿ ಇನ್ನೊಬ್ಬನನ್ನು ನೇಮಿಸಿಕೊಳ್ಳುತ್ತಾನೆ. ಪ್ರೀತಿ-ವಿಶ್ವಾಸ ಎಳ್ಳಷ್ಟೂ ಇಲ್ಲ. ಸಿಗರೇಟು ಸೇದಿದ ಮೇಲೆ ಉಳಿದ ತುಂಡನ್ನು ಬಿಸುಡು ವಂತೆ, ಅಷ್ಟೇ ನಿರ್ಯೋಚನೆಯಿಂದ, ತನ್ನ ಕೆಲಸದಲ್ಲಿಯೆ ಆಯುಸ್ಸನ್ನೆಲ್ಲ ಕಳೆದು ಎದೆಯೊಡೆದುಕೊಂಡ ಕೆಲಸಗಾರನನ್ನೂ ಗಿರಣಿಗಾರ ಕಿತ್ತು ಬಿಸುಡುತ್ತಾನೆ. ಮುಪ್ಪಡರಿ ಮೈ ಸವೆದವರನ್ನು ಹೀಗೆ ಕಿತ್ತು ಹಾಕಿದರೆ ಅವನಿಗೆ ಲಾಭವೇ : ಅವರ ಸ್ಥಾನಕ್ಕೆ ಬಂದ ಹೊಸ ಹುಡುಗರು ಹೆಚ್ಚು ಕೆಲಸ ಮಾಡಬಲ್ಲರು. ಹೀಗೆ ಕೆಲಸಗಾರರ ಜೀವನವನ್ನು ಹಿಂಡಿ ತೆಗೆದುದಕ್ಕೆ ಗಿರಣಿಗಾರ ಏನೂ ಪರಿಹಾರ ಕಟ್ಟಿಕೊಡಬೇಕಾಗಿಲ್ಲ. ಅವನಿಗೆ ಜವಾಬದಾರಿಯೂ ಇಲ್ಲ. ಮಾನವ ಜೀವನ, ಸಾಮರ್ಥ್ಯಗಳ ಅಪವ್ಯಯವಲ್ಲವೆ-ಇದು ? ಇಂಥ ಅಪವ್ಯಯ ಸ್ಥಿರತೆಗೆ-ಶಾಶ್ವತತೆಗೆ ದಾರಿ ಮಾಡೀತೆ? ಒಂದೆರಡು ಕಾಸು ಹೆಚ್ಚು ಕೂಲಿಯನ್ನು ಇವರಿಗೆ ಈಗ ಕೊಟ್ಟರೆ ಅದರ ಅರ್ಥ, ಆ ಕೆಲಸಗಾರರ ಮುಂದಿನ ಬದುಕನ್ನು, ೪೫ ವರ್ಷವಾದ ಮೇಲಿನ ಅವರ ಬದುಕನ್ನು, ಈಗಲೇ ಕೊಂಡು ಬಳಸಿದಂತೆ.

ಹೆಚ್ಚು ಕೂಲಿ-ಸಂಬಳ ಎಂಬುದನ್ನು ದೊಡ್ಡದು ಮಾಡಿ ತೋರಿಸಿ ದರೆ, ರಾಶಿ ರಾಶಿ ಪದಾರ್ಥ ಎಂದು ಬೆರಳುಮಾಡಿದರೆ, ಬಾಳಮಟ್ಟ ಎಂಬ ಆಡಂಬರವನ್ನು ಎತ್ತಿತೋರಿಸಿದರೆ, ಮನುಷ್ಯನ ಉತ್ತಮ ಗುಣಗಳ ವಿಕಾಸಕ್ಕೆ ಅವಕಾಶಕೊಡದೆ ಇವೆಲ್ಲವನ್ನೂ ಮಾಡಿದರೂ, ಮನುಷ್ಯನ ಇಚ್ಛಾಶಕ್ತಿಯನ್ನು ನಷ್ಟಗೊಳಿಸಿ, ಮೂಲ್ಯಗಳನ್ನು ಅಳತೆಗಳನ್ನು ತಲೆ ಕೆಳಗುಮಾಡಿದಂತೆ.

ಇಂಥ ಸನ್ನಿವೇಶದಲ್ಲಿ ಕೆಲಸ ಮಾಡುವವನು ಗಾಣದೆತ್ತಿನ ಹಾಗೆ. ಗಾಣದೆತ್ತಿಗೆ ಕಣ್ಣುಕಟ್ಟಿ ಹೊಡೆಯುತ್ತಾರೆ. ಅದಕ್ಕೆ ತಾನು ಎಲ್ಲಿಗೆ ಹೋಗುತ್ತೇನೆಂಬುದು ತಿಳಿಯದು. ಮೂಗುದಾರ ಎಳೆದ ಕಡೆ ಅದು ಹೋಗಬೇಕು. ಅದನ್ನು ಕೂಡ ಮನುಷ್ಯ ಹಿಡಿದು ನಡೆಸ. ಗಾಣಕ್ಕೇ ಆ ದಾರವನ್ನು ಕಟ್ಟುತ್ತಾರೆ. ಆ ಪಶು ಯಾವಜ್ಜೀವವೂ ಸುಮ್ಮನೆ ಒಂದೇ

ದಿಕ್ಕಿಗೆ ಕಣ್ಣುಮುಚ್ಚಿ ತುಳಿದು ಸುತ್ತಬೇಕು. ಇಷ್ಟೆಲ್ಲ ನಡೆದರೂ ಅದು ಒಂದು ಹೆಜ್ಜೆಯೂ ಮುಂಬರಿಯದು. ಆ ಎತ್ತು ಆಣೆಮಾಡಿದುದರಲ್ಲೇ ಗಾಣಿಗ ಅದಕ್ಕೊಂದಿಷ್ಟು ಹಿಂಡಿ ಹಾಕುತ್ತಾನೆ, ಉದಾರವಾಗಿ. ನಮ್ಮ ಗಿರಣಿ ಕೂಲಿಗಳ ಪಾಡೂ ಇಷ್ಟೇ. ಜೀವನದ ಆನಂದ, ಸ್ವಾತಂತ್ರ್ಯದ ಸವಿ ಅವರಿಗಿಲ್ಲ. ವಿಕಾಸ, ವೃದ್ಧಿಗಳ ಅವಕಾಶ ಒಂದೂ ಅವರಿಗಿಲ್ಲ. ಪ್ರಕೃತಿ ಏರ್ಪಡಿಸಿದ 'ಕೆಲಸ' ಇದಲ್ಲ. ಇದರಿಂದ ಕೆಲಸಗಾರರಿಗೆ ಸರ್ವನಾಶ, ಆತ್ಮಹಾನಿಯೆ ವಿನಾ ಬೇರಿಲ್ಲ. ಎಷ್ಟೇ ಹಣಕೊಟ್ಟರೂ ಆ ಹಾನಿಯನ್ನು ತುಂಬಲಾರದು.

ಗಿರಣಿಗಾರರು ತಮ್ಮ ಪಾಲಿನ ದುಡಿತವನ್ನು ತಪ್ಪಿಸಿ ಪರರ ತಲೆಯ ಮೇಲೆ ಹೊರಿಸಿ, ಕೆಲಸದ ಸುಖ-ವಿನೋದಗಳನ್ನು ಮಾತ್ರ ಹಂಚಿಕೊಂಡರೆ, ನಮ್ಮ ಸಮಾಜವಾದಿ ಗೆಳೆಯರು ಕೆಲಸದಿಂದ ವಿಶ್ರಾಂತಿಯನ್ನೇ ಕಿತ್ತುಹಾಕೋಣ ಎನ್ನುತ್ತಾರೆ. ನಿಜವಾಗಿ ಅರಿತರೆ ಎಲ್ಲಾ ಕೆಲಸದಲ್ಲೂ ಬಿಡುವು, ದಣಿವಾರಿಕೆ ಅದರೊಳಗೆಯೆ ಅಡಕವಾಗಿರಬೇಕು. ಸಂಗೀತದಲ್ಲಿ ವಿರಾಮ ಹೇಗೋ ಕೆಲಸದಲ್ಲಿ ಬಿಡುವು, ವಿಶ್ರಾಂತಿ ಹಾಗೆ; ಕೆಲಸದ ಅಂಗ. ಅವೆರಡನ್ನೂ ವಿಂಗಡಿಸಲಾಗದು. ಬಿಡುವು ಎಂದರೆ ಎಲ್ಲಾ ಕೆಲಸವನ್ನೂ ಬಿಟ್ಟ ನಿಷ್ಕ್ರಿಯೆಯಲ್ಲ. ಅದು ಸಾವು. ಬಿಡುವು ಎಂದರೆ ಸೋಮಾರಿತನವಲ್ಲ, ಕಾಲಹರಣವೂ ಅಲ್ಲ. ಸೋಮಾರಿತನ ಮನುಷ್ಯನನ್ನು ಕ್ಷಯಿಸುತ್ತದೆ. ಒಂದು ಚಟುವಟಿಕೆಗೆ, ಒಂದು ಕೌಶಲಕ್ಕೆ ಬಿಡುವಾಗಿ ಇನ್ನೊಂದು ಚಟುವಟಿಕೆ, ಕೌಶಲ ಮೊದಲಾದಾಗಲೇ ನಿಜವಾದ ಬಿಡುವು. ಮೇಜಿನ ಮುಂದೆ ಕೂತು ಬರೆವ ಬುದ್ಧಿಜೀವಿಗೆ ತೋಟಗಾರಿಕೆಯಂಥ ಒಂದು ಅಭಿರುಚಿಯಿರಬೇಕು. ಈ ಲೇಖನಿಯ ವೃತ್ತಿಯಿಂದ ಆದ ಭಾರವನ್ನು ಅದು ಹಗುರಮಾಡೀತು. ಪ್ರತಿಯೊಂದು ಕೆಲಸಕ್ಕೂ ಪ್ರಕೃತಿ ಒಂದು ಉದ್ದೇಶ್ಯ-ಒಂದು ವ್ಯಾಪ್ತಿಯನ್ನು ಏರ್ಪಡಿಸಿದೆ. ಅದರಲ್ಲಿ ಹೀಗೆ ಈ ಎರಡೂ ಪೂರಕ ವೃತ್ತಿಗಳಿರಬೇಕು. ಅಲ್ಲದೆ ಕೆಲಸದ ಉದ್ದೇಶ್ಯವನ್ನು ಮನುಷ್ಯ ಮುರಿಯಬಾರದು.

ಒಮ್ಮೆ ಒಬ್ಬ ಅನುಭವಶಾಲಿ ಇಂಜನಿಯರೊಡನೆ ಕೆಲಸದ ಈ ಅಂಶವನ್ನು ಚರ್ಚಿಸುತ್ತಿದ್ದೆ. ಕೆಲಸ, ಬಿಡುವು ಅಥವಾ ವಿಶ್ರಾಂತಿ

ಎರಡೂ ಒಟ್ಟಿಗೆ ಒಂದೇ ಸಲ ಹೇಗೆ ಎಂಬುದು ಆತನಿಗೆ ಸಮಸ್ಯೆಯಾಯಿತು. ಇದನ್ನು ತರ್ಕಮಾಡಿ ಹೇಳುವುದಕ್ಕಿಂತ ಕಣ್ಣಾರೆ ತೋರಿಸುವುದು ಸುಲಭವೆಂದು ಒಬ್ಬ ಕೆಲಸಗಾರನ ಬಳಿ ಹೋಗಿ ನೋಡಿ ಎಂದೆ. ಇಬ್ಬರೂ ಒಬ್ಬ ಶಾಲಾ ಶಿಕ್ಷಕನ ಬಳಿಗೆ ಹೋದೆವು. ಆ ಶಿಕ್ಷಕ ಟೋಪಿ ಹೊಲೆದು ತನ್ನ ಬದುಕು ಸಾಗಿಸುತ್ತಿದ್ದ. ಇದರಲ್ಲಿ ಕೆಲಸ ಯಾವುದು, ವಿಶ್ರಾಂತಿ ಯಾವುದು ತೋರಿಸಿ ಎಂದ ಇಂಜನೀಯರು.

ಶಿಕ್ಷಕನನ್ನು ಕೇಳಿದೆವು–ನಿಮ್ಮ ಕೆಲಸವನ್ನು ಹೇಗೆ ನಡಸುತ್ತೀರಿ? ಆತ ಒಂದು ಬುಟ್ಟಿಯನ್ನು ತಂದ. ತುಪ್ಪಟದಂತೆ ಕಾಣುವ ರೇಷಿಮೆ ಬಟ್ಟೆಯನ್ನು ಅದರಿಂದ ತೆಗೆದು, ಅಂಡಾಕಾರವಾಗಿ ಅದರಲ್ಲಿ ಒಂದು ತುಂಡನ್ನು ಕತ್ತರಿಸಿಕೊಂಡ. ಆಮೇಲೆ ಕೆಂಪು ಒಳಪಟ್ಟೆ ಬಟ್ಟೆಯನ್ನು ತೆಗೆದು ಅದರಲ್ಲೂ ಹಾಗೇ ಒಂದು ತುಂಡನ್ನು ಕತ್ತರಿಸಿದ. ಅದಕ್ಕೆ ಹಳೇ ಪತ್ರಿಕೆಯ ಚೂರುಗಳನ್ನು ಜೋಡಿಸಿ, ಸುತ್ತಲೂ ಕೆಲವು ಹೂಗಳನ್ನು ಹೊಲೆದ. ಇದೆಲ್ಲವನ್ನೂ ರೇಷ್ಮೆ ತುಂಡಿಗೆ ಜೋಡಿಸಿ ಹೊಲೆದ. ಆಮೇಲೆ ಮೇಲ್ಭಾಗದಲ್ಲಿ ಒಂದೆರಡು ತೂತು ಮಾಡಿ ಅವಕ್ಕೆ ಕೆಲವು ಕಣ್ಣಿರುವ ಗುಂಡಿಗಳನ್ನು ಜೋಡಿಸಿದ. ಟೋಪಿಯ ಮೇಲ್ಗಡೆ ಗಾಳಿಯಾಡಲು ಬರುವಂತಾಯಿತು. ಹೀಗೆ ಆತ ತನ್ನ ಕೆಲಸದಲ್ಲಿ ಮಗ್ನನಾಗಿದ್ದಾಗ ಈ ಚಿಕ್ಕ ಕಸಬಿನಲ್ಲಿ ಅಂತರ ರಾಷ್ಟ್ರೀಯ ವ್ಯಾಪಾರ ಸಮಸ್ಯೆ ಹೇಗೆ ಬಗೆಹರಿಯುತ್ತದೆಂಬುದನ್ನು ಇಂಜನೀಯರಿಗೆ ತಿಳಿಸಿದೆ. ಆ ರೇಷ್ಮೆ ತುಪ್ಪಟ ಇಟಲಿಯದು, ಕೆಂಪು ಒಳಪಟ್ಟೆ ಬಟ್ಟೆ ಜಾಪಾನಿನದು. ಆ ಶಿಕ್ಷಕ ಬಟ್ಟೆ ಕತ್ತರಿಸುತ್ತಿದ್ದಾಗ ಒಂದು ಬಗೆಯ ಕರ್ಮ ನಡೆಯಿತು. ಹೂಗಳನ್ನು ಹೊಲೆಯುವಾಗ ಕಲೆಗಾರಿಕೆ ಪ್ರಕಟವಾಯಿತು. ಟೋಪಿಯ ಮೇಲ್ಗಡೆ ಕಣ್ಣು ಜೋಡಿಸುವಾಗ ದೇಹದ ಮತ್ತೊಂದು ಭಾಗ ಕೆಲಸ ಮಾಡಿತು. ಆಗ ಕಲೆಗಾರಿಕೆಗೆ ಬಿಡುವು.

ಹೀಗೆ ನಾವು ಮಾತನಾಡುತ್ತಿದ್ದಾಗ ಆತನ ಚಿಕ್ಕ ಮಗು ಮನೆಯ ಹಿತ್ತಿಲಲ್ಲಿ ಅಳತೊಡಗಿತು. ಒಡನೆಯೇ ಆ ಶಿಕ್ಷಕ ಎದ್ದುಹೋಗಿ ಮಗುವನ್ನು ಸಂತಯಿಸಿ, ಮನೆಗೆ ಹೊರಗಿನವರು ಬಂದಿದ್ದಾಗ ಮಗುವನ್ನು ಅಳಲಿಕ್ಕೆ ಬಿಡಬಹುದೆ ಎಂದು ಹೆಂಡತಿಯನ್ನು ಗದರಿಸಿದ. ಈ ಗಂಡ–

ಹೆಂಡಿರ ಜಗಳ ನಡೆಯುತ್ತಿದ್ದಾಗ ನಾನು 'ನೋಡಿದಿರಾ, ಇದು ಆತನಿಗೆ ಬಿಡುವು, ವಿಶ್ರಾಂತಿ, ವಿನೋದ' ಎಂದೆ.

ಇಂಜಿನೀಯರು ಗಟ್ಟಿಯಾಗಿ ನಕ್ಕು 'ಈಗ ನಿಮ್ಮ ಅಭಿಪ್ರಾಯ ಅರ್ಥವಾಯಿತು' ಎಂದರು.

ಪ್ರಕೃತಿಸಹಜವಾಗಿ ಜೀವನವನ್ನು ನಡೆಸಿದರೆ ಅದರಲ್ಲಿಯೆ ಬಾಳಿಗೆ ಬೇಕಾದ ರಸ-ಭಾವವೆಲ್ಲ ಒದಗುತ್ತದೆ ಅದಕ್ಕಾಗಿ ಕೃತ್ರಿಮ ಸನ್ನಿವೇಶ, ಪ್ರಯತ್ನ ಒಂದೂ ಬೇಕಾಗಿಲ್ಲ. ಪ್ರಕೃತಿ ಸ್ವಯಂ ಸಮರ್ಥವಾದುದು.

ಇದು ಕೆಲಸ. ಬಾಳಿನಲ್ಲಿ ಇದು ಅದರ ಕೆಲಸ. ಮನುಷ್ಯ ತನ್ನ ಸರ್ವ ಶಕ್ತಿಗಳನ್ನೂ ಬೆಳೆಸಿ ತನ್ನ ಜೀವಮಾನದಲ್ಲಿ ತನ್ನ ವ್ಯಕ್ತಿತ್ವವನ್ನು ನಿರ್ಮಿಸಿಕೊಂಡು, ತನ್ನ ಕೃತಿಗಳಲ್ಲಿ ತನ್ನ ವ್ಯಕ್ತಿತ್ವವನ್ನು ಸ್ಥಿರವಾಗಿ ಮೂಡಿಸಲು ಇದರಿಂದ ಅವಕಾಶವಾಗುತ್ತದೆ. ಕೃತಿಯೇ ಮನುಷ್ಯನ ಉತ್ತಮಾಂಶ.

ಒಂದು ಬಟ್ಟೆಯ ಚೂರಿನ ಮೇಲೆ ತನ್ನ ಕಲಾಕುಶಲತೆಯಿಂದ, ಒಬ್ಬ ಕಲೆಗಾರ ಹೇಗೆ ತನ್ನ ಸೌಂದರ್ಯಾನುಭವವನ್ನು ಮೂಡಿಸಿ, ಮುಂದಿನ ಪೀಳಿಗೆಗಳ ಜನ ಮೆಚ್ಚಿ, ತಲೆದೂಗಿ ಆನಂದಿಸುವಂಥ ಒಂದು ಸುಂದರ ಚಿತ್ರವನ್ನು ನಿರ್ಮಿಸುತ್ತಾನೋ ನೋಡಿದೇವೆ. ಆ ಬಟ್ಟೆಯ ಪಟಕ್ಕೆ ಒಂದೊಂದು ಗೆರೆ ಬಣ್ಣವನ್ನು ಹಾಕುತ್ತಿದ್ದಾಗ ನೋಡಿದವರಿಗೆ ಇದು ಏನು ಪ್ರಯಾಸ, ಏನು ಬೇಸರ ಎನಿಸಿರಬೇಕು. ಆ ನಿರಂತರ ಪರಿಶ್ರಮ, ಆ ಬೇಸರದ ದುಡಿತವೇ ಆ ಮಹಾ ಕಲಾಕೃತಿಗೆ ಆಧಾರ. ಒಂದು ಕಲ್ಲಚ್ಚಿನ ಯಂತ್ರದಲ್ಲಿ ಇಂಥ ಕಷ್ಟ-ದುಡಿತ ಯಾವುದೂ ಇಲ್ಲ. ಅದರಲ್ಲಿ ಅಚ್ಚಾಗಿ ಬಂದ ಚಿತ್ರಗಳಿಗೂ ಬೆಲೆಯಿಲ್ಲ. ಕೆಲಸಕ್ಕೆ ಬಾರದ ಕಾಗದದ ತುಂಡಿನ ಬೆಲೆ.

ಚಿತ್ರ ಬರೆಯುವ ಮೊದಲೇ ಆ ಬಣ್ಣಗಳನ್ನು ಬಹಳ ಜಾಗರೂಕತೆ ಯಿಂದ ಕಲೆಸಲು ಎಷ್ಟೋ ಕಾಲ ಬೇಕು. ಅಜಂತಾ ಗುಹೆಗಳಲ್ಲಿ ತೊಡೆದಿರುವ ಬಣ್ಣಗಳು ಅಷ್ಟು ಪಕ್ವವಾಗಿ ಮೂಡಿಬರಲು ಎಷ್ಟು ವರ್ಷ ಕಾಲ ಅವನ್ನು ಕಲೆಸಿ-ಅಳಿಸಿ ಮಾಡಿದ್ದರೋ ಏನೋ! ಇಲ್ಲದಿದ್ದರೆ ನೂರಾರು ವರ್ಷ ಅವು ಬಾಳುತ್ತಿದ್ದವೆ? ಆ ಕಾಲದ ಕಲಾವಿದರು ಆ

ಬಣ್ಣ ಅರೆಯಲು ಇಷ್ಟು ಕಾಲ ಬೇಕಲ್ಲ ಎಂದು ಗೊಣಗಲಿಲ್ಲ. ಅವರ ಅಸದೃಶ ಕಲಾದಾನವನ್ನಿಂದು ಪೀಳಿಗೆ ಪೀಳಿಗೆಯೂ ಕೊಂಡಾಡುತ್ತಿದೆ. ಆ ಕಷ್ಟ, ದುಡಿತವನ್ನು ತಪ್ಪಿಸಿ ಈ ಫಲ ಪಡೆಯುವ ಉಪಾಯ ಒಂದನ್ನೂ ಆ ಚಿತ್ರಗಾರರು ಮಾಡಲಿಲ್ಲ. ಪ್ರಕೃತಿ ಬಹಳ ನಿಷ್ಠುರ ಯಜಮಾನಿ. ಗೊಣಗುತ್ತ ಅರೆಮನಸ್ಸಿನಿಂದ ಮಾಡಿದ ಕೆಲಸಕ್ಕೆ ಪ್ರಕೃತಿ ಎಂದೂ ಸ್ಥಿರತೆಯನ್ನು ನೀಡಳು. ಮಾಡಿದ ಕೆಲಸ ಸ್ಥಿರವಾಗಿರಬೇಕೆಂದರೆ **ಪೂರ್ಣಕೆಲಸ**ವನ್ನು ಮಾಡಬೇಕು ; ಅರೆಬರೆ ಮಾಡಲಾಗದು. ಆ ಗಳಿಗೆಗೆ ಸಾಕು ಎಂದು ಮಾಡಿದ ಕೆಲಸ ಪ್ರಯೋಜನವಿಲ್ಲ. ಪ್ರಕೃತಿಗೆ ಮೋಸಮಾಡಲು, ಅದನ್ನು ಅಂಜಿಸಲು ಸಾಧ್ಯವಿಲ್ಲ.

ಅದೇ ರೀತಿ, ಬರಲಿರುವ ಭವಿಷ್ಯದ ಪೀಳಿಗೆಗಳಿಗೂ ಸೊತ್ತಾಗಿ ನಮ್ಮ ಹಿರಿಯರು ಬಿಟ್ಟು ಹೋಗಿರುವ ಇನ್ನೊಂದು ಮಹಾಕೃತಿ ಎಲ್ಲೋರಾದ ಗುಹಾಂತರ್ದೇವಾಲಯಗಳು. ಗುಡ್ಡಗಳನ್ನೇ ಕೊರೆದು ಅಲ್ಲಿ ಗುಡಿ ಕಟ್ಟಿದಾರೆ. ಏನು ಶ್ರಮ, ಏನು ಸಾಹಸ! ಆ ಕಲೆಗಾರಿಕೆ, ಆ ಲಯ–ಸಾಮರಸ್ಯ ಕೆಲಸ ತಪ್ಪಿಸುವ, ಕಡಿಮೆ ಮಾಡಿಕೊಳ್ಳುವ ಮೈಗಳ್ಳತನದಿಂದ ಬಂದುದಲ್ಲ. ಪೂರ್ಣ ಮನಸ್ಸಿನಿಂದ ಪೂರಾ ದುಡಿದು ನಿರ್ಮಿಸಿದ ಕೃತಿ ಅದು. ಯೋಗ್ಯ ರೀತಿಯಲ್ಲಿ ಮಾಡಿದ ಪರಿಶ್ರಮ ದುಡಿದವರಿಗೂ ಆನಂದ ಕೊಡುತ್ತದೆ, ಅವರ ಕೃತಿಗಳಿಗೂ ಅಂದ ಕೊಡುತ್ತದೆ.

ಶ್ರದ್ಧೆಯಿಂದ ಮಾಡಿದ ಇನ್ನೊಂದು ಕುಶಲ ಕರ್ಮ ದಿಲ್ಲಿಯ ಕುತುಬ್ ಮಿನಾರಿನ ಬಳಿ ಇರುವ ಕಬ್ಬಿಣದ ಕಂಬ. ಅದರ ಮೇಲೊಂದು ಶಾಸನವಿದೆ. ಆ ಬಯಲಿನಲ್ಲಿ ಮಳೆ ಗಾಳಿ, ಬಿಸಿಲು ಛಳಿ ಎಲ್ಲವನ್ನೂ ಇದಿರಿಸಿ ಅಚ್ಚಳಿಯದೆ ಶತಮಾನಗಳಿಂದ ಅಲ್ಲಿ ನಿಂತಿದೆ ಆ ಸ್ತಂಭ. ಇನ್ನೂ ಒಂದು ಚುಕ್ಕೆಯಷ್ಟಾದರೂ ತುಕ್ಕು ಹಿಡಿದಿಲ್ಲ ಅದಕ್ಕೆ. ಈ ಉಕ್ಕನ್ನು ಹಿಂದಿನವರು ಹೇಗೆ ಸಿದ್ಧಗೊಳಿಸಿದರೋ ಆಧುನಿಕ ಲೋಹ ಶಾಸ್ತ್ರಜ್ಞರಿಗೆ ದಿಗ್ಭ್ರಮೆ ಹಿಡಿಸಿದೆ. ಹಿಂದಿನ ಕಾಲದಲ್ಲಿ ಈ ಅದ್ಭುತ ಸ್ತಂಭವನ್ನು ನಿರ್ಮಿಸಿದ ಕಮ್ಮಾರರು ತಮ್ಮ ಕೆಲಸದಲ್ಲಿ ಭಾರ ತಗ್ಗಿಸುವ,

ಬೇಗ ಮುಗಿಸುವ ಉಪಾಯಗಳನ್ನು ಹೂಡಲಿಲ್ಲ. ಅಂಥ ಲೋಹವನ್ನು ಸಿದ್ಧಪಡಿಸಲು ಅಗತ್ಯವಾದ ಸಮಸ್ತ ಶ್ರಮವನ್ನೂ ಅವರು ಸಂತೋಷ ವಾಗಿ ಕೈಗೊಂಡರು. ಪ್ರಕೃತಿಯು ಏರ್ಪಾಡಿನಂತೆ ಕೆಲಸ ಮಾಡಿದರು. ಕೃತಕ ವ್ಯವಸ್ಥೆ ಮಾಡಲಿಲ್ಲ. ಅದರಿಂದ ಈ ಅದ್ಭುತ ಕೃತಿ ಅವರ ನೆನಪು ಕೊಡುತ್ತ ಇಂದಿಗೂ ಉಳಿದಿವೆ.

ಬಂಗಾರದ ಗಣಿ ಕೈಗಾರಿಕೆಯಲ್ಲಿ ಬಹಳ ಸುಖ - ಐಶ್ವರ್ಯ ಇದೆ ಯೆಂದು ಎಲ್ಲರೂ ತಿಳಿಯುತ್ತಾರೆ. ಆದರೆ ದುಡಿತವೆಲ್ಲ ಒಂದು ವರ್ಗಕ್ಕೆ, ಸುಖವೆಲ್ಲ ಇನ್ನೊಂದು ವರ್ಗಕ್ಕೆ. ಅದರಿಂದ ಹಿರಣ್ಯಗರ್ಭೆಯಾದ ಬಂಗಾರದ ಜಿಲ್ಲೆ ಎಲ್ಲಕ್ಕಿಂತಲೂ ಬಡಸೀಮೆಯಾಗಿದೆ. ಅಲ್ಲಿಯ ರೈತ ಬಹಳ ಬಡವನಾಗಿದಾನೆ. ಹಾಲು ಕರೆಯದೆ ಒದೆದುಕೊಂಡ ಹಸುವನ್ನು ನೇಗಿಲಿಗೆ ಕಟ್ಟುವಷ್ಟು ಕಷ್ಟದಲ್ಲಿದಾನೆ.

ಒಂದು ಸಲ ಇಂಥದೊಂದು ಬಂಗಾರದ ಗಣಿಯೊಳಕ್ಕೆ - ೭೦೦೦ ಅಡಿ ಆಳದ್ದು - ಇಳಿದಿದ್ದೆ. ಅಲ್ಲಿ ಕಾಳ್ಗತ್ತಲೆಯಲ್ಲಿ ಚಿಕ್ಕ ಲಾಂದ್ರಗಳ ಬೆಳಕಿನಲ್ಲಿ ಸುರಂಗಗಳೊಳಗೆ ಜನರು ಕೆಲಸಮಾಡುತ್ತಿದ್ದರು. ಕಲ್ಲನ್ನು ಸುರಂಗವಿಟ್ಟು ಸಿಡಿಸುತ್ತಿದ್ದರು. ಧೂಳು ಕೊಳೆ ತುಂಬಿತ್ತು. ಬೆಳಗಿ ನಿಂದ ರಾತ್ರಿಯವರೆಗೆ ಅರೆಹೊಟ್ಟೆ ಕೂಲಿಯಲ್ಲಿ ದುಡಿಯಬೇಕು. ದುಡಿದುಡಿದು ಆ ಭೂಗರ್ಭದಿಂದ ಮೇಲಕ್ಕೆ ಬಂದಾಗ ಆ ಜನ ಜೀವಚ್ಛವ ಗಳಾಗಿರುತ್ತಿದ್ದರು. ರಾಜ್ಯಕ್ಕೆ ಎಲ್ಲಾ ಜಿಲ್ಲೆಗಳಿಗಿಂತ ಹೆಂಡದ ವರಮಾನ ಹೆಚ್ಚುಕೊಡುವುದು ಈ ಜಿಲ್ಲೆ ! ಇಷ್ಟು ಆಯಾಸವಾದ ಮೇಲೆ ಹೆಂಡದ ಅಮಲನ್ನು ಕೆಲಸಗಾರರು ಶರಣು ಹೋದರೆ ಏನಚ್ಚರಿ ? ಗಣಿ ಕೆಲಸ ಗಾರರಲ್ಲಿ ಮೇಹದ ಕಾಯಿಲೆಗಳೂ ಹೆಚ್ಚು. ನರಗಳನ್ನು ಇಷ್ಟು ಸೆಟೆಸಿದರೆ ಹೆಂಗಸು-ಹೆಂಡಗಳನ್ನು ಮೊರೆಹೊಗುವುದು ಸಹಜ. ನನ್ನ ಭೇಟಿ ಮುಗಿದಾಗ ಅಲ್ಲಿನ ವ್ಯವಸ್ಥಾಪಕ, ಆ ಜನರ ಯೋಗಕ್ಷೇಮಕ್ಕೇನಾದರೂ ಸೂಚನೆಗಳನ್ನು ಕೊಡಲು ನನ್ನನ್ನು ಕೇಳಿದ. ನಾನು ಎರಡು ಮಾತು ಹೇಳಿದೆ: ೧. ಮೊದಲನೆಯದು–ಈ ಗಣಿಯನ್ನು ಮುಚ್ಚಿಬಿಡುವುದು ; ೨. ಎರಡನೆಯದು–ಈ ಜನ ದುಃಖವನ್ನು ಮರೆಯಲು ಇನ್ನೂ ಕೆಲವು ಹೆಂಡದಂಗಡಿಗಳನ್ನು ಹೆಚ್ಚುಮಾಡುವುದು. ವ್ಯವಸ್ಥಾಪಕನಿಗೆ ಇದನ್ನು

ಕೇಳಿ ಗಾಬರಿಯಾಯಿತು. ಎರಡೂ ಅವನಿಗೆ ಒಪ್ಪಿಗೆಯಾಗಲಿಲ್ಲ. ಆ ಗಣಿ ಹೇರಳವಾಗಿ ಲಾಭಕೊಡುತ್ತಿತ್ತು. ಬಂಡವಾಳಗಾರರಿಗೆ ಮನುಷ್ಯರಿಗಿಂತ ಬಂಗಾರ-ಹಣ ಹೆಚ್ಚು.

ಪ್ರಕೃತಿ ರೂಪಿಸಿದಂತೆ ಕೆಲಸದ ಪೂರ್ಣಲಾಭವನ್ನು ಪಡೆಯ ಬೇಕಾದರೆ ಕೆಲಸ ಪ್ರಕೃತಿಯ ಮೂಲರೂಪದ ಸರಳತೆಗೆ ಅನುಗುಣ ವಾಗಿರಬೇಕು. ಅದನ್ನು ವ್ಯರ್ಥವಾದ ಚಿಕ್ಕ ಚಿಕ್ಕ ಭಾಗಗಳಾಗಿ ಮಾಡ ಬಾರದು

**ಕೂಲಿ:** ಕೆಲಸಗಾರನಿಗೆ ಪ್ರಕೃತಿ ಉತ್ತಮ ರೀತಿಯಲ್ಲಿ ಫಲ ಕೊಡುತ್ತದೆ: ನಾವು ಕಂಡಿದೇವೆ. ಕೆಲಸದಿಂದ ದೊರೆತ ಈ ಫಲ ಸಹಜವಾದ ನೈಸರ್ಗಿಕ ಫಲ.

ಬಾಳು ತೊಡಕು-ಸಿಕ್ಕು ಆದಮೇಲೆ ಮನುಷ್ಯ ಶ್ರಮವಿಭಾಗವನ್ನು ತಂದಿಟ್ಟ. ದುಡಿತಕ್ಕೆ ಪ್ರತಿಫಲವಾಗಿ ಹಣದ ಕೂಲಿಕೊಟ್ಟು ನೈಸರ್ಗಿಕ ಫಲದ ಒಂದಂಶವನ್ನು ಮಾತ್ರ ನೀಡಿದ. ಆದರೆ ಕೆಲಸದ ನಿಜಧರ್ಮ, ಉದ್ದೇಶ್ಯ ಏನೆಂಬುದನ್ನು ಸದಾ ನೆನಪಿಟ್ಟರೆ ಈ ತೊಡಕು ನಮ್ಮನ್ನು ದಾರಿಗೆಡಿಸಲಾರವು.

ಈ ಹಣಗೂಲಿಯ ಪದ್ಧತಿ ಬಂದಮೇಲೆ ಕೆಲಸಕ್ಕಿಂತ, ಕೆಲಸದ ಅರ್ಥಕ್ಕಿಂತ ಎಷ್ಟು ಉತ್ಪತ್ತಿಯಾಯಿತು ಎಂಬುದೇ ಮುಖ್ಯವಾಗಿದೆ. ಈಗ ಉತ್ಪತ್ತಿಯಾದ ವಸ್ತುವೆ ಪ್ರಧಾನ; ಉತ್ಪಾದನೆಯ ಕೆಲಸದ ಮೂಲೋದ್ದೇಶ್ಯ ಮುಖ್ಯವಲ್ಲ. ಪೇಟೆಯಲ್ಲಿ ಯಾವ ವಸ್ತುವನ್ನು ಮಾರಿದರೆ ಅಧಿಕಾಧಿಕ ಲಾಭ ಸಿಕ್ಕೀತೆಂಬುದು ಯಜಮಾನನ ಚಿಂತೆ. ಬಹಳ ಅಗ್ಗವಾಗಿ ಆ ವಸ್ತುಗಳು ತನಗೆ ಸಿಗಬೇಕು, ತಾನದನ್ನು ಬಹಳ ತುಟ್ಟಿಯಾಗಿ ಮಾರಬೇಕು. ಈ ವಸ್ತುವನ್ನು ಮಾಡಲು ಕೆಲಸಗಾರರಿಗೆ ಕೂಲಿ ಕೊಡುತ್ತಾನೆ. ಜನಸಂಖ್ಯೆ ಹೆಚ್ಚಾಗಿ, ಸ್ಪರ್ಧೆ ಮಿತಿಮೀರಿ, ಕೆಲವರು ಬಹಳ ಕಡಮೆ ಕೂಲಿಗೆ ಅದನ್ನು ಮಾಡಿಕೊಡಲು ಬರುತ್ತಾರೆ. ಅದರಿಂದ ನೀತಿಗೆಡಲಿ, ಮೈಕೆಡಲಿ, ಏನೇ ಇರಲಿ, ಹಣವೊಂದೇ ಮುಖ್ಯ. ಉಳಿದ ವಿಚಾರ ಬರುವುದೇ ಇಲ್ಲ ಆ ಅಳತೆಯಲ್ಲಿ. ಹೀಗೆ, ಕೆಲಸವೂ ಒಂದು ಮಾರಾಟದ ಪದಾರ್ಥವಾಯಿತು. ಯಾರು ಹೆಚ್ಚಿನ

ಬೆಲೆ ಕೊಟ್ಟರೆ ಅವರಿಗೆ ನಮ್ಮ ಕೆಲಸವನ್ನು ಮಾರುತ್ತೇವೆ. ಯಾರು ಕಡಮೆ ಬೆಲೆಗೆ ಮಾರುತ್ತಾರೋ ಅದನ್ನು ಬಂಡವಾಳಗಾರ ಕೊಳ್ಳುತ್ತಾನೆ.

ಒಬ್ಬ ಗುಲಾಮರ ವರ್ತಕ. ಆಫ್ರಿಕಾದಲ್ಲಿ ಗುಲಾಮರನ್ನು ಹಿಡಿದು ಅಮೆರಿಕಾವಲ್ಲಿ ತೋಟಗಳಿಗೆ ಒಯ್ಯಬೇಕು. ಆ ತೋಟಗಾರ ತನ್ನ ಆಫೀಮನ್ನು ಚೀನಾಕ್ಕೆ ಒಯ್ದು ಅವರಿಗೆ ಮಾರಬೇಕು. ಇದಕ್ಕೆ ಆ ವರ್ತಕನ ಹಡಗುಗಳಿಗೆ ನಾವಿಕರು ಬೇಕು. ಈ ಕೆಲಸ ಧರ್ಮವೆ, ಯೋಗ್ಯವೆ ಅಯೋಗ್ಯವೆ ಎನ್ನುವಂತಿಲ್ಲ. ಅವನು ಕೂಲಿಕೊಟ್ಟ, ಅಷ್ಟೇ.

ತಾಯಿ ತನ್ನ ಮಗುವಿನ ಆರೈಕೆಮಾಡಿದಾಗ, ಮಕ್ಕಳಿಗೆ ಅಡಿಗೆ ಮಾಡಿದಾಗ, ಆಕೆ ನೈಸರ್ಗಿಕವಾದ 'ಸೇವಾವಿಧಾನ'ವನ್ನು ಅವಲಂಬಿಸಿ ದ್ದಾಳೆ. ಆಕೆಗೆ ಸಿಗುವ ಪ್ರತಿಫಲ ತನ್ನ ಮಕ್ಕಳು ಹೃಷ್ಟಪುಷ್ಟವಾಗಿರು ವುದನ್ನು ನೋಡುವ ಆನಂದ; ಅದೇ ಆಕೆಯ 'ಕೂಲಿ.'

ಅದರ ಬದಲು ಒಬ್ಬ ದಾದಿಯನ್ನಿಟ್ಟು ಮಗುವಿಗೆ ಹಾಲು ಕೊಡಿ ಸಿದರೆ, ಅಡಿಗೆಗೆ ಒಬ್ಬ ಪರಿಚಾರಕನನ್ನು ಇಟ್ಟರೆ, ಅದು ಕೆಳಗುರುಳಿದಂತೆ: ಪ್ರಯತ್ನಶೀಲ ಆರ್ಥಿಕ ವಿಧಾನವನ್ನು ಅವಲಂಬಿಸಿದಂತೆ. ಎರಡೂ ಸಂದರ್ಭಗಳಲ್ಲೂ ತಾಯಿಯ ನೈಸರ್ಗಿಕ ಕರ್ಮ–ಧರ್ಮಗಳನ್ನು ವ್ಯಾಪಾರಕ್ಕೆ ಇಟ್ಟಹಾಗಾಯಿತು. ಆ ದಾದಿಗೆ, ಅಡಿಗೆಯವನಿಗೆ, ಆ ಕೆಲಸದಲ್ಲಿ ಸಂತೋಷವಿಲ್ಲ. ಮಕ್ಕಳ ಸುಖ ಮುಖ್ಯವಲ್ಲ; ಅದರಿಂದ ಬರುವ ಕೂಲಿ–ಕಾಸು ಮುಖ್ಯ.

ಮೊಲೆ ಹಾಲನ್ನು ಕುಡಿಸದೆ ಡಬ್ಬಾ ಹಾಲನ್ನು ಮಗುವಿಗೆ ಕುಡಿಸಿ ತಾಯಿ ತನ್ನ ದೇಹಸೌಂದರ್ಯವನ್ನು ಕಾಪಾಡಿಕೊಳ್ಳುವ ಪ್ರಯತ್ನ ಮಾಡಿದರೆ, ಮಗು ಹೇಗೇ ಇರಲಿ ತಾನು ಬಳುಬಳುಕುತ್ತ ಇರಬೇಕೆಂದರೆ, ಸಂಸ್ಕೃತಿಯಲ್ಲಿ ಇನ್ನೂ ಒಂದು ಹೆಜ್ಜೆ ಇಳಿದ ಹಾಗಾಯಿತು. ಇದು 'ಪರಾಪಹಾರ'ದ ವಿಧಾನ. ಆ ಡಬ್ಬಾ ಹಾಲನ್ನು ತಯಾರಿಸುವ ಬಂಡ ಗಾರನಿಗೆ ಮಗುವಿನ ಚಿಂತೆಯೆ ಇಲ್ಲ. ತಾಯಿಯ 'ಸೌಂದರ್ಯ'ದ ಚಿಂತೆಯ ನೆಪಹೂಡಿ ಆ ಹಾಲಿನ ಗುಣವನ್ನು ಹೊಗಳುತ್ತಾನೆ.

ಈ ಗುಣಗಳು ಸ್ವಲ್ಪವೂ ಆ ಹಾಲಿನಲ್ಲಿ ಇಲ್ಲದಿದ್ದರೆ ಅದು ಪೂರಾ 'ಪರೋಪ ಜೀವನ.' ಮಗುವಿಗೆ ಏನು ರೋಗ ಬಂದರೂ ಸರಿ, ಅದರ

ಚಿಂತೆಯಿಲ್ಲದೆ ತನ್ನ ಲಾಭದ ಚಿಂತೆಯೊಂದಿದ್ದರಾಯಿತು. ತಾಯಿ ಮಾಡಬೇಕಾದ ಸಹಜ ಕ್ರಿಯೆಯನ್ನು ಹೀಗೆ ಹಲವಾರು ಜನ ಹಣದಾಸೆಗಾಗಿ ಮಾಡುತ್ತಾರೆ. ತಾಯಿಯ ಕೆಲಸದ ಗಾಂಭೀರ್ಯ, ಗೌರವ, ಆನಂದಗಳೆಲ್ಲ ಮಣ್ಣುಗೂಡಿ, ಬರೀ ಕೊಡು-ಕೊಳ್ಳುವ ಮಾರಾಟದ ಗುಲ್ಲೊಂದೇ ಉಳಿಯುತ್ತದೆ.

ಹಿಂದೆ ಕಾಶ್ಮೀರದಲ್ಲಿ ಒಂದು ಬಗೆಯ ರತ್ನಕಂಬಳಿ ಆಗುತ್ತಿತ್ತು. ತುರ್ಕಿ ಟವಲಿನ ಹಾಗೆ ಮೇಲೆ ಉಣ್ಣೆ ಉಣ್ಣೆಯಂತೆ ಇದ್ದರೂ ಬಹಳ ಮೆದು. ಇದನ್ನು ಮಾಡಲು ಬಹಳ ಕೌಶಲ ಬೇಕಾಗಿತ್ತು. ಮಾಡಲು ಬಹಳ ಕಾಲ ಹಿಡಿಯುತ್ತಿತ್ತು. ಅದರಿಂದ ಅದಕ್ಕೆ ಬೆಲೆಯೂ ಬಹಳ. ಇವಕ್ಕೆ ಬದಲು ಗಿರಣಿಯ ರಗ್ಗುಗಳು ಬಂದು ಆ ಕಂಬಳಿಗಳು ಮಾಯವಾಗಿಯೇ ಹೋದವು.

ಒಂದು ಕಡೆ ಕೆಲವರು ಕೂಲಿಗಾರರು ರಸ್ತೆಯ ಜಲ್ಲಿಗಾಗಿ ಕಲ್ಲನ್ನು ಒಡೆಯುತ್ತಿದ್ದರು. ಇದನ್ನು ಚರಖಾ ಸಂಘದ ಕೆಲಸಗಾರ ಒಬ್ಬಾತ ನೋಡಿದ. ವಿಚಾರಿಸಿದ ಮೇಲೆ ಆ ಕೂಲಿಗಳು ಈ ಕಂಬಳಿ ನೇಯುತ್ತಿದ್ದ ನೇಕಾರರೆಂದು ತಿಳಿಯಿತು. ಅವರ ಕೈಗಾರಿಕೆ ಖಿಲವಾಗಿ ಲೋಕಕ್ಕೆ ಅವರ ಕೌಶಲ ನಷ್ಟವಾಗಿ ಅವರಿಗೆ ಈ ಗತಿ ಬಂದಿತು.

ಕೆಲಸದ ಆನಂದ ಮುಖ್ಯವಲ್ಲ, ಮಾಡಿದ ಪದಾರ್ಥವೇ ಮುಖ್ಯ ಆದಾಗ ಕೈಗಾರಿಕೆಯ ಹುಲಿಗಳೆಲ್ಲ ಕಲ್ಲೊಡೆಯುವ ಕೂಲಿಗಳಾದರು. ಮಾನವ ಸಾಮರ್ಥ್ಯ, ಕೌಶಲಗಳ ಸದುಪಯೋಗವೆ ಇದು ? ಈ ನಷ್ಟ-ಹಾನಿ ಯಾವ ಆರ್ಥಿಕ ನೀತಿಗೆ ಯೋಗ್ಯ ? ಕೆಲಸದ ನಿಜ ಉದ್ದೇಶ್ಯವನ್ನು ಅಸಡ್ಡೆ ಮಾಡಿ ಹಣಗೂಲಿ ಕೊಡುವ ವ್ಯವಸ್ಥೆಯಿಂದ ಬರುವ ಸರ್ವನಾಶ ಇದು.

ಹೊರಗಿನಿಂದ ಪದಾರ್ಥಗಳನ್ನು ತರಿಸುವ ಆಮದು ಪದ್ಧತಿಯಿಂದ ಕೆಲಸಗಾರರಿಗೆ ಕೆಲಸದ ಉದಾತ್ತ ಗಾಂಭೀರ್ಯದ ಅನುಭವವಿಲ್ಲವಾಗಿದೆ. ಸ್ವತಂತ್ರರಾದ ಬ್ರಿಟಿಷ್ ರೈತರು ಇಂಗ್ಲೆಂಡಿನಲ್ಲಿ ಹೇಗೆ ಗಿರಾಕಿ-ಕೂಲಿಗಳಾದರೋ ಹಿಂದೆ ಓದಿದೆವು. ಆ ಗಿರಣಿಗಳ ಪದಾರ್ಥಗಳನ್ನು ಆಮದು ಮಾಡಿ ಮಾಡಿ, ನಮ್ಮ ದೇಶದಲ್ಲಿ ನಮ್ಮ ಜನರು ಹೊಟ್ಟೆಯ ಪಾಡಿಗಾಗಿ

ದನಗಳೊಡನೆ ಸ್ಪರ್ಧೆಗಿಳಿಯುವಂತೆ ಮಾಡಿದೇವೆ. ಯಾವ ಪಟ್ಟಣಕ್ಕೆ ಹೋದರೂ ಎತ್ತು-ಕುದುರೆಗಳ ಬದಲು ಮನುಷ್ಯನೇ ರಿಕ್‌ಷಾ ಎಳೆಯುವುದನ್ನು ನೋಡಬಹುದು. ಶ್ರಮ ತಗ್ಗಿಸುವ ಯಂತ್ರಗಳು ಬಂದುದರ ಫಲ ಇದು. ಇಂಗ್ಲೆಂಡಿನಲ್ಲಿ ಕೆಲವರ ಶ್ರಮ ತಗ್ಗಬಹುದು. ಆದರೆ ಹಿಂದುಸ್ಥಾನದ ಜನರು ಹೊಟ್ಟೆಯ ಪಾಡಿಗಾಗಿ ಮಾಡಬಾರದ ಕೆಲಸ ಮಾಡಬೇಕಾಗಿ ಬಂದಿದೆ, ಆದರಿಂದ. ಒಂದು ಕಡೆ ಸಮೃದ್ಧಿ ಯಾದರೆ, ಅದು ಇನ್ನೊಂದು ಕಡೆ ಅಭಾವಕ್ಕೆ ಕಾರಣವಾಗಬಾರದು. ಹೊಸ ಹೊಸ ಅಭಾವದ ತೊಡಕನ್ನು ತಂದಿಡುವ ಸಮೃದ್ಧಿಯೆಂಥ ಸಮೃದ್ಧಿ? ಕುಶಲ ಕೆಲಸಗಾರರನ್ನು ಕಲ್ಲೊಡೆಯಲು ಗಾಡಿಯೆಳೆಯಲು ನೂಕಿ, ದನಗಳ ಸಾಲಿಗೆ ದಬ್ಬುವುದೂ ಒಂದು ಪ್ರಗತಿಯೆ?

ಕೆಲಸ-ಕರ್ಮ ಗುಣವೃದ್ಧಿಗೆ, ಆತ್ಮವಿಕಾಸಕ್ಕೆ ಸಾಧನ. 'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇನ ಪರಿಸಮಾಪ್ಯತೇ'-ಕಾಯಕವೇ ಕೈಲಾಸ. ಕೆಲಸವನ್ನು ಆ ಗಂಭೀರ ಸ್ಥಾನಕ್ಕೆ ಮತ್ತೆ ಏರಿಸಬೇಕು. ಕೆಲಸಕ್ಕೆ ಹಾಕಿರುವ ಈ ಹಣದ ಬೇಡಿಯನ್ನು ಒಡೆದು ಕೆಲಸ ಸಹಜ ಸ್ವತಂತ್ರ ಕರ್ಮವಾಗುವಂತೆ ಮಾಡಬೇಕು.

ಪ್ರಾಣದ, ಜೀವನದ ಪ್ರಕಾಶದಿಂದ ಬೆಳಗಲು ಮನುಷ್ಯನಿಗೆ ಕೆಲಸದ ಅಗ್ನಿ ಆವಶ್ಯಕ. ಯೋಗ್ಯವಾದ ಕೆಲಸ, ಮಾಡಿದವನಿಗೇ ಅಲ್ಲದೆ ಸುತ್ತಲಿನವರಿಗೂ ಬಿಸಿ-ಬೆಳಕು ಕೊಡುತ್ತದೆ. ಪ್ರೇಮಮಯಿಯಾದ ತಾಯಿ ತನ್ನ ಮಕ್ಕಳಿಗಾಗಿ ಕಷ್ಟಪಟ್ಟು ದುಡಿದರೆ ಆಕೆಗೆ ಆನಂದವಾಗುವುದಲ್ಲದೆ, ಇಡೀ ಕುಟುಂಬವೇ ಆಕೆಯ ಪ್ರೀತಿ ವಾತ್ಸಲ್ಯಗಳ ಸವಿಯನ್ನು ಸವಿಯುತ್ತದೆ. ಮಕ್ಕಳ ಮೈ-ಮನಸ್ಸು ಎರಡೂ ಬಲಗೊಂಡು ದೃಢಕಾಯರೂ ದೃಢಮನಸ್ಕರೂ ಆದ ಪ್ರಜೆಗಳಾಗುತ್ತಾರೆ. ಎಷ್ಟೇ ಸಮರ್ಥಳಾದರೂ ದಾದಿ ಅಥವಾ ಪರಿಚಾರಿಕೆ ತಾಯಿಗೆ ಸಾಟಿಯಾಗಲಾರಳು.

ಹಾಗೇ, ಹಣಗೂಲಿ ಕೊಟ್ಟ ಮಾತ್ರಕ್ಕೆ ಕೆಲಸದ ನಿಜವಾದ ಉದ್ದೇಶ್ಯ ಸಫಲವಾಗದು. ತಾಯಿಯ ಕರುಳನ್ನು ಕೊಡಲೂ ಕೊಳ್ಳಲೂ ಸಾಧ್ಯವೆ? ಕೆಲಸದ ರುಚಿ-ಆನಂದಗಳನ್ನು ಹಣ ಕೊಟ್ಟೀತೆ?

ರೋಗಿ, ರೋಗ ಎರಡರಲ್ಲೂ ಆಸಕ್ತಿಯಿರುವ ವೈದ್ಯ ಅತ್ಯಂತ ಶ್ರದ್ಧೆಯಿಂದ ಪರೀಕ್ಷೆ ಮಾಡಿ, ನಿದಾನ ಮಾಡಿ ಅನುಭವ-ಜ್ಞಾನ ಗಳನ್ನು ಗಳಿಸುತ್ತಾನೆ. ಹಣಕ್ಕಾಗಿ ರೋಗಿಯನ್ನು ಗಮನಿಸುವ ವೈದ್ಯನಿಗೆ ಅದು ಸಾಧ್ಯವಿಲ್ಲ. ಅವನಿಗೆ ಕೆಲಸದಲ್ಲಿ ಆನಂದ. ಇವನಿಗೆ ದುಡ್ಡಿನ ದಾಹ. ಅವನು ಶಾಸ್ತ್ರಾರ್ಥಿ, ಇವನು ದ್ರವ್ಯಾರ್ಥಿ. ಅವನು ವೈದ್ಯ, ಇವನು ಔಷಧ ವ್ಯಾಪಾರಿ. ಅವರಿವರು ಮಾಡಿ ಮಾರುವ 'ಸಿದ್ಧೌಷಧ'ಗಳನ್ನು ಕೊಟ್ಟರಂತೂ ಅವುಗಳ ಮಾರಾಟದ ಏಜಂಟು! ರೋಗಿ ಸಾಯುವ ಹಾಗಿದ್ದರೂ ಈ ಹಣ ಪ್ರಪಂಚದಲ್ಲಿ ಕೈಯೊಳಗೆ ಕಾಸಿಲ್ಲದಿದ್ದರೆ ವೈದ್ಯರ ಸಹಾಯ ಸಿಗದು. ಜೇಬು ತುಂಬಾ ದುಡ್ಡಿದ್ದವನಿಗೆ ಏನೂ ರೋಗವಿಲ್ಲದಿದ್ದರೂ ವೈದ್ಯರು ಸದಾ ಅವನ ಸುತ್ತಲೂ ಮುಕರಿರು ತ್ತಾರೆ.

ಮೊಕದ್ದಮೆಯಲ್ಲಿ ನೈತಿಕ ಆಸಕ್ತಿ ವಹಿಸಿ ನಡೆಸುವ ನ್ಯಾಯವಾದಿ ಕಸಬುದಾರ. ದುಡ್ಡು ಕೊಟ್ಟುದಕ್ಕಾಗಿ ಕಟ್ಟು ಹಿಡಿದವನು ನ್ಯಾಯ ವಾದಿಯಲ್ಲ, ಕಾನೂನಿನ ವರ್ತಕ. ವಕೀಲರ ದುರಾಸೆಗೆ ತಕ್ಕಂತೆ ಕಾಣಿಕೆ ಕೊಡಲಾರದವರು ಎಷ್ಟೋ ಜನ ಸೆರೆಮನೆಗೆ ಹೋಗಿದಾರೆ, ನಿಸ್ಸಹಾಯರಾಗಿ.

ಹೀಗೆ ಎಲ್ಲಾ ವೃತ್ತಿಗಳನ್ನೂ ಈಗ ಪೇಟೆಯಲ್ಲಿಟ್ಟು ಮಾರುತ್ತಿದೇವೆ. ಹಣದ ಹಿಡಿತ ಬಹಳ ಬಲವಾಗಿದೆ. ನಿಜವಾದ ಕಸಬುದಾರ, ಕೆಲಸಗಾರ ಸಿಗುವುದೇ ಕಷ್ಟವಾಗಿದೆ.

ನಾವು ಪರಿಶೀಲಿಸಿದ ದೃಷ್ಟಾಂತಗಳಲ್ಲೆಲ್ಲ ಕೆಲಸದ ಪ್ರಾಧಾನ್ಯತೆ ತಗ್ಗಿ ಕೂಲಿಯೇ ಪ್ರಧಾನವಾಗಿದೆ. ಕೂಲಿಯಲ್ಲಿ ಸೃಷ್ಟಿಶಕ್ತಿಯಿಲ್ಲ. ಆದುದರಿಂದ ಪ್ರಗತಿಯಿಲ್ಲ. ನಮ್ಮ ದೇಶದಲ್ಲಿ ವೈದ್ಯಶಾಸ್ತ್ರ ಪ್ರಗತಿ ಹೊಂದುತ್ತಿಲ್ಲ, ಪ್ರಯೋಗ ನಿಪುಣರು ಯಾರೂ ಇಲ್ಲ ಎನ್ನುತ್ತಾರೆ ಜನ. ಅದಕ್ಕೆ ಕಾರಣವನ್ನು ಹುಡುಕಬೇಕಾಗಿಲ್ಲ. 'ಪರೋಪಜೀವನ'ದ ಮಟ್ಟದಲ್ಲಿದೆ ಆ ವೃತ್ತಿ. ಅಥವಾ 'ಪರಸ್ವಾಪಹಾರ'ದ ಮಟ್ಟದಲ್ಲಿ. 'ಪ್ರಯತ್ನಶೀಲ'ರಾದವರು ಬಹಳ ಸ್ವಲ್ಪ. 'ಸಂಘಜೀವಿ'ಗಳು 'ಸೇವಾರ್ಥಿ' ಗಳು ಕೋಟಿಗೊಬ್ಬರು. ಆದುದರಿಂದ ಆವರ ವರ್ಚಸ್ಸು ಕಡಮೆ.

ಎಲ್ಲಾ ಕ್ಷೇತ್ರಗಳಲ್ಲೂ ಸತ್ಯವಂತ, ಪ್ರಾಮಾಣಿಕ ಕೆಲಸಗಾರರಿಗೆ ಅಭಾವವೇ. ಈ ಧನ ಪ್ರಧಾನವಾದ ಹಣಪ್ರಪಂಚದಲ್ಲಿ, ಕೆಲಸಕ್ಕಿಂತ ಕೂಲಿ – ವಸ್ತುಗಳೇ ಮುಖ್ಯವಾದಲ್ಲಿ ಇದು ಅನಿವಾರ್ಯವೇನೋ!

ಕೆಲಸದ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಂಡರೆ, ಅದರಂತೆ ನಡೆದರೆ, ಮೈಗೆ ಅನ್ನ ಹೇಗೋ ಮನಸ್ಸಿಗೆ–ಗುಣಗಳಿಗೆ ಕೆಲಸ ಹಾಗೆ. ಮನುಷ್ಯನ ಉದಾತ್ತ ಗುಣಗಳನ್ನು ಬೆಳೆಸಿ ಬಲಿಯಿಸಿ, ಅವನಿಂದ ಉತ್ತಮೋತ್ತಮ ಕೃತಿಯನ್ನು ಮಾಡಿಸುತ್ತದೆ–ಕೆಲಸ. ಮನುಷ್ಯನ ಇಚ್ಛಾಶಕ್ತಿಯನ್ನು ಸರಿಯಾದ ದಾರಿಯಲ್ಲಿ ನಡೆಸಿ, ಅವನ ಮೃಗ ಜೀವನವನ್ನು ನಿಗ್ರಹಿಸಿ ಪ್ರಗತಿ ಪಥದಲ್ಲಿ ಕೊಂಡೊಯ್ಯುತ್ತದೆ–ಕೆಲಸ. ತನ್ನ ಬೆಲೆಗಳನ್ನು ಹೊರಗೆಡಹಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಮನುಷ್ಯನಿಗೆ ಅವಕಾಶ ಕೊಡುತ್ತದೆ–ಕೆಲಸ.

ಕೊನೆಮಾತು: ಶ್ರಮ ವಿಭಾಗದ ಪ್ರಯತ್ನ ಕಟ್ಟಕಡೆಗೆ ಕೆಲಸದ ಉದ್ದೇಶ್ಯವನ್ನು ಮರೆಮಾಡಿ ಉತ್ಪಾದನೆಯನ್ನು ಮುಖ್ಯವಾಗಿಸಿತು, ಯಂತ್ರಗಳ ಧಣಿಗೆ, ಗಿರಣಿಗಾರನಿಗೆ; ಕೂಲಿಯನ್ನು ಮುಖ್ಯವಾಗಿಸಿತು ಕೆಲಸಗಾರನಿಗೆ. ಇದರ ಪರಿಣಾಮ ಸರ್ವನಾಶ. ಕೆಲಸ–ಕರ್ಮದ ಪರಿಣಾಮ ಕೆಲಸಗಾರನ ಮೇಲೆ ಏನಾಗುತ್ತಿತ್ತೋ ಅದೇ ಮಾಯವಾಯಿತು.

ಪ್ರಕೃತಿಯ ವ್ಯವಸ್ಥೆಯಲ್ಲಿ ಸಹಕಾರದ ಮೂಲೋದ್ದೇಶ್ಯ ಕೆಲಸಗಾರನ ಪ್ರತ್ಯಕ್ಷ ಸ್ವಪ್ರಯೋಜನ. ದುಂಬಿಗೆ ಹೂಗಳ ಪರಾಗಸ್ಪರ್ಶ ಮುಖ್ಯವಲ್ಲ, ಮಕರಂದ–ಸಂಗ್ರಹ ಮುಖ್ಯ. ಪ್ರಕೃತಿಯಲ್ಲಿ ಅದಕ್ಕೆ ಸಿಗುವ ಪ್ರತಿಫಲ ಅದೇ.

ಶ್ರಮ ವಿಭಾಗದಿಂದ ಈ ಪ್ರಯೋಜನದಲ್ಲೂ ಸಾವಿರ ವಿಭಾಗಗಳಾಗಿವೆ: ಲಾಭ, ಸಂಬಳ, ಕೂಲಿ, ಬಾಡಿಗೆ, ಬಡ್ಡಿ ಇತ್ಯಾದಿ. ಇದರಿಂದ ಕೆಲಸ ಮಾಡಿದವನಿಗೆ ಇಡೀ ಫಲ ಸಿಗದು; ಎಲ್ಲೋ ಒಂದಂಶ ಮಾತ್ರ. ಜೇನು ಹುಟ್ಟೇ ಜೇನುತುಪ್ಪವನ್ನು ದುಂಬಿಗಿಲ್ಲದಂತೆ ಕುಡಿದರೆ ಹೇಗೋ, ಹಾಗೇ ಶೋಷಕ ನಡುವೆ ಬಂದು ಪ್ರಯೋಜನದ ಹೆಚ್ಚು ಭಾಗವನ್ನು ತಾನು ಅಪಹರಿಸುತ್ತಾನೆ.

ಸ್ವಪ್ರಯೋಜನದ ಆಸೆಯೇ ಪ್ರಕೃತಿಯಲ್ಲಿ ಸಹಕಾರದ ಮೂಲ. ಇದು ಸ್ಪಷ್ಟವಾಗಿ ಕಾಣುತ್ತದೆ. ಆ ಪ್ರಯೋಜನಗಳೆಲ್ಲ ಕರಗಿಸಿ ಬಿಡುವುದು ಶಾಶ್ವತ ಆರ್ಥಿಕ ವಿಧಾನಕ್ಕೆ ವಿರುದ್ಧ. ಅದರಿಂದ ಒಂದು ದಿನ ಹೆಚ್ಚು ಕಡಮೆ ಹಿಂಸೆ ಹುಟ್ಟಲೇ ಬೇಕು. ಸಮ ವಿಭಾಗವೇನೋ ಬೇಕು, ಆದರೆ ಮೊದಲು ಲಾಭಗಳನ್ನೆಲ್ಲ ಒಂದೆಡೆ ಕೂಡಿಹಾಕಬೇಕು, ಆಮೇಲೆ ಹಂಚಬೇಕು ಎಂಬ ಸಮತಾವಾದಿಗಳು ಮಾಡಿದವನಿಗೇ ನೇರಾಗಿ ನೀಡುವ ಪ್ರಕೃತಿಯ ನಿಯಮಕ್ಕೆ ವಿರುದ್ಧ. ಈ ಸಮತಾವಾದಿಗಳ ಪದ್ಧತಿಯೂ ಕಡೆಗೆ ಹಿಂಸಾಜನಕವೆ.

ಯೋಜನೆ: ಇದು ವಿವರವಾಗಿ ಆರ್ಥಿಕ ಯೋಜನೆಯೊಂದನ್ನು ಪರಿಶೀಲಿಸುವ ಸ್ಥಳವಲ್ಲ. ಆದರೆ ವಸ್ತೂತ್ಪಾದನೆ–ಕೂಲಿ ಎರಡನ್ನೇ ಮುಖ್ಯವಾಗಿ ಎಣಿಸುವ ಯಾವ ಯೋಜನೆಯೂ ಪ್ರಕೃತಿ ಸಮ್ಮತವಲ್ಲ. ನಮ್ಮ ಉದ್ದೇಶ್ಯವನ್ನು ಸಾಧಿಸಿ, ಶಾಶ್ವತ ಆರ್ಥಿಕ ವಿಧಾನವನ್ನು ರೂಪಿಸುವ ಯೋಜನೆಗೆ ಕೆಲಸವೇ ಮುಖ್ಯ ಬಿಂದುವಾಗಬೇಕು; ಕೆಲಸ ಮಾಡಬೇಕಾದ ಮನುಷ್ಯನ ಶಕ್ತಿ ಸಾಮರ್ಥ್ಯಗಳಿಗೆ ಅನುಸಾರವಾಗಿರಬೇಕು ಈ ಕೆಲಸ.

ಒಬ್ಬ ರೈತ ಸುಗ್ಗಿಯಲ್ಲಿ ದವಸವನ್ನು ಕುಯಿದು ಕಣಜದಲ್ಲಿ ಕಾಳನ್ನು ಕೂಡಿಟ್ಟ. ಇಲಿಗಳು ಆ ಕಾಳನ್ನು ಮುತ್ತಿದವು, ಇದಕ್ಕೆ ಉಪಾಯವೇನೆಂದು ಯೋಚಿಸಿ ಒಂದು ಬೆಕ್ಕನ್ನು ಸಾಕಿದ. ಬೆಕ್ಕು ಇಲಿಗೆ ವೈರಿ. ಅವನ ಉಪಾಯ ಪ್ರಕೃತಿ ಸಹಜ. ಆ ಬೆಕ್ಕಿಗೆ ಹಾಲಿಗಾಗಿ ಒಂದು ಹಸುವನ್ನು ತಂದ. ಆ ಹಸುವನ್ನು ನೋಡಿಕೊಳ್ಳಲು ಒಬ್ಬ ಹೆಂಗಸು ಬೇಕಾಯಿತು. ಅವಳನ್ನು ಮದುವೆಯಾದ! ಹೀಗೆ ಪ್ರಕೃತಿಯ ವಿಧಾನವನ್ನರಿತು, ಉದ್ದೇಶ್ಯವರಿತು ಮಾಡಿದ ಕೆಲಸ ಸಫಲವಾಗುತ್ತದೆ.

ಈಗ ಬರುವ ಯೋಜನೆಗಳೆಲ್ಲ ಪದಾರ್ಥ ನಿರ್ಮಾಣ ಪ್ರಧಾನವಾಗಿವೆ. ಸ್ವಲ್ಪ ಮಟ್ಟಿಗೆ ಕೂಲಿಯೂ ಮುಖ್ಯವೇ. ಜರ್ಮನಿ, ರಷ್ಯಾಗಳಲ್ಲಿ ಆದಂತೆ ಈ ಯೋಜನೆಗಳು ಬಹು ಬೇಗ ಫಲ ಕೊಡುತ್ತವೆ.

ಆದರೆ ಬಹಳ ಕಾಲ ನಿಲ್ಲವು. ಶಾಶ್ವತ ವಿಧಾನವನ್ನು ಅನುಸರಿಸಿದುದರಿಂದ ಹಿಂಸಾಜನಕವಾಗುತ್ತವೆ.

ಈ ಪುಸ್ತಕದ ಎರಡನೆಯ ಭಾಗದಲ್ಲಿ 'ಸಂಘಜೀವಿ ಮನುಷ್ಯ'ನ ಬಗ್ಗೆ ಯೋಚಿಸುತ್ತ ಆರ್ಥಿಕ ಯೋಜನೆ, ಪ್ರಜಾತಂತ್ರ, ಸರಕಾರ, ವ್ಯಾಪಾರ ವಿನಿಮಯ, ಶಿಕ್ಷಣ ಇತ್ಯಾದಿಗಳ ವಿಚಾರ ಮಾಡೋಣ.



# ಪ್ರಸ್ತಾವನೆ

ಮೊದಲನೆ ಭಾಗದಲ್ಲಿ ಮನುಷ್ಯನನ್ನು ವ್ಯಕ್ತಿಯಾಗಿ ಪರಿಶೀಲಿಸಿದೇವೆ. ತಾನು ಒಬ್ಬನಾದರೆ ಹೇಗೆ ಮಾಡುತ್ತಾನೋ ನೋಡಿದೇವೆ. ಪ್ರಕೃತಿ ಹೇಗೆ ಕೆಲಸ ಮಾಡುತ್ತದೆಯೋ, ಪ್ರಕೃತಿಯ ಕೆಲಸದ ವಿಧಾನದ ಅಧ್ಯಯನವೇ ವಿಜ್ಞಾನ, ವಿಶ್ವ ಯಾವ ನಿಯಮಗಳಂತೆ ಚಲಿಸುತ್ತಿದೆಯೋ ಮನುಷ್ಯನೂ ಅದರಂತೆಯೆ ನಡೆಯಲು ಸಾಧ್ಯವಾಗುವಂತೆ ಮಾಡುವುದು ವಿಜ್ಞಾನದ ಗುರಿ, ಎಂಬುದನ್ನೂ ಗಮನಿಸಿದೇವೆ. ಈ ನಿಯಮಗಳಿಗೆ ಸ್ವಲ್ಪ ತಪ್ಪಿ ನಡೆದರೂ ಹಿಂಸೆ-ಅವ್ಯವಸ್ಥೆ-ಗೊಂದಲ ಸಿದ್ಧ. ಅನೇಕ ಪ್ರಾಣಿಗಳು ಕೇವಲ ಸ್ವಭಾವ ಬಲದಿಂದಲೇ ಪ್ರಕೃತಿಗೆ ಅನುಸಾರವಾಗಿ ನಡೆಯುತ್ತವೆ. ಆದರೆ ಮನುಷ್ಯನಿಗೆ ಇಚ್ಛಾಶಕ್ತಿ, ಬುದ್ಧಿ ಬಲ ಇರುವುದರಿಂದ ಪ್ರಕೃತಿಯೊಡನೆ ಇಚ್ಛಾಪೂರ್ವಕ ಸಹಕರಿಸುತ್ತಾನೆ. ಮನುಷ್ಯನಿಗೂ ಕೆಳಗಿನ ಪ್ರಾಣಿ ವರ್ಗಕ್ಕೂ ಇರುವ ಮುಖ್ಯ ಭೇದ ಇದೇ. ಈ ಪ್ರಜ್ಞಾಮಯ ಜೀವನದಲ್ಲಿ, ತನ್ನ ಕೃತಿಯನ್ನು ಅಳೆಯಲು ಮನುಷ್ಯ ಯಾವ ರೀತಿಯ ಅಳತೆಗಳನ್ನು-ಮೂಲ್ಯಗಳನ್ನು ಉಪಯೋಗಿಸುತ್ತಾನೆಯೋ ನೋಡಿದೆವು. ಮನುಷ್ಯನ ಶಕ್ತಿ-ಸಾಮರ್ಥ್ಯಗಳನ್ನು ಬೆಳೆಸಲು ಕೆಲಸ ಎಷ್ಟುಮಟ್ಟಿಗೆ ಸಹಾಯಕವೋ ಕಂಡೆವು.

ಹೀಗೆ ಮನುಷ್ಯ ಕೆಲಸ ಮಾಡಿದರೆ ಶಾಶ್ವತ ಅರ್ಥವ್ಯವಸ್ಥೆಯನ್ನು ರಚಿಸುತ್ತಾನೆ. ಆದರಿಂದ ಕಾಲಕಾಲಕ್ಕೆ ಜಗತ್-ಸಂಗ್ರಾಮಗಳ ಉಲ್ಬಣ ಅಗತ್ಯವೆಂಬುದು ನಿಂತುಹೋಗುತ್ತದೆ.

ಈ ಎರಡನೆಯ ಭಾಗದಲ್ಲಿ ಮನುಷ್ಯ ಗುಂಪಿನಲ್ಲಿ ಹೇಗೆ ಬಾಳುತ್ತಾನೆಯೋ ನೋಡೋಣ.

ಪ್ರಾಣಿಗಳಲ್ಲಿಯೂ ಸಮಾನ ಧರ್ಮದ ಜೀವಗಳನ್ನು ಕೆಲವು ಉದ್ದೇಶ್ಯಗಳಿಗಾಗಿ ಒಟ್ಟಿಗೆ ಸೇರಿಸುವ ಕೆಲವು ಶಕ್ತಿಗಳಿವೆ. ತೋಳದಂಥ

ಬೇಟೆಗಾರ–ಮೃಗ ಗುಂಪಾಗಿ ಸೇರಿ ಬೇಟೆಯಾಡುತ್ತದೆ. ಅದರ ಉದ್ದೇಶ್ಯ ಬರೀ ಸ್ವಾರ್ಥ, ಅದರ ಜೀವನ ಪರೋಪಜೀವನ.

ಹಾಗೆ ಪರಪೀಡೆಗಲ್ಲದೆ ಬೇರೆ ಕಾರಣಗಳಿಗಾಗಿ, ಹೆಚ್ಚಾಗಿ ಆತ್ಮ ಸಂರಕ್ಷಣೆಗಾಗಿ, ಹಿಂಡು ಕಟ್ಟಿಕೊಳ್ಳುವ ಪ್ರಾಣಿಗಳೂ ಇವೆ: ಉದಾ– ದನ, ಆನೆ. ವೈಯಕ್ತಿಕವಾಗಿ ಪ್ರತಿಯೊಂದಕ್ಕೂ ಆತ್ಮರಕ್ಷಣೆಯ ಸ್ವಾರ್ಥ ವಿದ್ದರೂ, ಒಟ್ಟಿನಲ್ಲಿ ಪ್ರತಿಯೊಂದೂ ಹಿಂಡನ್ನು ರಕ್ಷಿಸಲು ಪ್ರಯತ್ನಿಸು ತ್ತವೆ.

ಮೊದಲನೆಯ ಭಾಗದಲ್ಲಿ ನಾವು ನೋಡಿದಂತೆ ಪಶ್ಚಿಮ ದೇಶಗಳ ಸಾಮಾಜಿಕ–ಆರ್ಥಿಕ ವ್ಯವಸ್ಥೆ ಪರೋಪಜೀವನದ ವಿಧಾನದ್ದು. ಇತರ ರಿಗೆ ಎಷ್ಟು ಹಾನಿ–ನಷ್ಟ ಮಾಡಿದರೆ ಅಷ್ಟು ಈ ತಂಡಕ್ಕೆ ಅನುಕೂಲ. ಆದುದರಿಂದ ಇದನ್ನು ತೋಳಗಳ ತಂಡದ ವರ್ಗಕ್ಕೆ ಸೇರಿಸಬಹುದು. ಈ ಪರೋಪಜೀವನದ ಸ್ಥಿತಿಯಿಂದ ಪರಾಪಹಾರ, ಪ್ರಯತ್ನಶೀಲ, ಸಂಘ ಜೀವನದ ಸ್ಥಿತಿಗಳಿಗೆ ನಾವು ಮುಂಬರಿದು ಬರುತ್ತೇವೆ.

ಸಂಘಜೀವನದ ಹಂತದಲ್ಲಿ ಎರಡು ಬಗೆ ಇರಬಹುದು: ಹಕ್ಕು– ಅಧಿಕಾರಗಳ ಆರ್ಥಿಕ ವಿಧಾನದ 'ತಂಡ'ದ ಬಗೆ ಒಂದು; ಕರ್ತವ್ಯದ ಆರ್ಥಿಕ ವಿಧಾನದ 'ಹಿಂಡಿ'ನ ಬಗೆ ಇನ್ನೊಂದು.

ಮನುಷ್ಯ ವಿಕಾಸಗೊಂಡ ಹಾಗೆಲ್ಲ ಅವನ ಕರ್ತವ್ಯ ಜ್ಞಾನ ಹೆಚ್ಚು ತ್ತದೆ. ಸಮಾಜದ ಒಬ್ಬ ಸದಸ್ಯನಾಗಿ ತನಗೆ ಆಗುವ ಲಾಭಗಳಿಗಿಂತ ಹೆಚ್ಚಾಗಿ, ಆ ಸಮಾಜದ ಯೋಗಕ್ಷೇಮಕ್ಕಾಗಿ ತಾನು ಮಾಡಬೇಕಾದ ಕರ್ತವ್ಯಗಳೇನೋ ಹೆಚ್ಚುಹೆಚ್ಚಾಗಿ ಅವನಿಗೆ ತಿಳಿಯುತ್ತವೆ. ಕಟ್ಟಕಡೆಗೆ ಪರೋಪಕಾರದ–ಸೇವೆಯ ಆರ್ಥಿಕ ವಿಧಾನವನ್ನು ಮುಟ್ಟಿ, ಅಲ್ಲಿ ಲೋಕ ಸೇವೆಯಲ್ಲಿ ಆತ್ಮಸಾಕ್ಷಾತ್ಕಾರ ಪಡೆಯುತ್ತಾನೆ.

ಈ ಭಾಗದಲ್ಲಿ ತೋಳದ ತಂಡದ ಮನುಷ್ಯನ ವಿಚಾರವಿಲ್ಲ; ಮಾನವ ವರ್ಗದ ಸಮಷ್ಟಿ ಹಿತಕ್ಕಾಗಿ ಸಹಕರಿಸಿ ಕೆಲಸ ಮಾಡುವ ಮನುಷ್ಯನ ವಿಚಾರವನ್ನು ಚರ್ಚಿಸಲಾಗಿದೆ.

ಇಂದು ಲೋಕಕ್ಕೆ ಬೇಕಾಗಿರುವುದು–ಜನರು ಹೇಗೆ 'ಸಹವೀರ್ಯ' ಮಾಡಿಯಾರು, ಸಹಕರಿಸಿ ದುಡಿದು ಇತರರನ್ನು ನಾಶಮಾಡದೆಯೆ

ಮಾನವ ವರ್ಗದ ಸಾಮೂಹಿಕ ಕಲ್ಯಾಣವನ್ನು ಹೇಗೆ ಸಾಧಿಸಬಲ್ಲರು ಎಂಬುದರ ಅರಿವು. ಈ ಬಗೆಯ ಆರ್ಥಿಕವಿಧಾನದಲ್ಲಿ ಯೋಗಕ್ಷೇಮ ಕಾರ್ಯ ಆಡಂಬರವಾಗಿ ಕಾಣದಿರಬಹುದು. ಆದರೆ ಶಾಶ್ವತವಾಗಿದ್ದೀತು.

ಆ ರೀತಿ ನಡೆದರೆ ಏನು ಆದೀತೆಂಬುದಕ್ಕೆ ಪಶ್ಚಿಮ ದೇಶಗಳ ಪರೋಪಜೀವನದ ಸಾಂಘಿಕ ವಿಧಾನವೇ ಸಾಕ್ಷಿ. ಈ ವಿಧಾನದ ಪರಿಣಾಮವನ್ನು ಅರಿತುಕೊಳ್ಳಲು ಕಣ್ಣಿದ್ದವರು ಯೂರೋಪಿನ ಕಡೆ ನೋಡಲಿ. ೧೫೦ ವರ್ಷ ಅತಿ ವೇಗವಾಗಿ ಮಾಡಿದ ಗಿರಣಿಗಾರಿಕೆ–ಕಾರಖಾನೆಗಳ ವಿಶೇಷೋತ್ಪತ್ತಿಯಿಂದ ಆದುದೇನು? ಹಸಿವು, ಬೆತ್ತಲು ದಿನ ಬಳಕೆಯ ಪದಾರ್ಥಗಳ ಅಭಾವ. ಜೊತೆಗೆ, ನಾಶವಾಗಿ ಹೋದ ಕೋಟಿಗಟ್ಟಲೆ ಜನ, ಗಾಳಿಯಲ್ಲಿ ಸುಟ್ಟೋ ನೀರಿನಲ್ಲಿ ಮುಳುಗಿಸಿಯೋ ಹಾಳುಮಾಡಿದ ಅಪಾರ ಸಂಪತ್ತು, ಮುಂದೇನು ಗತಿ ಎಂದು ಮನುಷ್ಯನನ್ನು ದಿಗ್ಭ್ರಾಂತನಾಗಿ ಮಾಡಿವೆ. ನಮಗೆ ಬೇಕಾದುದು ಶಾಶ್ವತ ಆರ್ಥಿಕ ವಿಧಾನ. ಆದುದರಿಂದ ಈ ತೋಳದ ಗುಂಪಿನ ಸಾಂಘಿಕ ವಿಧಾನದ ಬಗ್ಗೆ ನಾವು ಜಾಗರೂಕರಾಗಿರಬೇಕು. ಆ ವಿಧಾನದಿಂದ ಕಡೆಗೆ ಘರ್ಷಣೆ–ವಿನಾಶವೇ ಗತಿ. ಒಂದೆರಡು ದಿನದ ವೈಭವ ಚಮತ್ಕಾರ ಕಂಡರೂ ಕಡೆಗೆ ಎಲ್ಲಾ ಬೆಂಕಿಯ ಪಾಲೇ. ಈ ವಿಧಾನ ಕೊನೆಗೂ ಅಶಾಶ್ವತವೇ. ಆದುದರಿಂದ ಅದನ್ನು ಅಧ್ಯಯನ ಮಾಡಿ ಕಾಲಹರಣ ಮಾಡಬೇಕಾಗಿಲ್ಲ.

ನಮಗೆ ಬೇಕಾದುದು ಶಾಶ್ವತ ವ್ಯವಸ್ಥೆ. ಆದುದರಿಂದ ಮನುಷ್ಯ ಗುಂಪಿನಲ್ಲಿ ಹೇಗೆ ನಡೆದುಕೊಳ್ಳಬೇಕೋ, ಆ ಮನುಷ್ಯರ ಗುಂಪು ಈ ಶಾಶ್ವತ ರಚನೆಯನ್ನು ಸಾಧಿಸಲು ಹೇಗೆ ಕೆಲಸಮಾಡಬೇಕೋ ನೋಡೋಣ.

ಮೊದಲನೆ ಭಾಗದಲ್ಲಿ ಸಮಾಜದೊಳಗೆಯೇ ಮನುಷ್ಯ ವ್ಯಕ್ತಿಯಾಗಿ ಹೇಗೆ ನಡೆದುಕೊಳ್ಳುತ್ತಾನೆಯೋ ನೋಡಿದೆವು. ಅವನು ಉಪಯೋಗಿಸುವ ಪದಾರ್ಥಗಳ ಬೆಲೆ ಹೇಗಿರಬೇಕೋ ತಿಳಿದುಕೊಂಡೆವು.

ಈ ಎರಡನೆಯ ಭಾಗದಲ್ಲಿ ಉತ್ಪಾದನೆ–ವಿತರಣಗಳಲ್ಲಿ ಮನುಷ್ಯ ಸಾಮೂಹಿಕವಾಗಿ ಹೇಗೆ ನಡೆಯಬೇಕೋ ನೋಡೋಣ. ಮನುಷ್ಯ

ಗುಂಪಿನಲ್ಲಿ ಕೆಲಸಮಾಡುವ ಬಗೆ ಮೂರು ಇವೆ: ೧. ಒಬ್ಬನೇ ಉತ್ಪಾದನೆ ಮಾಡುತ್ತಾನೆ; ಕೆಲಕೆಲವು ಅಂಶಗಳನ್ನು ತನ್ನ ನೆರೆಹೊರೆಯವರ ಜೊತೆಗೆ ಸೇರಿಕೊಂಡು ಮಾಡುತ್ತಾನೆ. ಹೀಗೆ ನೆರೆಯವರೊಡನೆ ಜೊತೆಗೂಡಿ ಮಾಡಿದ ಕೆಲಸದಲ್ಲಿ ಅವನ ಹಿತವೂ ಇದೆ, ಅವರ ಹಿತವೂ ಇದೆ, ಭವಿಷ್ಯದ ಹಿತವೂ ಇದೆ. ೨. ಎರಡನೆಯದು–ಒಂದೇ ಕಸಬು, ಒಂದೇ ಬಗೆಯ ಬಾಳು–ಬದುಕು ಇರುವ ಜನ ಒಟ್ಟಿಗೆ ಸೇರಿ ಕೆಲಸಮಾಡುತ್ತಾರೆ: ಇದು ಸಹಕಾರ–ಪ್ರಯತ್ನ. ಸಂಘಜೀವನದಲ್ಲಿ ಎರಡನೆಯ ನೀತಿ. ೩. ಆಮೇಲೆ, ತಾತ್ಕಾಲಿಕವಾದ ಕೆಲಸಗಳನ್ನು ವ್ಯಕ್ತಿಗಳಿಗೂ ಸಹಕಾರ ಸಂಸ್ಥೆಗಳಿಗೂ ಒಪ್ಪಿಸಿ, ಮುಂದಿನ ಕಾಲಕ್ಕೆ ಫಲಕೊಡುವ ದೀರ್ಘಕಾಲದ ಕೆಲಸಗಳನ್ನು ನಿಸ್ವಾರ್ಥಿಗಳ ಗುಂಪೊಂದು ವಹಿಸಿಕೊಳ್ಳುತ್ತದೆ. ಇವರಿಗೆ ಕರ್ತವ್ಯ–ಧರ್ಮದ ಪಾಲನೆ ಮುಖ್ಯ. ಸಮಾಜಕ್ಕೆ ಹಿತವಾಗಲಿ ಎಂಬುದೊಂದೇ ಅವರ ಉದ್ದೇಶ್ಯ. ಇಂಥ ಗುಂಪನ್ನು ರಾಜ್ಯ–ಸರಕಾರ ಎನ್ನುತ್ತೇವೆ. ಈ ಕಾಲದಲ್ಲಿ ಯಾವ ದೇಶದಲ್ಲಾದರೂ ಇಂಥ ಜನರುಳ್ಳ ಸರಕಾರ ಇದೆಯೇ, ಆಡಳಿತದ ಹೊಣೆ ಹೊರಲು ಇಂಥ ಯೋಗ್ಯ ಜನ ಇದ್ದಾರೆಯೇ ಎಂಬ ಪ್ರಶ್ನೆಗೆ ಉತ್ತರ ಕಷ್ಟಸಾಧ್ಯ. ಈಗಿನ ರಾಜ್ಯಪದ್ಧತಿಗಳೆಲ್ಲ ಜನಸಾಮಾನ್ಯರ ಬಗ್ಗೆ ತಮ್ಮ ಕರ್ತವ್ಯವನ್ನು ನೆರವೇರಿಸುತ್ತಿಲ್ಲ; ನಿಷ್ಫಲವಾಗಿವೆ.

ಮೊದಲು, ಗುಂಪಿಗಾಗಿ ಸಾಮೂಹಿಕ ಯೋಜನೆಯನ್ನು ಪರಿಪಾಲಿಸೋಣ; ಆಮೇಲೆ, ಮನುಷ್ಯ ತನ್ನ ಸಂಗಾತಿಗಳೊಡನೆ ಸಹಕರಿಸಿ ಹೇಗೆ ಆರ್ಥಿಕ ಕಾರ್ಯಕ್ರಮವನ್ನು ನಡೆಸುತ್ತಾನೆಯೋ ನೋಡೋಣ. ಅನಂತರ, ಸಹಕಾರ ಪದ್ಧತಿಯಿಂದ ಏನೇನು ಕೆಲಸಮಾಡಬಹುದೋ ಮಥಿಸೋಣ. ಕಡೆಗೆ, ಲೋಕವೆಲ್ಲ ಯಾವುದಕ್ಕಾಗಿ ಪಾಡುಪಡುತ್ತಿದೆಯೋ, ಯಾವುದನ್ನು ಅರಸುತ್ತಿದೆಯೋ, ಅದನ್ನು ಸಾಧಿಸಲು ರಾಜ್ಯ ಏನು ಮಾಡಬಲ್ಲದು, ಹೇಗೆ ಮಾಡಬಲ್ಲದು ಎಂಬುದನ್ನು ವಿಚಾರಿಸೋಣ. ಇದೆಲ್ಲದರಲ್ಲಿಯೂ ನಾವು ಮೊದಲನೆ ಭಾಗದಲ್ಲಿ ಅಧ್ಯಯನ ಮಾಡಿದ ತತ್ತ್ವ–ಸೂತ್ರಗಳನ್ನು ಮನಸ್ಸಿನಲ್ಲಿಟ್ಟಿರಬೇಕು. ಒಂಟಿಯಾಗಿ

ದ್ದರೆ ಹೇಗೋ ಗುಂಪಿನಲ್ಲಿದ್ದಾಗಲೂ ಮನುಷ್ಯರ ಕಾರ್ಯಕಲಾಪಗಳಿಗೆ ಆ ಸೂತ್ರಗಳು ಅನ್ವಯಿಸುತ್ತವೆ.

ಈ ಎರಡೂ ಭಾಗಗಳಲ್ಲಿಯೂ ವಿವರಿಸಿದ ಯೋಜನೆಯನ್ನು ಅನುಸರಿಸಿದರೆ, ಅಹಿಂಸಕ ಸಮಾಜ ಸ್ಥಾಪನೆಯಾದೀತು; ಜನತೆಗೆ ಅವರ ದಿನ ಬಳಕೆಗೆ, ನಿತ್ಯಯಾತ್ರೆಗೆ ಬೇಕಾದ ಪದಾರ್ಥಗಳನ್ನು ಯಥೇಚ್ಛವಾಗಿ ಒದಗಿಸಿ, ರಾಷ್ಟ್ರ-ರಾಷ್ಟ್ರಗಳ ನಡುವೆ ಶಾಂತಿಯನ್ನು ನೆಲೆಗೊಳಿಸೀತು.

# ಪ್ರಕರಣ ೧

## ಯೋಜನೆಯ ಅಗತ್ಯ-ರೂಪು

ಯೋಜನೆ ಮಾಡಲೇಕೆ ? ರಾಷ್ಟ್ರೀಯ ಯೋಜನೆ ಎಂದರೆ ಏನೋ ಕಗ್ಗಂಟು, ಕೇವಲ ತಜ್ಞರಿಗೆ ಪಂಡಿತರಿಗೆ ಮಾತ್ರವೇ ಅದು ಅರ್ಥವಾಗುತ್ತದೆ ಎಂದು ಅನೇಕರು ತಿಳಿದಿದಾರೆ. ಬೀದಿಯಲ್ಲಿ ಓಡಾಡುವ ಪ್ರತಿಯೊಬ್ಬ ಸಾಮಾನ್ಯ ಮನುಷ್ಯನಿಗೂ ನಾವು ಏಕೆ ಯೋಜನೆ ಮಾಡುತ್ತಿದೇವೋ ತಿಳಿಯದಿದ್ದರೆ, ಆ ಯೋಜನೆ ನಿರ್ಜೀವವಾಗುತ್ತದೆ. ನಮ್ಮ ರೈತರಿಗೆ ಯೋಜನೆ ಅರ್ಥವಾಗದಿದ್ದರೆ, ಅದನ್ನು ನೆರವೇರಿಸಲು ಅವರು ಮನಸಾರೆ ನೆರವಾಗದಿದ್ದರೆ, ಅಂಥ ಯೋಜನೆ ರಾಷ್ಟ್ರೀಯ ಯೋಜನೆಯಲ್ಲ. ಜನರ ಬುದ್ಧಿಗೆ ಎಟುಕದಿದ್ದರೆ ಅಂಥ ಯೋಜನೆಯನ್ನು ನಿರ್ವಹಿಸುವುದು ಅಸಾಧ್ಯ. ರಷ್ಯಾದಲ್ಲಿ ಮಾಡಿದಂತೆ ಅಪಾರ ಹಿಂಸೆ-ಬಲಾತ್ಕಾರಗಳಿಂದ ಅದನ್ನು ಸಾಧಿಸಬೇಕಾದೀತು. ನಮಗೆ ಯೋಜನೆಯನ್ನು ಸಾಧಿಸಲು ರಕ್ತಪಾತ ಬೇಕಾಗಿಲ್ಲ. ಜನಕ್ಕೆ ಯೋಜನೆಯಲ್ಲಿ ತಮ್ಮ ಹಿತವಿದೆಯೋ ಇಲ್ಲವೋ ತಿಳಿಯಬೇಕು. ಅವರಿಗೆ ಅದು ಒಪ್ಪಿದರೆ ಅವರ ಮನಃಪೂರ್ಣ ಸಹಕಾರ ಸಿಗುತ್ತದೆ.

ತಮ್ಮ ಹಳ್ಳಿಗಳು ಸಮೃದ್ಧವಾಗಬೇಕು, ಸುಖಮಯವಾಗಿ ಪೂರ್ಣ ಜೀವನವನ್ನು ಅನುಭವಿಸಬೇಕು ; ಪ್ರತಿಯೊಬ್ಬ ಗ್ರಾಮಸ್ಥನಿಗೂ ವೈಯಕ್ತಿಕವಾಗಿಯೂ ಸುಸಂಘಟಿತ ಸಮಾಜದ ಒಬ್ಬ ಸದಸ್ಯನಾಗಿಯೂ ವಿಕಾಸಗೊಳ್ಳಲು ಪೂರ್ಣಾವಕಾಶವಿರಬೇಕು. ಹಳ್ಳಿಗಳನ್ನು ಹೀಗೆ ರೂಪಿಸಬೇಕು-ಇದು ನಮ್ಮ ಉದ್ದೇಶ್ಯ. ಇದನ್ನು ಸಾಧಿಸಲು ಆಯಾ ಹಳ್ಳಿಯ ಶಕ್ತಿ ಸಾಮರ್ಥ್ಯಗಳನ್ನು ಅನುಕೂಲತೆಗಳನ್ನು ಆರ್ಥಿಕ, ರಾಜ

ಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಉಪಯೋಗಿಸಿಕೊಳ್ಳಬೇಕು ; ಅದನ್ನು ಸಹಕಾರ ಪದ್ಧತಿಯಂತೆ ಬೆಳೆಸಬೇಕು. ಸ್ವಸಂಪೂರ್ಣ, ಸುಸಂಘಟಿತ ಗ್ರಾಮಗಳ ರಚನೆ ನಮ್ಮ ಯೋಜನೆಯ ಗುರಿ. ಆಯಾ ಸ್ಥಳದಲ್ಲಿ ಮಾಡುವ ಕೆಲಸ ಅಲ್ಲಿಗೆ ಮಾತ್ರವೇ ಉಪಯುಕ್ತವಾಗಿದ್ದರೆ ಸಾಲದು. ಇಡೀ ಯೋಜನೆಗೆ ಹೊಂದಿಕೊಳ್ಳುವಂತಿರಬೇಕು. ಆ ಕೆಲಸ ಕಟ್ಟಕಡೆಯಲ್ಲಿ ನ್ಯಾಯಪೂರ್ಣ ಪ್ರಜಾತಂತ್ರದ ಸಾಮಾಜಿಕ ವ್ಯವಸ್ಥೆಯ ಸ್ಥಾಪನೆಗೆ ದೋಹದವಾಗಬೇಕು.

**ಯೋಜನೆ ಎಂದರೇನು ?** ಯೋಜನೆ ಎಂದರೆ ಒಂದು ಉದ್ದೇಶ್ಯ ಸಾಧನೆಗಾಗಿ ಕೆಲವು ಅಂಶಗಳನ್ನು ಒಟ್ಟುಗೂಡಿಸುವುದು, ಪೋಣಿಸುವುದು. ಭಾರತದಲ್ಲಿ ನಾವು ಯಾವ ಅಂಶಗಳನ್ನು ಪೋಣಿಸಬೇಕು ? ಇತರ ದೇಶಗಳಲ್ಲಿ ಇಲ್ಲದ ಅಂಶಗಳು ನಮ್ಮ ಯೋಜನೆಯಲ್ಲಿರಬಹುದು. ಆದುದರಿಂದ ರಷ್ಯಾದ ಯೋಜನೆಯಾಗಲಿ, ಇಂಗ್ಲೆಂಡು ಅಮೆರಿಕಗಳ ಯೋಜನೆಗಳಾಗಲಿ ನಮಗೆ ಮೇಲ್ಪಂಗ್ತಿಯಾಗಬೇಕಾಗಿಲ್ಲ. ಆ ದಾರಿ ನಮ್ಮನ್ನು ಗುರಿಗೆ ಒಯ್ಯಲಿಕ್ಕೂ ಇಲ್ಲ.

ಇಂಗ್ಲೆಂಡಿನ ಯೋಜನೆ ಎಂದಾಗ ಬಹಳ ಅಚ್ಚರಿಯಾಗುತ್ತದೆ. ಅದರ ಹೆಸರನ್ನೇ ಯಾರೂ ಕೇಳಿಲ್ಲ. ಇಂಗ್ಲೀಷರು ಯೋಜನೆಮಾಡರು ; ಯೋಜನೆಯಂತೆ ಕೆಲಸ ಮಾಡುತ್ತಾರೆ. ಅದು ಅವರ ಪ್ರತಿಭೆ. ಪ್ರತಿಯೊಬ್ಬನೂ ಒಂದು ಯೋಜನೆಗೆ ಸರಿಯಾಗಿ ಕೆಲಸಮಾಡುವಂತೆ ಮಾಡುತ್ತಾನೆ. ಯೋಜನೆಗಳೇ ಇರದಿದ್ದರೆ ಇಂಗ್ಲೀಷ್ ಸಾಮ್ರಾಜ್ಯವೂ ಇರುತ್ತಿರಲಿಲ್ಲ, ಇಂಗ್ಲೀಷರ ವ್ಯಾಪಾರವೂ ಇರುತ್ತಿರಲಿಲ್ಲ. ಅವರ ಆರ್ಥಿಕ ವ್ಯೂಹಗಳು, ಸಾಮ್ರಾಜ್ಯ ವ್ಯಾಪಾರಮಾನ್ಯಗಳು, ಹಡಗಿನ ಪಡೆ, ನೌಕಾನೀತಿ–ಎಲ್ಲವೂ ಒಂದು ಯೋಜನೆಯೇ. ರಾಷ್ಟ್ರೀಯ ಯೋಜನೆಯಲ್ಲದಿರಬಹುದು. ಲಂಡನ್ ಯೋಜನೆ–ಬ್ಯಾಂಕ್ ಆಫ್ ಇಂಗ್ಲೆಂಡ್ ಯೋಜನೆಯೆ ಇರಬಹುದು ; ಅಂತೂ ಯೋಜನೆಯೇ.

ರಷ್ಯಾದ್ದೋ ಅಮೇರಿಕದ್ದೋ ಇಂಗ್ಲೆಂಡಿನದೋ ಈ ಯೋಜನೆಗಳಿಗೆಲ್ಲ ಒಂದು ಹಿನ್ನೆಲೆಯಿದೆ. ಆ ಹಿನ್ನೆಲೆಯಲ್ಲಿರುವ ಅಂಶಗಳು

ನಮ್ಮ ದೇಶದಲ್ಲಿರದಿದ್ದರೂ ಅದೇ ರೀತಿಯ ಯೋಜನೆಮಾಡಿದರೆ ನಮಗೆ ನಷ್ಟ, ವಿಫಲತೆ ತಪ್ಪಿದ್ದಲ್ಲ.

ಕ್ರಿಯಾತ್ಮಕ ಯೋಜನೆ: ಹಿಂದುಸ್ಥಾನದಲ್ಲಿ ಬಡತನ, ಕೊಳಕು, ಕಾಯಿಲೆ, ಅಜ್ಞಾನ ತುಂಬಿವೆ. ಆದುದರಿಂದ ನಮ್ಮ ಯೋಜನೆ ಈ ಕೆಲಸಗಳನ್ನು ಮುಖ್ಯವಾಗಿ ಗಮನಿಸಬೇಕು:

೧. ವ್ಯವಸಾಯ ೨. ಗ್ರಾಮೋದ್ಯೋಗ ೩. ವಸತಿ, ಶುಚಿ, ಆರೋಗ್ಯ ೪. ಗ್ರಾಮ ಶಿಕ್ಷಣ ೫. ಗ್ರಾಮದ ವ್ಯವಸ್ಥೆ ೬. ಗ್ರಾಮ ಸಂಸ್ಕೃತಿ.

ಗುರಿ: ರಷ್ಯಾ ಮೊದಲು ಯೋಜನೆ ಮಾಡಿದಾಗ ಅದು ಜಾರ್ ದೊರೆಗಳ ಅಧೀನವಲ್ಲಿತ್ತು. ಶ್ರೀಮಂತರು ಐಶ್ವರ್ಯದಲ್ಲಿ ಮುಳುಗಿದ್ದರು. ಬಡವರ ಪಾಡು ನಾಯಿಪಾಡಾಗಿತ್ತು. ಸ್ವಾಭಾವಿಕವಾಗಿಯೆ ರೈತರು 'ನಮಗೆ ಅಧಿಕಾರ ಬಂದರೆ ನಾವೂ ಐಶ್ವರ್ಯದಲ್ಲಿ ಮುಳುಗಬೇಕು' ಎಂದರು. ಐಶ್ವರ್ಯ ಎಂದರೆ ಹಲವಾರು ಬಗೆಯ ಭೋಗದಾಸೆ-ದೊಡ್ಡ ಅರಮನೆಗಳು, ಧನಧಾನ್ಯ ಸಮೃದ್ಧಿ, ವಿಲಾಸ-ಸುಖ ಇತ್ಯಾದಿ. ಅದೇ ಅವರ ಗುರಿ. ಅದಕ್ಕಾಗಿ ಅವರು ಪ್ರಯತ್ನಿಸಿದರು. ಅವರ ಯೋಜನೆ ಆ ಭೂಮಿಯಲ್ಲಿ ಮೊಳೆಯಿತು.

ಬಡತನವನ್ನು ತೊಲಗಿಸಬೇಕು ಎಂದು ಪದೇ ಪದೇ ಹೇಳುತ್ತಾರೆ. ಬಡತನ ಎಂದರೇನು? ಯಾರೋ ಹೇಳಿದಂತೆ-ಬಡತನ ಎಂದರೆ ನಿಮ ಗೇನು ಬೇಕೋ ಅದರ ಅಭಾವ. ಆದರೆ ನಿಮಗೆ ಏನು ಬೇಕು? ರೋಲ್ಸ್‌ರಾಯ್ಸ್ ಮೋಟಾರು ಬೇಕೆ? ಅದಕ್ಕೆ ಅಭಾವವಾದರೆ ನೀವು ಬಡವರೆ? ಒಬ್ಬ ಹುಡುಗಿಗೆ ತುಟಿಗೆಂಪಿನ ಡಬ್ಬಿ ಬೇಕು. ಅವನ್ನು ಕೊಳ್ಳಲು ಸಾಕಷ್ಟು ಹಣವಿಲ್ಲ. ಅವಳು ಬಡವಿಯೆ? ನಮಗೆ ಬೇಕಾದುದ ರಲ್ಲಿ ಅನಿವಾರ್ಯವಾದ ಪ್ರಾಥಮಿಕ ಪದಾರ್ಥಗಳೂ ಇವೆ, ಕೃತಕವಾಗಿ ಕಲಿತ ಚಟದ ಪದಾರ್ಥಗಳೂ ಇವೆ. ಕೆಲವು ಪದಾರ್ಥಗಳಿಲ್ಲದೆ ಮನುಷ್ಯ ಬದುಕಲೇ ಆರ. ಅವು ಅನಿವಾರ್ಯ. ಅವನ ದೇಹ ಇರಲು, ಅವನ ವ್ಯಕ್ತಿತ್ವ ಬೆಳಗಲು, ಅವು ಬೇಕೇಬೇಕು. ಇವು ಸ್ವಾಭಾವಿಕವಾದ ಅಗತ್ಯ ಗಳು. ಇವನ್ನು ನಾವು ತೃಪ್ತಿಪಡಿಸಲೇ ಬೇಕು, ಈ ಕೃತಕ ಚಟಗಳನ್ನಲ್ಲ.

ಪ್ರಾಥಮಿಕ, ಮೂಲ ಅಗತ್ಯಗಳಲ್ಲಿ ಅತ್ಯಂತ ಮುಖ್ಯವಾದುದು ಯಾವುದು? ಮೊದಲನೆಯದು ಅನ್ನ-ಆಹಾರ. ಬಟ್ಟೆಯಿಲ್ಲದಿದ್ದರೂ ಬದುಕಬಹುದು, ಅನ್ನವಿಲ್ಲದೆ ಬದುಕಲಾರೆವು. ನಮ್ಮ ದೇಶದಲ್ಲೋ ಆಗೊಮ್ಮೆ ಈಗೊಮ್ಮೆ ಬರಬಡಿಯುತ್ತಿಲ್ಲ; ಪದೇ ಪದೇ ಕ್ಷಾಮ. ಆದುದರಿಂದ ನಮ್ಮ ಯೋಜನೆಯಲ್ಲಿ ಮೂಲಭೂತ ಅಂಶ ಈ ಪೀಡೆಯ ನಿವಾರಣೆ: ಆಹಾರೋತ್ಪತ್ತಿ. ಇದನ್ನು ಹೇಗೆ ಸಾಧಿಸಬೇಕು? ಬಂಡವಾಳವನ್ನು ಚೆಲ್ಲಿಯೆ? 'ಬಂಡವಾಳ ಹಾಕಿ ನೋಡಿ, ಇಷ್ಟು ಫಲ ಬರುತ್ತದೆ' ಎಂದು ಎಷ್ಟೋ ಜನ ಹೇಳುತ್ತಾರೆ. ಇಷ್ಟು ಬಂಡವಾಳ ಹಾಕಿದರೆ ಇಷ್ಟು ಹೆಚ್ಚು ಆಹಾರೋತ್ಪತ್ತಿಯಾಗುತ್ತದೆ ಎಂದು ಪಂಡಿತರು ಲೆಕ್ಕ ಕೊಟ್ಟಿದಾರೆ. ನೆಲದಲ್ಲಿ ಹಣ ಸುರಿದರೆ ಸಾಕು, ಕೈಗೆ ಬೆಳೆ ಎದ್ದು ಬರುತ್ತದೆಯೇನೋ!

ನಮ್ಮ ದೇಶದಲ್ಲಿ ಉತ್ಪಾದನೆಯ ಮುಖ್ಯ ಅಂಶ, ಮಹತ್ತರ ಅಂಶ ಮಾನವ-ಪರಿಶ್ರಮ. ನಮಗೆ ಬೇಕಾದುದನ್ನು ಉತ್ಪತ್ತಿ ಮಾಡಿಕೊಳ್ಳಲು, ನಮ್ಮ ಹಸಿವನ್ನು ಹಿಂಗಿಸಲು ಈ ಬೃಹತ್ ಅಂಶವನ್ನು ಬಳಸಬೇಕು.

ಉತ್ಪಾದನೆಯ ವಿಧಾನದ ಬಗ್ಗೆ ಜನರಲ್ಲಿ ಒಂದು ಭಾವನೆ ಹರಡಿವೆ: ಆಧುನಿಕ ಯಂತ್ರಗಳನ್ನು ತಂದು ದೊಡ್ಡ ದೊಡ್ಡ ಕೇಂದ್ರೀಯ ಉದ್ಯೋಗಗಳನ್ನು ಗಿರಣಿಗಳನ್ನು ಸ್ಥಾಪಿಸಿದರೆ ನಮ್ಮ ಆರ್ಥಿಕ ಸ್ಥಿತಿ ಉತ್ತಮವಾಗುತ್ತದೆ. ಈ ವಿಚಾರಕ್ಕೆ ಮಣಿಯುವ ಮೊದಲು ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಆರ್ಥಿಕ ಉತ್ಪಾದನೆಯ ವ್ಯವಸ್ಥೆ ಮಾಡಲು ಅನೇಕ ಅಂಶಗಳನ್ನು ಒಟ್ಟಿಗೆ ಸೇರಿಸಿ ಸರಿಯಾಗಿ ಜೋಡಿಸಬೇಕು. ಆ ಅಂಶಗಳಲ್ಲಿ ಮುಖ್ಯವಾದುವು ಪ್ರಾಕೃತಿಕ ಸಾಧನಗಳು, ಬಂಡವಾಳದ ಏರ್ಪಾಟು, ಶ್ರಮ. ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಇವನ್ನು ಬೇರೆ ಬೇರೆ ಪ್ರಮಾಣದಲ್ಲಿ ಜೋಡಿಸಬೇಕು. ಇಂಗ್ಲೆಂಡಿನಲ್ಲಿ ಔದ್ಯೋಗಿಕ ಕ್ರಾಂತಿಯಾದಾಗ ಬಂಡವಾಳ ಸಮೃದ್ಧಿಯಾಗಿತ್ತು. ಆದುದರಿಂದ ಅವರ ಉತ್ಪಾದನೆಯ ಪದ್ಧತಿಯಲ್ಲಿ ಬಂಡವಾಳದ ಪ್ರಭಾವ ಹೆಚ್ಚು. ಅಮೆರಿಕದಲ್ಲಿ ದುಡಿಯುವ ಜನ ಕಡಮೆ, ಪ್ರಾಕೃತಿಕ ಸಾಧನ ಸಾಮುಗ್ರಿ ಯಥೇಷ್ಟ ಆಗಿತ್ತು. ಆದುದರಿಂದ ಅವರು ಸ್ವಲ್ಪ ದುಡಿದರೆ ಹೆಚ್ಚು ಫಲ ಬರುವ

ಉಪಾಯ ಕಂಡುಹಿಡಿದರು: ಯಂತ್ರಗಳು ಬಂದವು. ಆ ರೀತಿಯ ಆರ್ಥಿಕ ವ್ಯವಸ್ಥೆಯನ್ನು ಮಾಡಿದರೆ ಹೆಚ್ಚು ದುಡಿತವೆ ಬೇಕಾಗದಂಥ ಸ್ಥಿತಿ ಬರುತ್ತದೆ. ಎಂದರೆ ದುಡಿತವಿಲ್ಲದಾಗ ನಿರುದ್ಯೋಗ ಹೆಚ್ಚುತ್ತದೆ. ಆದುದರಿಂದ ಬಂಡವಾಳ ಕಡಮೆ, ದುಡಿಯುವ ಜನ ಹೆಚ್ಚು ಇರುವ ನಮ್ಮ ದೇಶದಲ್ಲಿ ಇಂಗ್ಲೆಂಡು ಅಮೆರಿಕಗಳ ರೀತಿ ಅಸಂಗತವಾಗುತ್ತದೆ.

ಮನುಷ್ಯನೇ ಒಂದು ಸೂಕ್ಷ್ಮ, ಕುಶಲತರ ಯಂತ್ರ. ಜಡ ಯಂತ್ರಕ್ಕೂ ಮನುಷ್ಯನಿಗೂ ಒಂದು ಭೇದವಿದೆ. ಯಂತ್ರದ ಹಾಗಲ್ಲದೆ ದುಡಿಯಲಿ ಬಿಡಲಿ ಮನುಷ್ಯನಿಗೆ ಹೊಟ್ಟೆಗೆ ಹಾಕುತ್ತಿರಬೇಕು. ಒಂದು ವೇಳೆ ಯಾಂತ್ರಿಕ ಉಪಕರಣಗಳಿಂದಲೇ ದಿನ ಬಳಕೆಯ ಪದಾರ್ಥಗಳನ್ನು ನಿರ್ಮಿಸಿದರೂ ಮನುಷ್ಯರ ಹೊಟ್ಟೆಗೆ ಹಾಕುವುದೇನು ತಪ್ಪದು. ಆದುದರಿಂದ ನಮ್ಮಲ್ಲಿ ಮುಖ್ಯವಾಗಿ ಇರುವ ಅಂಶಗಳನ್ನು ಸರಿಯಾಗಿ ಸಾರ್ಥಕವಾಗಿ ಉಪಯೋಗಿಸಬೇಕಾದರೆ, ನಮ್ಮ ದೇಶದ ಉತ್ಪಾದನಾ ಕ್ರಮದಲ್ಲಿ ವಿಶೇಷವಾಗಿ ಮನುಷ್ಯ-ಬಲವನ್ನು ಉಪಯೋಗಿಸುವ ಪದ್ಧತಿ ಸರ್ವಸಾಮಾನ್ಯವಾಗಬೇಕು. ಈ ಪದ್ಧತಿಯನ್ನು ಅನುಸರಿಸದಿದ್ದರೆ ನಮ್ಮ ದೇಶದ ಅಪಾರ ಶ್ರಮಸಂಪತ್ತನ್ನು ಕಡಲಿಗೆ ಸುರಿದ ಪಾಪಕ್ಕೆ ನಾವು ಗುರಿಯಾಗುತ್ತೇವೆ. ಹಾಗೆ ಮಾಡಿದರೆ ಎಂದಿಗೂ ನಮಗೆ ಪುರೋಭಿವೃದ್ಧಿಯಿಲ್ಲ.

ಬರೀ ಪದಾರ್ಥಗಳ ಉತ್ಪತ್ತಿಯಿಂದಲೇ ಒಂದು ರಾಷ್ಟ್ರ ಸುಖವಾಗಿ ಕ್ಷೇಮವಾಗಿ ಇರಲಾರದು. ಜನರಿಗೆ ಬೇಕಾದುದನ್ನು ಒದಗಿಸುವ ಕೆಲಸದಲ್ಲಿ ಮಾತ್ರ ಉತ್ಪಾದನೆಯ ಪ್ರಾಧಾನ್ಯ. ಆದುದರಿಂದ ಜನರು ತಮಗೆ ಬೇಕಾದ ಪದಾರ್ಥಗಳನ್ನು ತಾವೇ ಉತ್ಪತ್ತಿ ಮಾಡಿಕೊಳ್ಳುವಂತೆ ಸಮಾಜವನ್ನು ರೂಪುಗೊಳಿಸಬೇಕಾದುದು ಮೊದಲನೆಯ ಕೆಲಸ. ಅವರ ಹೊಟ್ಟೆಗೆ ಸಾಕಾಗುವಷ್ಟು ಆಹಾರ, ಚಳಿಮಳೆಗಳ ಬಾಧೆಗೆ ತಡೆದುಕೊಳ್ಳಲು ಬಟ್ಟೆ, ಇರಲು ತಕ್ಕ ವಸತಿ—ಇಷ್ಟನ್ನು ಅವರು ಮಾಡಿಕೊಳ್ಳಬೇಕು. ಆಮೇಲೆ, ಅವರಿಗೆ ಔಷಧೋಪಚಾರ, ಶಿಕ್ಷಣ, ಇತರ ಸಾಮಾಜಿಕ ಅನುಕೂಲತೆಗಳನ್ನು ಒದಗಿಸಿ ಕೊಟ್ಟು ಜನರ ದೈಹಿಕ ಮಾನಸಿಕ ನೈತಿಕ ಯೋಗಕ್ಷೇಮಕ್ಕೆ ಏರ್ಪಾಟು ಮಾಡಬೇಕು. ಈ

ಮೂಲಭೂತ ಅಗತ್ಯಗಳನ್ನು ತೃಪ್ತಿಗೊಳಿಸುವ ಮೊದಲೇ ಪರದೇಶಗಳಲ್ಲಿ ವ್ಯಾಪಾರ ಮಾಡಲು ಪದಾರ್ಥಗಳನ್ನು ಉತ್ಪತ್ತಿ ಮಾಡುವುದು ಮೂರ್ಖತನ. ಬರೀ ಹಣಕ್ಕೇನು ಯೋಗ್ಯತೆ? ಯಾರಿಗೆ ತೃಪ್ತಿ? ಹಣವನ್ನೆಣಿಸುವ ಲೋಭಿಯ ಆಸೆಯೊಂದು ತೃಪ್ತಿಯಾದೀತು. ಹಣವೇ ಗುರಿಯಲ್ಲ. ಜನರಿಗೆ ಕೈ ತುಂಬಾ ಹಣ ಸಿಗುವಂತೆ ಮಾಡಿ ಅವರು ಹೊಟ್ಟೆಗಿಲ್ಲದೆ ಒಣಗುವಂತೆ ಮಾಡಿದರೆ ನಮ್ಮ ವ್ಯವಸ್ಥೆ ಅವಿವೇಕದ್ದು ಎನಿಸಿಕೊಳ್ಳುತ್ತದೆ. ಅದುದರಿಂದ ಮೊಟ್ಟಮೊದಲು ಜನರಿಗೆ ಸಮೃದ್ಧಿಯಾಗಿ ಅನ್ನ, ಧಾರಾಳವಾಗಿ ಬಟ್ಟೆ, ಅನುಕೂಲವಾಗಿ ಮನೆ ಸಿಗುವಂತೆ ನೋಡಿಕೊಳ್ಳಬೇಕಾದುದು ನಮ್ಮ ಕರ್ತವ್ಯ. ಇವೆಲ್ಲವೂ ಸಾಕಷ್ಟು ತೃಪ್ತಿಯಾದ ಮೇಲೆ ಉಳಿದ ಉತ್ಪಾದನೆ. ದೇಶದ ಆರ್ಥಿಕ ವ್ಯವಹಾರವನ್ನು ಈ ದಾರಿಗೆ ತಿರುಗಿಸುವುದು ಸರಕಾರದ ಕೆಲಸ. ಇಲ್ಲದಿದ್ದರೆ ಅದಕ್ಕೆ ಆ ಹೆಸರೇ ಸಲ್ಲದು.

ಬರೀ ದೈಹಿಕ ಆವಶ್ಯಕತೆಗಳ ತೃಪ್ತಿಯಾದರೆ ಸಾಲದು. ಜನರಲ್ಲಿ ಸ್ವಸಹಾಯ, ಪರಸ್ಪರ ಸಹಕಾರ, ಸಾಮಾಜಿಕ ಸಂಘಟನೆಯ ಅರಿವು ಮೂಡುವಂತೆ ಮಾಡಬೇಕು. ಇದನ್ನು ಮಾಡಿದರೆ ಸ್ವಸಂಪೂರ್ಣತೆಯ ಮೂಲಕ ಸ್ವರಾಜ್ಯದ ಹಾದಿಯಲ್ಲಿ ಬಹಳ ದೂರ ಸಾಗಿಹೋದಂತೆ.

ಇನ್ನೊಂದು ಮಾತನ್ನು ನೆನಪಿಡಬೇಕು. ನಮ್ಮ ಯೋಜನೆ ಕೆಲವರಿಗಾಗಿ ಮಾತ್ರವಲ್ಲ, ದೇಶದಲ್ಲಿರುವ ಪ್ರತಿಯೊಬ್ಬ ಮನುಷ್ಯನಿಗೂ. ನಾವು ಮಾಡುವ ಯೋಜನೆ ಸಾರ್ಥಕವಾಗಬೇಕಾದರೆ ಭಾರತದ ಪ್ರತಿಯೊಬ್ಬ ಜೀವಂತ ಮನುಷ್ಯನಿಗೂ ಸಂಬಂಧಿಸಿದುದಾಗಿರಬೇಕು. ಬಂಡವಾಳ ಅಭಾವವಾದ ಈ ಬಡದೇಶದಲ್ಲಿ ಹೀಗೆ ವಿಶಾಲವಾಗಿ ಮಾಡಿದ ಯೋಜನೆ ಎಲ್ಲಿಂದಲೋ ಬಂಡವಾಳ ಬರುತ್ತದೆ ಎಂಬ ಭರವಸೆಯಿಂದಿರಬಾರದು. ಬಂಡವಾಳದ ತಳಹದಿಯ ಮೇಲೆ ಹಾಕಿದ ಯೋಜನೆಗಳೂ ಭಾರತದಲ್ಲಿ ಅಸಂಬದ್ಧ. ಹಾಗೆಯೇ ಪ್ರಾಥಮಿಕ ಅಗತ್ಯವಾದ ಆಹಾರವನ್ನು ಒದಗಿಸುವ ಯೋಜನೆ ಮಾಡದ, ಭಾರತದ ಅಖಂಡ ಶ್ರಮಸಂಪತ್ತನ್ನು ಉಪಯೋಗಿಸದ, ಯಾವ ಯೋಜನೆಯೂ ಸುಸಂಗತವಲ್ಲ. ಪಶ್ಚಿಮ ದೇಶದ ಯೋಜನೆಗಳೆಲ್ಲವೂ ಪದಾರ್ಥ ಪ್ರಧಾನ. ಪ್ರಕೃತಿ

ಸಂಪತ್ತನ್ನು ಬಾಚಿಕೊಳ್ಳಬೇಕೆಂಬುದು ಅದರ ಉದ್ದೇಶ. ಏತಕ್ಕಾಗಿಯೋ? ಅವರಿಗೆ ಅದು ಗೊತ್ತಿಲ್ಲ. ಕುರ್ಚಿ-ಮೇಜುಗಳು ನಮ್ಮ ಪ್ರಾಥಮಿಕ ಆವಶ್ಯಕತೆಗಳನ್ನು ತೃಪ್ತಿಪಡಿಸುತ್ತವೆಯೆ?

ಭಾರತಕ್ಕೆ ಯೋಜನೆ ಮಾಡಬೇಕೆಂದರೆ ಅದು ಮೊಟ್ಟಮೊದಲು ರೈತನ ಸುತ್ತಲೂ ಹರಡಬೇಕು. ಆಮೇಲೆ ಅಲ್ಲಿಂದ ಇಡೀ ದೇಶಕ್ಕೇ ವ್ಯಾಪಿಸಬಹುದು. ಕಡೆಗೂ ನಾವು ಇಂಗ್ಲೆಂಡು, ಅಮೇರಿಕಗಳಷ್ಟು ಹಣಗಾರರಾಗದಿರಬಹುದು. ಆದರೆ ಆಹಾರ ಸಮೃದ್ಧರಾಗುತ್ತೇವೆ. ಐದು ವರ್ಷದ ಕೆಳಗೆ ಇಂಗ್ಲೆಂಡು ಹೊಟ್ಟೆಗೇ ಇಲ್ಲದೆ ತೊಳಲುತ್ತಿತ್ತು.

ಆದುದರಿಂದ ಹಿಂದುಸ್ಥಾನಕ್ಕೆ ಯಾವ ಯೋಜನೆಯನ್ನೇ ಮಾಡಲಿ, ಅನ್ನ-ಬಟ್ಟೆಗಳ ಸ್ವಸಂಪೂರ್ಣತೆ ಅದರ ಮುಖ್ಯ ಲಕ್ಷಣವಾಗಿರಬೇಕು. ಪ್ರತಿಯೊಂದು ಹಳ್ಳಿಯೂ ಅನ್ನ ಬಟ್ಟೆಗಳಲ್ಲಿ ಸ್ವಸಂಪೂರ್ಣವಲ್ಲದಿದ್ದರೆ ಸ್ವರಾಜ್ಯವಿದ್ದೂ ಪ್ರಯೋಜನವಿಲ್ಲ. ಪ್ರತಿಯೊಬ್ಬರಿಗೂ ಸಾಕಾಗುವಷ್ಟು ಅನ್ನ ಬಟ್ಟೆ ಸಿಗುವ ಭರವಸೆ ಕೊಡಬೇಕು. ಹಾಗೆ ಮಾಡದಿದ್ದರೆ ಅದು ನಮ್ಮ ದೇಶಕ್ಕೆ ತಕ್ಕ ಯೋಜನೆಯಲ್ಲ. ಟಾಟಾ-ಬಿರ್ಲಾ ಯೋಜನೆಗೆ, ಅದರಂಥ ಯೋಜನೆಗಳಿಗೆ ಕೋಟಿ ಕೋಟಿ ರೂಪಾಯಿ ಬೇಕು, ಮೊದಲಿಡಲಿಕ್ಕೆ. ನಮ್ಮ ಯೋಜನೆಗೆ ಅಷ್ಟು ಹಣ ಬೇಕಾಗಿಲ್ಲ. ನಮ್ಮಲ್ಲಿಲ್ಲದ ಪದಾರ್ಥ ಮುಖ್ಯವಲ್ಲವಲ್ಲ ನಮ್ಮ ಯೋಜನೆಯಲ್ಲಿ. ನಮ್ಮ ಜನರ ಚಟುವಟಿಕೆಯನ್ನು ಕೆಲಸವನ್ನು ಮತ್ತೆ ಸರಿಯಾದ ದಾರಿಗೆ ತಿರುಗಿಸುತ್ತಿದೇವೆ. ಅವರಿಗೆ ಮಾರ್ಗದರ್ಶನ ಮಾಡುತ್ತೇವೆ. ಅವರ ಸಹಜ ಕಾರ್ಯಗಳನ್ನೇ ನಿಯಮಗೊಳಿಸುತ್ತಿದೇವೆ. ಈ ಮೂಲಕ ಕೋಟಿಗಟ್ಟಲೆ ಜನರ ಕಾರ್ಯಶಕ್ತಿಯನ್ನು ಉಚಿತ, ಅಪೇಕ್ಷಣೀಯ ಮಾರ್ಗದಲ್ಲಿ ನಡಸುತ್ತೇವೆ.

# ಪ್ರಕರಣ ೨

## ವ್ಯವಸಾಯ

ಪ್ರಥಮ ಯೋಗಕ್ಷೇಮ ಅನ್ನ-ಬಟ್ಟೆಯದು. ಇದಕ್ಕಾಗಿ ನಾವು ವ್ಯವಸಾಯ-ಗ್ರಾಮೋದ್ಯೋಗಗಳ ಮೇಲೇ ದೃಷ್ಟಿಯನ್ನು ಕೇಂದ್ರೀಕರಿಸ ಬೇಕು. ವ್ಯವಸಾಯದ ಉತ್ಪತ್ತಿಯನ್ನು ನಿರ್ದಿಷ್ಟಗೊಳಿಸಿ ನಿಯಂತ್ರಣ ಮಾಡಬೇಕು. ಹಾಗೆ ಮಾಡುವಾಗ ಎರಡು ಮಾತನ್ನು ಗಮನಿಸಬೇಕು: ೧. ಆಯಾ ಸ್ಥಳಕ್ಕೆ ಬೇಕಾದ ಆಹಾರವನ್ನೂ, ದಿನ ಬಳಕೆಯ ಪದಾರ್ಥ ಗಳಿಗೆ ಅಗತ್ಯವಾದ (ಕಚ್ಚಾಮಾಲು) ಮೂಲ ವಸ್ತುಗಳನ್ನೂ ಉತ್ಪತ್ತಿ ಮಾಡಬೇಕೇ ವಿನಾ ಗಿರಣಿ-ಕಾರಖಾನೆಗಳಿಗಲ್ಲ. ಉದಾ: ಗಿರಣಿಗಳಿಗೆ ಬೇಕಾದ ಮರಗಬ್ಬನ್ನೋ ಉದ್ದ ತೊಳೆಯ ದೊಡ್ಡ ಹತ್ತಿಯನ್ನೋ ಬೆಳೆ ಯುದೆ, ಹಳ್ಳಿಯ ಆಲೆ ಮನೆಯಲ್ಲಿ ಗಾಣವಾಡಲು ಅನುಕೂಲವಾದ ಕಬ್ಬನ್ನೂ ಕೈರಾಟೆಯಿಂದ ನೂಲಲು ಅನುಕೂಲವಾದ ಸಣ್ಣ ತೊಳೆ ಹತ್ತಿ ಯನ್ನೂ ಬೆಳೆಯಬೇಕು. ಹೆಚ್ಚು ಭೂಮಿಯಿದ್ದರೆ ಪಕ್ಕದ ಜಿಲ್ಲೆಗಳವರಿಗೆ ಬೇಕಾದ ಬೆಳೆಗಳನ್ನು ಬೆಳೆಯಬಹುದು. ಗಿರಣಿ ಕಬ್ಬು, ಹೊಗೆಸೊಪ್ಪು, ಸೆಣಬು ಮುಂತಾದ ವ್ಯಾಪಾರದ ಪೈರನ್ನು ಆದಷ್ಟೂ ಕಡಮೆ ಮಾಡಬೇಕು. ಅಗತ್ಯವಾದರೆ ಪೂರಾ ನಿಲ್ಲಿಸಿಯೇ ಬಿಡಬೇಕು. ರೈತರು ಈ ನಿಯಮ ವನ್ನು ಅನುಸರಿಸುವಂತೆ ಮಾಡಲು ಸರಕಾರ ಆಯಾ ಪ್ರದೇಶದ ಯೋಜ ನೆಗೆ ಅನುಸಾರವಾಗಿ ಇಂಥದೇ ಬೆಳೆ ಬೆಳೆಯಬೇಕೆಂದು ನಿಗದಿ ಮಾಡ ಬೇಕು, ಅಪ್ಪಣೆ-ಚೀಟಿಗಳನ್ನು ಕೊಡಬೇಕು. ವ್ಯಾಪಾರದ ಬೆಳೆ ಬೆಳೆದರೆ ಆ ಭೂಮಿಗೆ ಹೆಚ್ಚು ಕಂದಾಯ ಹಾಕಬೇಕು. ಆಗ ಆಹಾರದ ಬೆಳೆಯ ಬದಲು ವ್ಯಾಪಾರದ ಬೆಳೆ ಬೆಳೆಯುವ ಹುರುಪು ರೈತನಿಗೆ ಕಡಮೆಯಾಗು ತ್ತದೆ. ಕೈಗಾರಿಕೆಯ ಪದಾರ್ಥಗಳಿಗೂ ವ್ಯವಸಾಯದ ಪದಾರ್ಥಗಳಿಗೂ ಬೆಲೆ ಸಮಾನವಾಗಿರುವಂತೆ ಬೆಲೆಯ ನಿಗದಿ-ನಿಯಂತ್ರಣ ಮಾಡಬೇಕು.

ಹೊಗೆಸೊಪ್ಪು, ಸೆಣಬು, ಕಬ್ಬು ಮುಂತಾದವು ಎರಡು ರೀತಿ ನಷ್ಟ ಮಾಡುತ್ತವೆ. ಮನುಷ್ಯನಿಗೂ ಆಹಾರ ಕಡಮೆ ಮಾಡುತ್ತವೆ, ದನಗಳಿಗೂ ಆಹಾರ ಲೋಪ ಮಾಡುತ್ತವೆ. ಇವನ್ನು ಬಿಟ್ಟು ಆಹಾರದ ಪೈರನ್ನು ಬೆಳೆದರೆ ದನಕ್ಕೆ ಮೇವು ಆಗುತ್ತದೆ.

ಧಾನ್ಯ ಹಾಲು, ಎರಡೂ ಮೂಲ ಪದಾರ್ಥಗಳು, ಪ್ರಾಥಮಿಕ ಪದಾರ್ಥಗಳು. ಪಿಷ್ಟಕ್ಕಾಗಿ ಅದನ್ನು, ಕೇಸಿನ್‌ಗಾಗಿ ಇದನ್ನು, ಬಳಸಿ ದುಡ್ಡು ಮಾಡಲು ಬಿಡಬಾರದು. ಗಿರಣಿ ಕಬ್ಬಿನ ಬೆಳೆ ಕಡಮೆಯಾದರೆ ಬೆಲ್ಲದ ಉತ್ಪತ್ತಿ ಕಡಮೆಬೀಳಬಹುದು. ಈಗ ಹೆಂಡಕ್ಕಾಗಿ ಉಪಯೋಗಿಸುತ್ತಿರುವ ತಾಳೆಗಿಡಗಳಿಂದ ಬೆಲ್ಲ ಮಾಡಬಹುದು. ಬಂಜರುಭೂಮಿಯುದ ಬೇಕಾದ ಹಾಗೆ ಬೆಳೆಯುವ ಬೇರೆ ಮರಗಳಿಂದ ಬೆಲ್ಲವನ್ನು ಮಾಡಿ, ಈಗ ಕಬ್ಬು ಬೆಳೆಯುವ ಉತ್ತಮ ಭೂಮಿಯನ್ನು ಧಾನ್ಯ, ಹಣ್ಣು ಹಂಪಲು, ಕಾಯಿಪಲ್ಯ ಬೆಳೆಸಲು ಉಪಯೋಗಿಸಬಹುದು. ದೇಶಕ್ಕೆ ಈ ಪದಾರ್ಥ ಈಗ ಅತ್ಯಗತ್ಯ.

ಪ್ರಥಮತಃ, ಉಚಿತವಾದ ಆಹಾರ. ಭಾರತದಲ್ಲಿ ಈಗ ಬರೀ ಧಾನ್ಯ ತಿನ್ನುವವರು ಅನೇಕರಿದಾರೆ. ಬರೀ ಧಾನ್ಯಗಳಿಂದ ದೇಹಕ್ಕೆ ಬೇಕಾದುದೆಲ್ಲವೂ ಒಂದೇ ಕಡೆ ಸಿಗದು. ಎಲ್ಲಾ ಅಂಶಗಳೂ ಇರುವ ಪೂರ್ಣಾಹಾರಕ್ಕೆ ಬೇಕಾದುದನ್ನು ಬೆಳೆಯುವ ಹಾಗೆ ಪ್ರತಿಯೊಂದು ಹಳ್ಳಿಯ ವ್ಯವಸಾಯವನ್ನು ವ್ಯವಸ್ಥೆಗೊಳಿಸಿದರೆ, ಆಗ ಸರ್ವಾಂಶ ಪೂರ್ಣ ಆಹಾರ ನಮಗೆ ಸಿಗುತ್ತದೆ. ಒಂದೊಂದು ಬಗೆಯ ಆಹಾರ ಪದಾರ್ಥಕ್ಕೆ ಎಷ್ಟು ಎಕರೆ ಬೇಕೆಂಬುದನ್ನು ಲೆಕ್ಕ ಹಾಕಿ ನಿರ್ದಿಷ್ಟಗೊಳಿಸಬಹುದು.

ಸಾಧಾರಣವಾಗಿ ಒಂದು ಎಕರೆ ನೆಲದಲ್ಲಿ ಬೇರೆ ಏನು ಬೆಳೆದರೂ ಧಾನ್ಯವನ್ನು ಬೆಳೆದರೆ ಸಿಗುವಷ್ಟು ಆಹಾರ ಸಿಗುವುದಿಲ್ಲವೆಂದು ತಿಳಿದಿದಾರೆ. ಧಾನ್ಯದಿಂದ ಆಹಾರದಲ್ಲಿ ಉರವಲು ಹೆಚ್ಚೇ ವಿನಾ ಪುಷ್ಟಿ ಹೆಚ್ಚಲ್ಲ. ಬರೀ ಧಾನ್ಯದಿಂದಲೇ ಉಷ್ಣ-ಪುಷ್ಟಿ ಎರಡೂ ಬೇಕು ಎಂದರೆ ಬಹಳ ಹೆಚ್ಚು ಧಾನ್ಯವನ್ನು ಬಳಸಬೇಕಾಗಿ ಬರುತ್ತದೆ. ಅದರ ಜೊತೆಗೆ ಹಣ್ಣು ಹಂಪಲು, ಕಾಯಿಪಲ್ಯ, ಹಾಲು ಮೊಸರು, ಬೆಣ್ಣೆ ತುಪ್ಪ, ಕಾಯಿ ಬೆಲ್ಲ,

ಎಣ್ಣೆ ಬೀಜ ಮುಂತಾದುವನ್ನು ಸೇರಿಸಿಕೊಂಡರೆ, ಧಾನ್ಯಕ್ಕಿಂತ ಬಹಳ ಕಡಮೆ ಪ್ರಮಾಣದಲ್ಲಿ ಬಳಸಿದರೂ ಇವುಗಳಿಂದ ಹೆಚ್ಚು ಪುಷ್ಟಿ ಬರುತ್ತದೆ. ಒಂದು ಎಕರೆ ಧಾನ್ಯದ ಪೈರಿಗಿಂತ ಉಷ್ಣದ ಉತ್ಪತ್ತಿಯಲ್ಲಿಯೂ ಒಂದೆಕರೆ ಆಲೂಗಡ್ಡೆಯಂಥ ಗಡ್ಡೆಗೆಣಸು, ಬೆಲ್ಲದ ಪೈರು ಸ್ವಲ್ಪ ಹೆಚ್ಚೇ. ಆದುದ ರಿಂದ ಸರ್ವಾಂಶ ಪೂರ್ಣವಾದ ಸಮಗ್ರ ಆಹಾರ ಪದ್ಧತಿ ನಮಗೆ ಉಭಯ ಫಲ ಕೊಟ್ಟೀತು, ನಮ್ಮ ಸಮಸ್ಯೆಯನ್ನು ಬಿಡಿಸೀತು. ದೇಹಕ್ಕೆ ಬೇಕಾದ ಪದಾರ್ಥಗಳನ್ನೆಲ್ಲ ಸರಿಯಾದ ಪ್ರಮಾಣದಲ್ಲಿ ಕೊಟ್ಟು ಅದನ್ನು ಆರೋಗ್ಯವಂತವಾಗಿ ಸಶಕ್ತವಾಗಿ ಇಟ್ಟೀತು; ತಲಾ ಎಷ್ಟು ಭೂಮಿ ಬೇಕೆಂಬುದರ ಪ್ರಮಾಣವನ್ನೂ ಕಡಮೆ ಮಾಡೀತು.* ಈಗ ಭಾರತ ದಲ್ಲಿ ಆಹಾರದ ಉತ್ಪತ್ತಿಗಾಗಿ ಸಿಗುತ್ತಿರುವ ಭೂಮಿ ತಲಾ ೦.೭ ಎಕರೆ ಯಷ್ಟು. ಈಗಿನ ಬೇಸಾಯದ ಪ್ರಕಾರ ನಮ್ಮ ಆಹಾರಕ್ಕೇ ಸಾಲದ ಈ ೦.೭ ಎಕರೆ ಭೂಮಿಯೇ, ವ್ಯವಸಾಯವನ್ನು ಪುನರ್ವ್ಯವಸ್ಥೆಗೊಳಿಸಿ ದಾಗ ಸಾಕಾಗಬಹುದು. ಅಲ್ಲಲ್ಲಿಯ ಭೂಮಿಯನ್ನು ಆಯಾ ಸ್ಥಳದ ಜನರಿಗೆ ಅಗತ್ಯವಾದ ಸಮಗ್ರ ಆಹಾರ, ಬಟ್ಟೆ, ಇತರ ಅವಶ್ಯಕತೆಗಳಿಗೆ ಸರಿಯಾಗಿ ಕೃಷಿ ಮಾಡುವಂತೆ ಏರ್ಪಡಿಸಬೇಕು. ಈ ಬೆಳೆಗಳ ಪ್ರಮಾಣ ವನ್ನು ನಿರ್ಧರಿಸಿ ರೈತರು ತಮ್ಮ ಹೊಲಗಳಲ್ಲಿ ಇಂಥಿಂಥ ಬೆಳೆಯನ್ನೇ ಬೆಳೆಯಬೇಕೆಂದು ಗೊತ್ತು ಮಾಡಬೇಕು. ಒಂದು ಲಕ್ಷ ಜನರಿಗೆ ಸಮಗ್ರ ಆಹಾರವನ್ನು ಒದಗಿಸಲು ವ್ಯವಸಾಯವನ್ನು ಯಾವ ಪ್ರಕಾರ ವ್ಯವಸ್ಥೆ ಗೊಳಿಸಬೇಕೋ, ಮುಂದೆ ಕೊಟ್ಟಿರುವ ಪಟ್ಟಿಯಿಂದ ವಿಶದವಾಗುತ್ತದೆ. ಸಸ್ಯಾಹಾರಿಗಳಾದ ಜನರಿಗೆ ದಿನವೊಂದಕ್ಕೆ ತಲಾ ೨,೮೭೦ ಕ್ಯಾಲರಿ ಗಳನ್ನೂ ವರ್ಷಕ್ಕೆ ೨೫ ಗಜ ಬಟ್ಟೆಯನ್ನೂ ಒದಗಿಸಲು ಅದರಲ್ಲಿ ಏರ್ಪಾಟು ಇದೆ. ಮಾಂಸಾಹಾರಿಗಳು ೬ ಔನ್ಸು ಹಾಲಿಗೆ ಬದಲಾಗಿ ೯ ಔನ್ಸು ಮಾಂಸವನ್ನೋ ಮೊಟ್ಟೆಯನ್ನೋ ಮೀನನ್ನೋ ಬಳಸಬಹುದು.

---

* ಒಂದು ಎಕರೆ ನೆಲದಲ್ಲಿ:

ಮಾಂಸದ ಉತ್ಪತ್ತಿ ೨೫೦ ಪೌಂಡು

ಧಾನ್ಯದ ಉತ್ಪತ್ತಿ ೨,೫೦೦ ಪೌಂಡು

ಕಾಯಿಪಲ್ಯದ ಉತ್ಪತ್ತಿ ೨೫,೦೦೦ ಪೌಂಡು

# ಒಂದು ಲಕ್ಷ ಜನರಿಗೆ ವ್ಯವಸಾಯದ ಹಂಚಿಕೆ

| | ದಿನಕ್ಕೆ ಔನ್ಸು | ಎಕರೆ | ವರ್ಷಕ್ಕೆ ಪೌಂಡು | ಲಕ್ಷ ಜನಕ್ಕೆ | | ಒಟ್ಟು | ಹಂಚಿಕೆ ಶೇಕಡಾ |
|---|---|---|---|---|---|---|---|
| | | | | ಬೇಕಾದ ಹೊಲ | ಬೀಜ ಬೀಳು 15% | | |
| ೧. ಆಹಾರ | | | | | | | |
| ಧಾನ್ಯ | ೧೬ | ೧೬೦೦೦ | ೩೬೫.೦೦ | ೪೩,೪೦೦ | ೬,೫೦೦ | ೪೯,೯೧೦ | ೬೫.೨ |
| ಬೇಳೆ | ೨ | ೨೦೦ | ೪೫.೬೦ | ೫,೪೦೦ | ೮೧೦ | ೬,೨೧೦ | ೮.೦ |
| ಬೆಲ್ಲ | ೨ | ೨೦೦ | ೪೫.೬೦ | ೧,೨೦೦ | ೧೮೦ | ೧,೩೮೦ | ೧.೮ |
| ಬೀಜ | ೧ | ೧೪೫ | ೨೨.೮೦ | ೨,೬೦೦ | ೨೯೦ | ೨೯೯೦ } | ೮.೪ |
| ಎಣ್ಣೆ | ೧/೨ | ೨೫೫ | ೧೧.೪೦ | ೩,೦೦೦ | ೪೫೦ | ೩೪೫೦ } | — |
| ತುಪ್ಪ | ೧/೨ | — | ೧೧.೪೦ | — | — | — | — |
| ಹಾಲು | ೧೨ | ೨೪೦ | ೨೭೩.೭೫ | — | — | — | — |
| ಕಾಯಿಪಲ್ಯ | ೮ | ೪೮ | ೧೮೨.೫೦ | ೧,೬೦೦ | ೨೪೦ | ೧,೮೪೦ | ೨.೪ |
| ಗಡ್ಡೆಗೆಣಸು | ೪ | ೧೦೦ | ೯೧.೨೫ | ೧,೦೦೦ | ೧೫೦ | ೧,೧೫೦ | ೧.೫ |
| ಹಣ್ಣು | ೪ | ೫೨ | ೯೧.೨೫ | ೯೦೦ | ೧೩೫ | ೧,೦೩೫ | ೧.೪ |
| ೨. ಬಟ್ಟೆ | | | | | | | |
| ಹತ್ತಿ | | | ೧೨.೫೦ | ೭,೫೦೦ | ೧,೧೨೫ | ೮೬೩೫ | ೧೦.೩ |
| | ಒಟ್ಟು | | | ೬೬,೬೦೦ | ೯,೯೯೦ | ೭೬,೫೯೦ | ೧೦೦ |

ಇಡೀ ಭಾರತದ ಅಂಕೆ ಅಂಶಗಳ ಆಧಾರದಿಂದ ಸ್ಥೂಲವಾಗಿ ಲೆಕ್ಕ ಮಾಡಿ ಕೊಟ್ಟಿದೆ. ಇದು ಆಯಾ ಸ್ಥಳಕ್ಕೆ ತಕ್ಕಂತೆ ವ್ಯತ್ಯಾಸವಾಗುತ್ತದೆ. ತಲಾ ೧೬ ಔನ್ಸ ಧಾನ್ಯ ಎಂದರೆ ನಮ್ಮ ಭೂಮಿಯಲ್ಲಿ ೬೫.೨% ರಷ್ಟು ಧಾನ್ಯದ ಬೆಳೆಗೇ ಆಗುತ್ತದೆ. ಅದೇ ರೀತಿ, ತಲಾ ೨ ಔನ್ಸು ಬೇಳೆ ಎಂದರೆ ಶೇ ೮ ರಷ್ಟು ಭೂಮಿ ಆ ಬೆಳೆಗೆ.

ಒಂದು ಲಕ್ಷ ಜನರಿಗಾಗಿ ಈ ಪಟ್ಟಿಯಲ್ಲಿ ಲೆಕ್ಕ ಹಾಕಿದೆ. ಒಂದು ಹಳ್ಳಿ ಅಥವಾ ನಾಲ್ಕಾರು ಹಳ್ಳಿಗಳ ಗುಂಪು ಈ ಪ್ರಮಾಣದಲ್ಲಿ ಬೆಳೆ ಬೆಳೆದರೆ ಜನರ ಸಾಮಾನ್ಯ ಪ್ರಾಥಮಿಕ ಅಗತ್ಯಗಳೆಲ್ಲ ತೃಪ್ತಿಯಾಗುತ್ತವೆ. ಆದುದರಿಂದ ನಾವು ಇವನ್ನು ಬೆಳೆಯಲು ಯತ್ನಿಸಬೇಕು. ಭೂಮಿ ಸಮಾಜದ ಸೊತ್ತು. ಅದನ್ನು ಸಮಾಜಕ್ಕೆ ಉಪಯೋಗವಾಗುವ ರೀತಿಯಲ್ಲಿಯೇ ಉಪಯೋಗಿಸಬೇಕು. 'ನನಗೆ ಇಷ್ಟು ಎಕರೆ ಹೊಲವಿದೆ. ನಾನು ಹೊಗೆಸೊಪ್ಪನ್ನು ಬೆಳೆಯುತ್ತೇನೆ' ಎಂದರೆ ಆಗದು. ತನಗೆ ಹೆಚ್ಚು ದುಡ್ಡು ಬರುತ್ತದೆ ಎಂದು ಅವನ ಮನಸ್ಸಿಗೆ ಬಂದ ಹಾಗೆ ಹೊಗೆಸೊಪ್ಪನ್ನು ಬೆಳೆಯುವ ಹಾಗಿಲ್ಲ. ವೈಯಕ್ತಿಕವಾಗಿ ನಮಗೆ ಎಷ್ಟೋ ಆಸೆ-ಯೋಚನೆ ಇರುತ್ತವೆ. ಸಮಾಜದಲ್ಲಿ ಎಲ್ಲವನ್ನೂ ನಮ್ಮ ಇಷ್ಟದಂತೆಯೇ ನಡೆಸುವ ಹಾಗಿಲ್ಲ. ರಸ್ತೆಯಲ್ಲಿ ಬಲಗಡೆ ಗಾಡಿ ಹೊಡೆಯುತ್ತೇನೆ ಎಂದರೆ ಆದೀತೆ? ಭೂಮಿ ನಿನ್ನ ಸೊತ್ತೇನೋ ನಿಜ. ಆದರೆ ಸರ್ವಜನೋಪಯೋಗವಾಗುವಂತೆ ಅದನ್ನು ಉಪಯೋಗಿಸಬೇಕು. ಆದುದರಿಂದಲೇ, ಇಂಥಿಂಥ ಬೆಳೆಯನ್ನು ಬೆಳೆಯಲು ಅಪ್ಪಣೆ ಪಡೆಯಬೇಕು ಎನ್ನುವುದು. ಎಳ್ಳು ಬೆಳೆಯಲು ಅಪ್ಪಣೆ ಪಡೆದವನು ಹೊಗೆಸೊಪ್ಪು ಬೆಳೆಯಕೂಡದು. ಅದರಿಂದ ಹತ್ತು ಪಟ್ಟು ಹೆಚ್ಚು ಲಾಭ ಬಂದರೂ ಬೆಳೆಯಕೂಡದು.

ಹಳ್ಳಿಗಳಲ್ಲಿ ಬೆಳೆದುದನ್ನು ಹಳ್ಳಿಗಳಲ್ಲಿಯೇ ನಮಗೆ ಬೇಕಾದಷ್ಟನ್ನೆಲ್ಲ ಬಳಸುವುದು ನಮ್ಮ ಉದ್ದೇಶ್ಯ. ನಮಗೆ ಆಗಿ ಉಳಿದುದನ್ನು ನಮ್ಮಲ್ಲಿ ಬೆಳೆಯದ ಬೇರೆ ಕಡೆಯಿಂದ ನಾವು ತರಿಸಬೇಕಾದುದಕ್ಕೆ ವಿನಿಮಯ ಮಾಡಬೇಕು. ಉದಾ: ಒಂದು ಹಳ್ಳಿಯಲ್ಲಿ ಹತ್ತಿಯನ್ನು ಬೆಳೆದರೆ ಅದನ್ನು ಗಿರಣಿಗೆ ಕಳಿಸಿ ಬಟ್ಟೆ ಮಾಡಿಸಿ ತರಿಸಬೇಕಾಗಿಲ್ಲ.

ಹತ್ತಿಯನ್ನು ಬಟ್ಟೆಯಾಗಿ ಮಾಡಿಸಿದುದಕ್ಕೆ ನಾವು ಮತ್ತೇನಾದರೂ ಪದಾರ್ಥವನ್ನು ಕೊಡಬೇಕಲ್ಲವೆ, ವಿನಿಮಯವಾಗಿ? ಅದಕ್ಕಾಗಿ ನಮ್ಮ ಧಾನ್ಯವನ್ನು ಕಳೆದುಕೊಳ್ಳಬಾರದು ಎಂದರೆ, ನಮ್ಮ ಹತ್ತಿಯನ್ನು ನಾವೇ ಬಿಡುವಿದ್ದಾಗ ಬಟ್ಟೆಯಾಗಿ ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ನಮ್ಮ ಧಾನ್ಯವೆಲ್ಲ ನಮಗೇ ಉಳಿಯಿತು. ಜೊತೆಗೆ ಬಟ್ಟೆಯೂ ಆಯಿತು. ಎರಡೂ ರೀತಿಯಲ್ಲಿ ಲಾಭ. ಇದರಿಂದ ಬಟ್ಟೆ-ಗಿರಣಿಗಳವರಿಗೆ ನಷ್ಟ ವಾಗುತ್ತದೆ. ಅದನ್ನು ಕಂಡು ನಮಗೆ ಕನಿಕರವಾಗುತ್ತದೆ. ಆದರೆ ಪಾಪ, ಬಡರೈತರನ್ನು ಹಳ್ಳಿಯುವರನ್ನು ಕಾಪಾಡಬೇಡವೆ? ಹಳ್ಳಿಯುವರ ಮೇಲು ತಾನೆ ನಮ್ಮ ಗುರಿ. ಹಾಗಿದ್ದರೆ ಈ ರೀತಿ ಮಾಡಿದರೇನೇ ಹಳ್ಳಿ ಗಳು ಅನ್ನ-ಬಟ್ಟೆಗಳಲ್ಲಿ ಪರಿಪೂರ್ಣವಾಗಬಲ್ಲವು.

ಹೀಗೆ ಸಮಗ್ರ ಆಹಾರದ ಅಂಶಗಳನ್ನು ಗಮನಿಸಿ, ಅದನ್ನು ಒದ ಗಿಸಿಕೊಂಡು ಜನರಿಗೆ ಆಹಾರ ನೀಡಲು ಏನೇನು ಬೆಳೆಯಬೇಕೋ ನಿರ್ಧರಿಸಬೇಕು. ಆ ಸ್ಥಳದ ಜನರಿಗೆ ಹೊಟ್ಟೆ ತುಂಬಾ ಆಗಿ ಮಿಕ್ಕರೆ ಅದನ್ನು ಹೊರಗೆ ಕಳಿಸಬಹುದು. ಅಲ್ಲಿಯುವರೆಗಲ್ಲ. ಅಲ್ಲಿನ ಜನರಿಗೇ ಸಾಲದೆ ಬರುವ ಪದಾರ್ಥಗಳನ್ನು ಹೊರಗೆ ಸಾಗಿಸುವುದು ಸಾಗಾಣಿ ಕೆಯ ವ್ಯವಸ್ಥೆ ಭೂಮಿಗೆ-ಬೇಸಾಯಕ್ಕೆ ಮಾಡಿದ ದ್ರೋಹ. ಅದೇ ರೀತಿ ಜನರು ಯಾವುದಾದರೂ ರೀತಿಯಲ್ಲಿ ಪ್ರಯೋಜನಕರವಾದ ಕೆಲಸದಲ್ಲಿ ತೊಡಗಲು ಅಗತ್ಯವಾದ ಸಾಮಗ್ರಿಯನ್ನು ಒದಗಿಸಲು ಪ್ರಯತ್ನಗಳು ನಡೆಯಬೇಕು.

# ಪ್ರಕರಣ ೩

## ವಿನಿಮಯ

**ವಿವಿಧೋದ್ದೇಶ್ಯ-ಸಹಕಾರ ಸಂಘಗಳು:** ಗ್ರಾಮೋದ್ಯೋಗಗಳನ್ನು ಬೆಳೆಸಲಾಗಲಿ ಗ್ರಾಮಸ್ಥರು ಊರೊಟ್ಟಿನ ಕೆಲಸಮಾಡಲಾಗಲಿ ಸಹಕಾರ ಸಂಘಗಳು ಬಹಳ ಮುಖ್ಯ ಸಾಧನ. ವಿವಿಧೋದ್ದೇಶ್ಯದ ಗ್ರಾಮಸಹಕಾರ ಸಂಘವೊಂದಿದ್ದರೆ ಹಲವು ಬಗೆಯಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಬಹುದು: ೧. ಹಳ್ಳಿಯವರಿಗೆ ಬೇಕಾದ ಧಾನ್ಯವನ್ನು, ಗ್ರಾಮೋದ್ಯೋಗಗಳಿಗೆ ಅಗತ್ಯವಾದ ಸಾಮಗ್ರಿಯನ್ನು ಸಂಗ್ರಹಿಸಿಡಬಹುದು. ೨. ಹಳ್ಳಿಗೆ ಸಾಕಾಗಿ ಉಳಿದ ಪದಾರ್ಥಗಳನ್ನು ಹೊರಗೆ ಸಾಗಿಸುವುದು, ಹಳ್ಳಿಯವರಿಗೆ ಅಗತ್ಯವಾದುದನ್ನು ಹಂಚುವುದು. ೩. ಬೀಜದಕಾಳು, ಸುಧಾರಿಸಿದ ಮುಟ್ಟು, ಉಪಕರಣಗಳು, ಮೂಳೆ ಗೊಬ್ಬರ, ಮೀನು ಗೊಬ್ಬರ ಒದಗಿಸುವುದು. ೪. ಸುತ್ತಮುತ್ತಲಿನ ಪ್ರದೇಶಕ್ಕೆ ಒಂದು ಬೀಜದ ಹೋರಿಯನ್ನು ಸಾಕುವುದು. ೫. ಕಂದಾಯ, ತೆರಿಗೆ ವಸೂಲಿಯಲ್ಲಿ ಜನಕ್ಕೂ ಸರಕಾರಕ್ಕೂ ಮಧ್ಯವರ್ತಿಯಾಗಿ ಇರುವುದು–ಇತ್ಯಾದಿ.

ಧಾನ್ಯವನ್ನು ಸಾಗಿಸುವಾಗ ಆಗುವ ನಷ್ಟ, ಧಾನ್ಯವನ್ನೆಲ್ಲ ಒಂದು ಕಡೆ ತಂದು ಹಾಕಿ ಅಲ್ಲಿಂದ ಮತ್ತೆ ಹಳ್ಳಿಗಳಿಗೆ ಒಯ್ದು ಒದಗಿಸುವ ವೆಚ್ಚವೆಲ್ಲ ಈ ಸಹಕಾರ ಸಂಘಗಳ ಮೂಲಕ ತಪ್ಪುತ್ತದೆ. ಸರಕಾರಕ್ಕೂ ಜನರಿಗೂ ಸಹಕಾರ ಸಂಘಗಳು ಉತ್ತಮ ವ್ಯಾವಹಾರಿಕ ವ್ಯವಸ್ಥೆ.

ಒಬ್ಬ ರೈತ ತಾನು ಬೆಳೆದ ಗೋಧಿಯಲ್ಲಿ ತನಗೆ ಬೇಕಾದಷ್ಟನ್ನು ಇಟ್ಟುಕೊಂಡು ಹೆಚ್ಚಾದುದನ್ನು ಸಹಕಾರ ಸಂಘಕ್ಕೆ ಕೊಡುತ್ತಾನೆ. ಆ ಧಾನ್ಯದ ಆಧಾರದ ಮೇಲೆ ಸಂಘದಿಂದ ತನಗೆ ಬೇಕಾದ ಉಳಿದ ಪದಾರ್ಥಗಳನ್ನು ತಗೆದುಕೊಳ್ಳುತ್ತಾನೆ. ಸರಕಾರದ ಕಂದಾಯವನ್ನೂ ಕಾಳಿನ ರೂಪದಲ್ಲಿ ಕೊಡಬಹುದು, ಹಣವಾಗಿ ಕೊಡಬೇಕಾದುದಿಲ್ಲ. ಈಗ ಹಣದ ರೂಪದಲ್ಲಿ ಕಂದಾಯವನ್ನು ತೆಗೆದುಕೊಳ್ಳುತ್ತಿರುವುದು

ಗಳು ಧಾನ್ಯಸಂಗ್ರಹ ಮಾಡಿದರೆ, ಹಳ್ಳಿಯವರಿಗೆ ಬಹಳ ತೊಂದರೆಯಾಗಿವೆ. ಹಳ್ಳಿಗಳಲ್ಲಿ ಸಹಕಾರ ಸಂಘ ಸ್ಥಳೀಯ ಅಧಿಕಾರಿಗಳ ಸಂಬಳವನ್ನೂ ಸ್ವಲ್ಪಭಾಗ ಧಾನ್ಯರೂಪದಲ್ಲಿಯೆ ಕೊಡಬಹುದು.

ಹಣದ ಅರ್ಥವ್ಯವಸ್ಥೆ ನಿಜವಾದ ಬೆಲೆಗಳನ್ನು ತಿಳಿಸದು. ಒಬ್ಬರ ಕೈಯಿಂದ ಒಬ್ಬರಿಗೆ ಸಾಗಿಹೋದಾಗ ಹಣದ ಬೆಲೆ ವ್ಯತ್ಯಾಸವಾಗುತ್ತದೆ. ಬಡವನ ಕೈಯಲ್ಲಿ ಒಂದು ರೂಪಾಯಿ ಇದ್ದರೆ ಅದರ ಬೆಲೆ ಬೇರೆ, ಹಣವಂತನ ಕೈಯಲ್ಲಿದ್ದರೆ ಅದರ ಬೆಲೆಯೇ ಬೇರೆ. ಈ ಬಗೆಯ ಹಸ್ತಾಂತರಗಳು ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಲೂ ಬಹುದು, ತಗ್ಗಿಸಲೂಬಹುದು. ಮೇಲೆ ನೋಡಲಿಕ್ಕೆ ರೂಪಾಯಿ ರೂಪಾಯಿಯೇ ,ಆದರೆ ವ್ಯವಹಾರದಲ್ಲಿ ವಾಸ್ತವವಾಗಿ ಹಾಗಲ್ಲ. ಒಬ್ಬ ಬಡವನ ಕೈಯಲ್ಲಿ ಒಂದು ರೂಪಾಯಿ ಇದ್ದರೆ ೪-೫ ದಿನದ ಅನ್ನವಾಯಿತು. ಒಬ್ಬ ಭಾಗ್ಯವಂತನ ಕೈಯಲ್ಲಿದ್ದರೆ ಅದರ ಯೋಗ್ಯತೆ ಒಂದು ಚುಟ್ಟಾ. ಹೀಗೆ, ಒಂದು ರೂಪಾಯಿ ಬಡವನ ಕೈಯಿಂದ ಭಾಗ್ಯವಂತನ ಕೈಗೆ ಹೋದರೆ ಅದರ ಬೆಲೆ ಬಹಳ ಮಟ್ಟಿಗೆ ತಗ್ಗಿತು. ಅದೇ ರೀತಿ ಹಣವಂತನ ಕೈಯಿಂದ ಬಡವನ ಕೈಗೆ ರೂಪಾಯಿ ಬಂದರೆ ಅದರ ಬೆಲೆ ಹೆಚ್ಚುತ್ತದೆ. ಆದುದರಿಂದ ಯಾರ ಕೈಗೆ ಹೋದರೆ ಹಣದ ಬೆಲೆಯೇ ಕಡಮೆಯಾಗುತ್ತದೆಯೋ ಅಂಥವರ ಕೈಗೆ ಹಣ ಹೋಗದ ಹಾಗೆ ನಮ್ಮ ಆರ್ಥಿಕರಚನೆ ಮಾಡಬೇಕು. ವಿವಿಧೋದ್ದೇಶ್ಯದ ಸಹಕಾರ ಸಂಘಗಳು ಮಾಡಬೇಕಾದ ಕೆಲಸ ಇದೇ. ಹಳ್ಳಿಯವರಿಂದ ಜೋಳ-ರಾಗಿಯನ್ನು ಸಂಗ್ರಹಿಸಿ ಸರಕಾರಕ್ಕೆ ಕಾಳಿನ ರೂಪದಲ್ಲಿಯೆ ಕಂದಾಯ ಕೊಡಬಹುದು. ಸರಕಾರದ ಲೆಕ್ಕದಲ್ಲಿ, ಅಧಿಕಾರಿಗಳಿಗೆ ಆಹಾರ ಪದಾರ್ಥಗಳನ್ನು ಕೊಡಬಲ್ಲವು. ಅದರಿಂದ ಜನರಿಗೆ ಸಮಗ್ರ ಆಹಾರ ಸಿಗುತ್ತದೆ. ಇದನ್ನೆಲ್ಲಾ ಸರಿಯಾಗಿ ನಡೆಸಿದರೆ ಕಡೆಗೆ ಸರಕಾರಕ್ಕೆ ಕೊಡಬೇಕಾದ ಹಣ ಬಹಳ ಸ್ವಲ್ಪ ಆಗುತ್ತದೆ. ಅದನ್ನೂ ಕೂಡ, ಬೇರೆ ಬೇರೆ ಜಿಲ್ಲೆಗಳಿಗೆ, ಇಲ್ಲಿ ಹೆಚ್ಚಾಗಿ ಅಲ್ಲಿ ಬೇಕಾದ ಧಾನ್ಯವನ್ನು ಕಳಿಸಿ ಮುಟ್ಟಿಸಬಹುದು. ಹೀಗೆ ಮಾಡಲು ಸಾಧ್ಯವಾದರೆ ಹಣಪ್ರಪಂಚದ ಕೆಡುಕನ್ನು ಪೂರ್ಣವಾಗಿ ತೊಡೆದೇ ಹಾಕಲು ಆಗದಿದ್ದರೂ ಬಹುಮಟ್ಟಿಗೆ ಕಡಮೆ ಮಾಡಿಬಿಡಬಹುದು. ಆಗ ಹಣದ ಮಾಯಾ ಪ್ರಪಂಚ ಅಳಿದು ಹೋಗಿ ವಸ್ತುಗಳ ವಾಸ್ತವ ಪ್ರಪಂಚ ದೃಢವಾಗುತ್ತದೆ.

# ಪ್ರಕರಣ ೪

## ಸಹಕಾರದ ಕೆಲಸ

**ಬ್ಯಾಂಕಿನ ಕೆಲಸ:** ವ್ಯಾಪಾರ-ಉದ್ಯೋಗಗಳ ರಥದ ಚಕ್ರ ಸರಾಗವಾಗಿ ತಿರುಗುವಂತೆ, ಸುಲಭವಾಗಿ ತಿಕ್ಕಾಟವಿಲ್ಲದಂತೆ ಮುಂದೆ ಉರುಳುವಂತೆ, ಕೀಲೆಣ್ಣೆ ಸವರುವುದೇ ಬ್ಯಾಂಕುಗಳ ಕೆಲಸ. ಸಹಕಾರ ಸಂಸ್ಥೆಯಾದರೆ ಈ ಕೆಲಸವನ್ನು ಮಾಡುವುದರ ಜೊತೆಗೆ ಇಡೀ ಆರ್ಥಿಕ ರಚನೆಯಲ್ಲಿನ ಬೇರೆ ಬೇರೆ ಅಂಗಗಳೆಲ್ಲಾ ಪರಸ್ಪರ ಸಹಕರಿಸುವಂತೆಯೂ ಮಾಡಬೇಕು.

ಪಶ್ಚಿಮ ದೇಶದ ಬ್ಯಾಂಕುಗಳು ಹಣ ಪ್ರಪಂಚದವು. ಬ್ಯಾಂಕಿಗೆ ಎಷ್ಟು ಹಣ ಠೇವಣಿ ಬಂತು, ಎಷ್ಟು ಲಾಭ ಬಂತು ಎಂಬುದು ಅವರ ಪ್ರಗತಿಯ ಅಳತೆ. ನಾವು ಹಾಗೆ ಮಾಡಲಾಗುವುದಿಲ್ಲ. ಸುತ್ತಲಿನ ಜನ ಜೀವನಕ್ಕೆ ಎಷ್ಟು ಸುಖ-ಸಂತೋಷಗಳನ್ನು ಕೊಟ್ಟಿತು ಬ್ಯಾಂಕು ಎಂಬುದು ನಮ್ಮ ಅಳತೆ. ಜನರ ಆರ್ಥಿಕ ಜೀವನಕ್ಕೆ ಸಂಬಂಧಿಸಿದ ಹಲವು ಕೆಲಸಗಳನ್ನು ಅದು ನಿರ್ವಹಿಸಬೇಕು. ಹಣ ನಷ್ಟವಾದರೂ ಚಿಂತೆಯಿಲ್ಲ, ಜನರಿಗೆ ಸೌಕರ್ಯ ಮಾಡಬೇಕು. ಬರೀ ರೂಪಾಯಿ ಆಣೆ ಕಾಸಿನ ಲೆಕ್ಕಮಾಡಿ ಜನಜೀವನದಲ್ಲಿ ಬ್ಯಾಂಕು ಏನು ಪಾತ್ರ ವಹಿಸಿತು ಎಂಬುದನ್ನು ತಿಳಿಯಲು ಸಾಧ್ಯವಿಲ್ಲ.

ಮನುಷ್ಯನ ಮೈಯಿಂದ ರಕ್ತವನ್ನು ತೆಗೆದುಕೊಳ್ಳಲು ಒಂದು ಬಗೆಯ ಪಿಚಕಾರಿ, ಅದಕ್ಕೊಂದು ಸೂಜಿ ಇರುತ್ತವೆ. ಪಶ್ಚಿಮ ಸೀಮೆಗಳ ಬ್ಯಾಂಕು-ಲೇವಾದೇವಿ ಪದ್ಧತಿ-ಉತ್ಪಾದಕರ ಮೈಯಿಂದ ಪ್ರಾಣವನ್ನೇ ಹೀರುವ ಪಿಚಕಾರಿ-ಸೂಜಿ ಇದ್ದಂತೆ. ಬಂಡವಾಳಗಾರರು ಅದನ್ನು ಉಪಯೋಗಿಸುತ್ತಾರೆ. ೧೯೪೩ ರಲ್ಲಿ ಬಂಗಾಳದಲ್ಲಿ ಭೀಕರ ಕ್ಷಾಮ ಬಡಿದು ೩೦ ಲಕ್ಷ ಜನ ಸತ್ತರಲ್ಲ. ಅದು ರಿಸರ್ವ್ ಬ್ಯಾಂಕಿನ

ಅಧಿಕಾರದ ದುರುಪಯೋಗದ ಫಲ. ಸಾರ್ವಜನಿಕರ ಹಣ, ರಾಷ್ಟ್ರದ ಹಣ, ಆ ಬ್ಯಾಂಕಿನಲ್ಲಿ ಇರುತ್ತದೆ. ಅವುಗಳ ಕೆಲಸದಿಂದ ದೇಶದ ಜನಕ್ಕೆ ಅಪಾರ ಹಾನಿಯಾಗುತ್ತದೆ. ಹಣದ ದುರುಪಯೋಗವೇ ಇದಕ್ಕೆ ಕಾರಣ.

ಹಣವನ್ನು ವಿನಿಮಯದ ಸಾಧನವಾಗಿ ಅಥವಾ ಕ್ರಯಶಕ್ತಿಯ ಮುಡಿಪಾಗಿ ಬಳಸಿದರೆ, ಆಗ ಅದು ತನ್ನ ಕೆಲಸವನ್ನು ಸರಿಯಾಗಿ ಮಾಡುತ್ತದೆ. ಸಾಧಾರಣವಾಗಿ ಹಣವಾಗಿ ಬಳಸುವ ನಾಣ್ಯ ಶಾಶ್ವತ; ಅದರಿಂದ ಕೊಳ್ಳುವ ಪದಾರ್ಥ ಅಶಾಶ್ವತ, ಬೇಗ ಕೆಡುತ್ತವೆ. ಆದುದರಿಂದ ಹಣವಿದ್ದವನಿಗೆ ಚೌಕಾಸಿಮಾಡಲು ಹೆಚ್ಚು ಅನುಕೂಲ. ಬಾಳೆಯ ಹಣ್ಣು ಮಾರುವವನು ಹಣ್ಣು ಕೊಳೆಯುವ ಮೊದಲೇ ಮಾರಿಕೊಳ್ಳ ಬೇಕು. ದುಡ್ಡೇನು ಕೊಳೆಯುವದಲ್ಲ. ದುಡ್ಡಿರುವವನಿಗೆ ಅಂಥ ಅಪಾಯ ವೇನೂ ಇಲ್ಲ. ಎಷ್ಟು ಕಾಲ ಬೇಕಾದರೂ ಅದನ್ನು ಇಟ್ಟುಕೊಂಡಿರಬಲ್ಲ. ಈ ಭೇದ ಇರುವುದರಿಂದ ಹಣವಿದ್ದವನದೇ ಮೇಲುಗೈ. ಪದಾರ್ಥ ಇರುವವನದು ಯಾವಾಗಲೂ ಅಡಿಗೈಯೇ. ಇವನನ್ನು ಅವನು ಶೋಷಿಸಬಲ್ಲ. ಬ್ಯಾಂಕುಗಳು ಹಣ-ಹದ್ದುಗಳು. ತಮ್ಮ ಧನಬಲವನ್ನು ಅವರು ಹೇಗೆ ಉಪಯೋಗಿಸಿದರೆ ಹಾಗೆ ತಿರುಗಬೇಕು ವ್ಯಾಪಾರ-ಉದ್ಯೋಗ. ತನ್ನ ಗಿರಾಕಿಗಳು ಹಾಳಾದರೂ ಚಿಂತೆಯಿಲ್ಲ, ತನ್ನ ಸ್ಥಿತಿ ಭದ್ರವಾಗಿರಲಿ ಎಂದು ಬ್ಯಾಂಕು ಪ್ರಯತ್ನಿಸಿದರೆ, ಆ ಬ್ಯಾಂಕು ತನ್ನ ಕರ್ತವ್ಯಮಾಡಿದಂತಾಗಲಿಲ್ಲ-ಆರ್ಥಿಕ ರಚನೆಯಲ್ಲಿ. ವಿನಿಮಯ ಸಾಧನವಾದ ಹಣದ ಬಗ್ಗೆ ಇಷ್ಟು.

ಹಣ-ಕ್ರಯಶಕ್ತಿಯ ನಿಧಿ: ಹಣ ಉಳಿದ ಪದಾರ್ಥಗಳಿಗಿಂತ ಹೆಚ್ಚು ಶಾಶ್ವತ. ಅದರ ಈ ಗುಣವನ್ನು ಸರಿಯಾಗಿ ಉಪಯೋಗಿಸಿದರೆ ಜನರಿಗೆ ಅದು ಕ್ರಯಶಕ್ತಿಯ ನಿಧಿಯಾಗಬಲ್ಲದು. ರೈತ ತನ್ನ ಹೊಲದಲ್ಲಿ ಬೇಸಾಯಮಾಡಿ ಸುಗ್ಗಿಯಾದ ಮೇಲೆ ಬೆಳೆಯನ್ನೆಲ್ಲ ಮಾರಿಬಿಡುತ್ತಾನೆ. ಅವನ ಕೈಗೆ ಸ್ವಲ್ಪ ಹಣ ಬರುತ್ತದೆ. ಮುಂದಿನ ಸುಗ್ಗಿಯವರೆಗೆ ಅವನಿಗೆ ಈ ಹಣದಿಂದಲೇ ನಿರ್ವಾಹ. ಮುಂದಿನ ೧೨ ತಿಂಗಳು ಕಾಲ ಅವನು ಬೇರೆ ಪದಾರ್ಥಗಳನ್ನು ತಡೆಯಲು ಈ ಹಣವನ್ನು ವಿನಿಮಯ

ಮಾಡಬೇಕು. ಈ ೧೨ ತಿಂಗಳಲ್ಲಿ ಕ್ರಯಶಕ್ತಿಯಲ್ಲಿ ಏನಾದರೂ ವ್ಯತ್ಯಾಸವಾದರೆ ರೈತನ ಪರಿಸ್ಥಿತಿಯೂ ಅಷ್ಟುಮಟ್ಟಿಗೆ ವ್ಯತ್ಯಾಸವಾಗುತ್ತದೆ. ಆದುದರಿಂದ ನಮ್ಮ ದೇಶದಂಥ ವ್ಯವಸಾಯಪ್ರಧಾನ ದೇಶದಲ್ಲಿ ಅಚಲವಾದ, ವ್ಯತ್ಯಾಸವಾಗದಂಥ ಕ್ರಯಶಕ್ತಿಯ ನಿಧಿ ಇರಬೇಕು. ವಿವಿಧೋದ್ದೇಶ್ಯದ ಸಹಕಾರ ಸಂಘಗಳು ಈ ಕೆಲಸದಲ್ಲಿ ನೆರವಾಗಬಲ್ಲವು. ಹಣದ ಕಾರುಬಾರನ್ನು ತಡೆಗಟ್ಟಿ, ವ್ಯತ್ಯಾಸ ಏರಿಳಿತಗಳಿಗೆ ಅವಕಾಶವನ್ನು ಕಡಮೆಮಾಡಿ, ಪದಾರ್ಥಗಳ ಆಧಾರದ ಮೇಲೆ ಯೋಗ್ಯ ಲೇವಾದೇವಿ ಮಾಡುತ್ತ ಒಂದೇ ಸಲಕ್ಕೆ ರೈತ ತನ್ನ ಬೆಳೆಯನ್ನೆಲ್ಲಾ ಮಾರಿಕೊಳ್ಳುವುದನ್ನು ಈ ಸಂಘಗಳು ನಿಲ್ಲಿಸಬಹುದು.

**ಸಹಕಾರ:** ಸಹಕಾರದ ಎರಡನೆಯ ಕರ್ತವ್ಯಕ್ಕೆ ಬಂದೆವು. ಸಹಕಾರ ಎಂದರೇನೇ ಸ್ಪರ್ಧೆ–ಪೋಟಿ ಇಲ್ಲದೆ ಎಲ್ಲರಿಗೂ ಹಿತವಾಗುವಂತೆ ಒಂದು ರೀತಿಯ ಪಾಲುಗಾರಿಕೆಯಲ್ಲಿ ಕೆಲಸ ಮಾಡುವುದು. ಆ ವ್ಯವಹಾರಕ್ಕೆ ಸಂಬಂಧಿಸಿದ ಜನರೆಲ್ಲರಿಗೂ ಅದರಲ್ಲಿ ಒಂದೇ ಬಗೆಯ ಆಸಕ್ತಿಯಿರಬೇಕು–ಇದು ಸಹಕಾರದ ಮೂಲಸ್ತಂಭ. ಸಹಕಾರದಲ್ಲಿ ಶೋಷಣಕ್ಕೆ ಎಡೆಯೇ ಇಲ್ಲ. ಆದುದರಿಂದ ಒಬ್ಬ ಶೋಷಕನಿಗೂ ಅವನಿಗೆ ಬಲಿಯಾದ ಮನುಷ್ಯನಿಗೂ ಸಹಕಾರ ಸಾಧ್ಯವೇ ಅಲ್ಲ. ಪರದೇಶಿಗಳು ತಮ್ಮ ಪದಾರ್ಥಗಳನ್ನು ನಮಗೆ ಮಾರಲು ಬರುತ್ತಾರೆ. ನಮ್ಮ ಸಂಪರ್ಕದಲ್ಲಿ ಅವರಿಗಿರುವ ಆಸಕ್ತಿ ಅಷ್ಟೇ. ಅವರು ಇತರರನ್ನು ರಾಜಕೀಯ ಬಂಧನದಲ್ಲಿ ಹಿಡಿದಿರುವುದೂ ಅದಕ್ಕಾಗಿಯೇ. ಸಹಕಾರ ಸಂಘಗಳು ಕೈಮಗ್ಗದ ನೇಕಾರರಿಗೆ ಅಮೆರಿಕದ ನೂಲನ್ನು ತರಿಸಿ ಕೊಡುವ ಕೆಲಸ ಮಾಡಿದರೆ ಹುಲಿ–ಮೇಕೆಯನ್ನು ಒಟ್ಟಿಗೆ ಕಟ್ಟುವ ಅಸಾಧ್ಯ ಕೆಲಸ ಮಾಡುತ್ತಿದಾರೆ. ನಿಜವಾದ ಸಹಕಾರ ಪದ್ಧತಿಯಿಂದ ಕೆಲಸ ಮಾಡುತ್ತಿಲ್ಲ. ಆಯಾ ಸ್ಥಳದ ನೂಲುಗಾರರನ್ನೂ ನೇಕಾರರನ್ನೂ ಜೊತೆಗೂಡಿಸಿ ಅವರವರ ಸಂಪರ್ಕ ಬೆಳೆಸಬೇಕಾದುದು ಅವರ ಧರ್ಮ. ಹಳ್ಳಿಯಲ್ಲಿ ಹುಟ್ಟಿದ ಮೂಲ ಪದಾರ್ಥ (ಕಚ್ಚಾ ಮಾಲು), ಹಳ್ಳಿಯ ಉದ್ಯೋಗವಂತ, ಸಿದ್ಧವಾದ ಪದಾರ್ಥಗಳನ್ನು ಬಳಸುವ ಜನ–ಹೀಗೆ ಸಹಕಾರ ಸಂಘಗಳು ಎಳೆಗೂಡಿಸಬೇಕು. ಮುತ್ತಿನ ಸರವನ್ನು ಒಟ್ಟಾಗಿ ಹಿಡಿದಿ

ರುವ ಹಾರದಂತೆ ಸಹಕಾರ ಸಂಘಗಳು ಎಲ್ಲಾ ಗುಂಪುಗಳನ್ನೂ ಒಟ್ಟಾಗಿ ಜೋಡಿಸಿ ಹಿಡಿಯಬೇಕು.

ಇಂಥ ಸಹಕಾರ ಸಂಘಗಳು, ನಿಷ್ಕಪಟಿಗಳಾದ ಹಳ್ಳಿಯವರು ಸರಕಾರಿ ಅಧಿಕಾರಿಗಳ ಮೋಸಕ್ಕೆ ಬಲಿಯಾಗದಂತೆ ಕಾಪಾಡಬಲ್ಲವು. ಬೆಳೆದ ಬೆಳೆಯನ್ನು ಶೇಖರಿಸಿಟ್ಟುಕೊಂಡು, ಸಾಲ, ತೆರಿಗೆ-ಕಂದಾಯ ಎಲ್ಲವನ್ನೂ ಕೊಟ್ಟು, ಬೆಳೆಯನ್ನೆಲ್ಲಾ ಒಂದೇ ಸಲ ಸಂತೆಗೆ ಹಾಕಿ ಧಾರಣೆಯನ್ನು ಅತಿಯಾಗಿ ಏರುಪೇರಿಗೆ ಸಿಗಿಸದಂತೆ ತೆಗೆದಿಟ್ಟುಕೊಂಡು, ಸಕಾಲದಲ್ಲಿ ಸರಿಯಾದ ಧಾರಣೆಗೆ ಮಾರಿ ರೈತರಿಗೆ ಅನುಕೂಲ ಮಾಡಬಲ್ಲವು ಈ ಸಂಸ್ಥೆಗಳು. ಆರ್ಥಿಕ ಕ್ಷೇತ್ರದಲ್ಲಿ ಏನೇ ಪೆಟ್ಟು ತಗಲಿದರೂ ಸೈರಿಸಿಕೊಂಡು ಆ ಪೆಟ್ಟು ರೈತರಿಗೆ ತಗಲದಂತೆ ಈ ಸಂಘಗಳು ಮಾಡಬಲ್ಲವು.

ಸಹಕಾರ ಸಂಸ್ಥೆಗಳು ಸರಿಯಾಗಿ ನಡೆಯುತ್ತಿವೆಯೆ ಎಂಬುದರ ಪರೀಕ್ಷೆ ಅವುಗಳ ಆದಾಯ-ವ್ಯಯದ ಪಟ್ಟಿಗಳಲ್ಲಿಲ್ಲ; ಸುತ್ತಲಿನ ಪೇಟೆಯಲ್ಲಿ ಕಾಣುತ್ತದೆ. ಊರಿನ ಅಂಗಡಿಗಳಲ್ಲಿ ಗಿರಣಿಯ ಪದಾರ್ಥಗಳೂ ಪರದೇಶಿ ವಸ್ತುಗಳೂ ತುಂಬಿದ್ದರೆ, ನಮ್ಮ ಅಗತ್ಯಗಳನ್ನು ತೃಪ್ತಿಪಡಿಸಲು ಸ್ಥಳೀಯ ಸಾಧನಗಳನ್ನು ಒಟ್ಟುಗೂಡಿಸಿ ಉತ್ಪತ್ತಿ ಮಾಡಿಸುವ ಸಹಕಾರ ಪ್ರಯತ್ನ ನಡೆದಿಲ್ಲವೆಂಬುದು ಸ್ಪಷ್ಟ. ಸಹಕಾರ ಸಂಸ್ಥೆಗಳು ಸರಿಯಾಗಿ ಕೆಲಸ ಮಾಡಿದರೆ ನಮ್ಮ ಪ್ರಾಥಮಿಕ ಅಗತ್ಯಗಳಾದ ಅನ್ನ, ಬಟ್ಟೆ, ವಸತಿಗಳ ಬಗ್ಗೆ ನಾವು ಸಂಪೂರ್ಣರಾಗಲು ನೆರವಾಗುತ್ತದೆ. ಇದನ್ನು ಸಾಧಿಸಿದರೆ ಪರದೇಶದ ಉತ್ಪಾದಕರ ದುರಾಸೆಯನ್ನು ಸೆಳೆಯುವ ಸಂದರ್ಭ ಯಾವುದೂ ಇರದು. ಆಗ ದೇಶದೇಶಗಳ ನಡುವೆ ಅಸೂಯೆಯಿಲ್ಲದೆ, ಜಗತ್-ಯುದ್ಧಗಳಿಗೆ ಅವಕಾಶವಿಲ್ಲದೆ ಹೋಗುತ್ತದೆ. ಸಹಕಾರ ಸಂಸ್ಥೆಗಳನ್ನು ಸರಿಯಾದ ಮಾರ್ಗದಲ್ಲಿ ಬೆಳೆಸಿದರೆ ರಾಷ್ಟ್ರೀಯ ಸ್ವಾತಂತ್ರ್ಯ ಸಿದ್ಧಿಯಾಗಿ, ಅಂತರ್ ರಾಷ್ಟ್ರೀಯ ಶಾಂತಿಗೆ ಸಾಧನವಾಗುತ್ತದೆ.

**ಗೊಬ್ಬರ:** ಹಳ್ಳಿಯ ಕಸ-ಹೊಲಸು, ಮೂಳೆ, ಮಲ-ಮೂತ್ರ ಎಲ್ಲವೂ ಈಗ ಹಳ್ಳಿಗೆ ಅನಾರೋಗ್ಯಕರವಾಗಿವೆ. ಅದೆಲ್ಲವನ್ನೂ ಕಂಪೋಸ್ಟ್ ಮಾಡಿ ಗೊಬ್ಬರವಾಗಿ ಬಳಸಬಹುದು. ದನದ ಗೊಬ್ಬರದಷ್ಟೇ ಒಳ್ಳೆಯ ಗೊಬ್ಬರ ಇದು. ಇದನ್ನು ಬಹಳ ಸುಲಭವಾಗಿ ಮಾಡ

ಬಹುದು. ಸಾಧಾರಣವಾಗಿ ಮೂಳೆಗಳನ್ನೂ ಗಾಣದ ಹಿಂಡಿಯನ್ನೂ ದೇಶದಿಂದ ಹೊರಗೆ ಸಾಗಿಸುತ್ತಾರೆ. ಅದನ್ನು ಹಳ್ಳಿಗಳಿಂದ ಹೊರಗೆ ಸಾಗದ ಹಾಗೆ ನೋಡಿಕೊಳ್ಳಬೇಕು. ಮೂಳೆಗಳನ್ನು ಹಳ್ಳಿಯಲ್ಲಿಯೇ ಪುಡಿ ಮಾಡಬೇಕು. ಅವನ್ನು ಸುಣ್ಣದ ಭಟ್ಟಿಗಳಲ್ಲಿ ಸ್ವಲ್ಪ ಸುಟ್ಟು ಗಾಣಕ್ಕೆ ಹಾಕಿ ತಿರುವಿದರೆ ಸಾಕು. ಆ ಪುಡಿಯನ್ನು ರೈತರಿಗೆ ಹಂಚಬೇಕು. ಊರಿನ ಕಸ ಹೊಲಸನ್ನು ಗೊಬ್ಬರ ಮಾಡಲು ಯಾರಿಗಾದರೂ ಗುತ್ತಿಗೆ ಕೊಡಬಹುದು. ಮೊದಮೊದಲು ಆ ಗುತ್ತಿಗೆದಾರರಿಗೆ ಸಹಾಯ ಧನ ವನ್ನೂ ಕೊಡಬಹುದು. ಇದರಿಂದ ಊರು ಚೊಕ್ಕಟವಾಯಿತು, ಕಸ ಗುಡಿಸುವವರ ಮರ್ಯಾದೆ ಹೆಚ್ಚಾಯಿತು. ಗೊಬ್ಬರ ಮಾಡಿ ಮಾರುವ ಅಂತಸ್ತಿಗೆ ಅವರು ಬಂದರು.

ಹಳ್ಳಿಯ ಎಣ್ಣೆ ಬೀಜಗಳನ್ನೆಲ್ಲ ದೋಚಿಕೊಂಡೊಯ್ದು ಹಳ್ಳಿ ಗಳಿಗೆ ಬರೀ ಎಣ್ಣೆಯನ್ನು ಕೊಟ್ಟು, ಹಿಂಡಿಯನ್ನೆಲ್ಲ ಪರದೇಶಗಳಿಗೆ ಕಳಿಸುವ ಎಣ್ಣೆಗಿರಣಿಗಳು ನಮ್ಮ ಭೂಮಿಯ ಹುಲುಸನ್ನು ಕಾಪಾಡುವ ಮುಖ್ಯ ವಸ್ತುವನ್ನೇ ನಾಶಮಾಡುತ್ತಿವೆ. ಇದನ್ನು ಪೂರ್ಣವಾಗಿ ನಿಲ್ಲಿ ಸಲೇ ಬೇಕು. ಎಣ್ಣೆ ಬೀಜಗಳು ಊರಿನಿಂದ ಹೊರಗೆ ಹೋಗಬಾರದು, ಅಲ್ಲೇ ಗಾಣದಲ್ಲಿ ಎಣ್ಣೆಯಾಗಬೇಕು ಎನ್ನಲು ಇದೂ ಒಂದು ಮುಖ್ಯ ಕಾರಣ. ಅದರಿಂದ ಹಳ್ಳಿಯಲ್ಲಿ ಎಣ್ಣೆಯೂ ಉಳಿಯಿತು, ಹಿಂಡಿಯೂ ಸಿಕ್ಕಿತು. ಭೂಮಿ ಹುಲುಸಾಯಿತು, ದನಕ್ಕೆ ತಿನಿಸಾಯಿತು, ಜನಕ್ಕೆ ಲಾಭವಾಯಿತು.

ಭೂಮಿಯ ಸಾರವನ್ನು ಹೆಚ್ಚಿಸುತ್ತೇವೆ ಎಂದು ರಾಸಾಯನಿಕ ಗೊಬ್ಬರಗಳನ್ನು ತಂದು ಹಾಕುವ ಪ್ರಯತ್ನಗಳು ಈಗ ನಡೆಯುತ್ತಿವೆ. ಜಗತ್ತಿನಲ್ಲಿ ನಾನಾ ಪ್ರದೇಶಗಳಲ್ಲಿ ಈ ಗೊಬ್ಬರದಿಂದ ಆದ ಪರಿಣಾಮ ನಮಗೆ ಎಚ್ಚರಿಕೆ ಹೇಳುತ್ತಲೇ ಇದೆ. ಅವು ನೆಲಕ್ಕೆ ಸಾರವನ್ನು ಕೊಡುವು ದಂತೂ ಇಲ್ಲ. ತಾತ್ಕಾಲಿಕ ಸ್ಫೂರ್ತಿ ಕೊಡುವ ಔಷಧಗಳಂತೆ ಒಡನೆಯೆ ಹೆಚ್ಚಾಗಿ ಬೆಳೆ ಕೊಡುವಂತೆ ಮಾಡುತ್ತವೆ. ಆದರೆ ಕ್ರಮೇಣ ಭೂಮಿ ನಿಸ್ಸಾರವಾಗಿ ಬೀಳಲಾಗುತ್ತದೆ. ಈ ರಾಸಾಯನಿಕ ಗೊಬ್ಬರದ ಪ್ರಚಾರ

ಮಾಡುವವರಿಗೆ ತಮ್ಮ ಗೊಬ್ಬರದ ಕಾರಖಾನೆಯ ಪದಾರ್ಥವನ್ನು ಮಾರುವ ಚಿಂತೆಯೊಂದೇ ಗೊತ್ತು; ಅದರಿಂದ ವ್ಯವಸಾಯಕ್ಕೆ ಏನೇ ಬಾಧಕವಾಗಲಿ.

ಬೀಜ: ವ್ಯವಸಾಯ ವೃದ್ಧಿಯಾಗಬೇಕಾದರೆ ಆರಿಸಿದ, ಸುಧಾರಿಸಿದ ಬೀಜ ಬಹಳ ಅಗತ್ಯ. ಸಹಕಾರ ಸಂಘಗಳು ಬೀಜದ ಉತ್ಪತ್ತಿಗಾಗಿಯೆ ಪ್ರತ್ಯೇಕ ಕ್ಷೇತ್ರಗಳಲ್ಲಿ ತಜ್ಞರ ಮೂಲಕ ಬೇಸಾಯ ಮಾಡಿಸಿ ಆ ಬೀಜವನ್ನು ರೈತರಿಗೆ ಹಂಚಬೇಕು.

ಧಾನ್ಯ ಸಂಗ್ರಹ: ದವಸವನ್ನು ಸಂಗ್ರಹಿಸಿಡುವ ಪದ್ಧತಿಯಿಂದ ಬಹಳ ನಷ್ಟವಾಗುತ್ತದೆ. ಬಹಳ ಕಡಮೆಯೆಂದರೂ ಈ ನಷ್ಟ ೩೫ ಲಕ್ಷ ಟನ್ ಎಂದು ಲೆಕ್ಕ ಹಾಕಿದಾರೆ. ೧೯೪೬ ರಲ್ಲಿ ನಮ್ಮ ದೇಶಕ್ಕೆ ಕಡಮೆ ಬಿದ್ದ ಧಾನ್ಯದ ಲೆಕ್ಕವೂ ಇಷ್ಟೇ. ಇದಲ್ಲದೆ ದವಸಕ್ಕೆ ಹುಳ ಬಿದ್ದು, ನೀರು ತಗಲಿ ದವಸ ಕೆಟ್ಟು ಅದರಿಂದಾಗುವ ನಾನಾ ರೀತಿಯ ಕಾಯಿಲೆಗಳ ಬಾಧೆಯ ನಷ್ಟವೂ ಹೆಚ್ಚೇ.

ಆಯಾ ಸ್ಥಳದಲ್ಲಿಯೇ ದವಸದ ಸಂಗ್ರಹ ಮಾಡಿದರೆ ಈ ನಷ್ಟವೂ ಅಲ್ಲಿಂದಿಲ್ಲಿಗೆ ಸಾಗಿಸುವ ಬಾಡಿಗೆಯೂ ಉಳಿಯುತ್ತದೆ.

ಧಾನ್ಯ ಸಂಗ್ರಹದ್ದು ಬಹಳ ಅವಸರದ ಪ್ರಶ್ನೆ, ಸದಾ ಕಾಲದ ಸಮಸ್ಯೆ. ಅದನ್ನು ಗಂಭೀರವಾಗಿ ಪರಿಹರಿಸಬೇಕು. ಈಗಿನ ಹಾಗೆ ಅವ್ಯವಸ್ಥಿತವಾದ ಗಡಂಗುಗಳಲ್ಲಿ ದವಸ ತುಂಬುವುದನ್ನು ತಪ್ಪಿಸಬೇಕು.

ಹೆಚ್ಚು ಧಾನ್ಯವನ್ನು ಸಂಗ್ರಹಿಸಬೇಕಾದ ದೊಡ್ಡ ಪಟ್ಟಣಗಳಲ್ಲಿ ಶಾಶ್ವತವಾದ ಸಿಮೆಂಟು ಗಡಂಗುಗಳನ್ನೇ ಕಟ್ಟಬಹುದು. ಪೌರಸಭೆಯವರೋ ಖಾಸಗಿ ಜನರೋ ಕಟ್ಟಿಸಿ ಬಾಡಿಗೆಗೆ ಕೊಡಬಹುದು. ಸಹಕಾರ ಸಂಸ್ಥೆಗಳವರು ಕಟ್ಟಿಸಿದರೆ ಇನ್ನೂ ಒಳ್ಳೆಯದು. ಈ ಗಡಂಗುಗಳನ್ನು ಆಗಾಗ ಪರೀಕ್ಷೆ ಮಾಡಲು ಅವಕಾಶವಿರುವಂತೆ ಮಾಡಬೇಕು. ಈಗ ಕಾರಖಾನೆಯ ಯಂತ್ರಗಳ ಪರೀಕ್ಷೆಯ ವ್ಯವಸ್ಥೆಯಿರುವಂತೆ.

ದವಸ ಬೆಳೆದ ಹಳ್ಳಿಗಳಲ್ಲಿಯೇ ಸಂಗ್ರಹಕ್ಕೂ ಏರ್ಪಾಟು ಮಾಡಿ

ದರೆ, ಅವನ್ನು ಮೊದಲು ಪಟ್ಟಣಗಳಿಗೂ ಆಮೇಲೆ ಮತ್ತೆ ಹಳ್ಳಿಗಳಿಗೂ ಸಾಗಿಸುವುದು ತಪ್ಪಿ, ದವಸ ಕೆಡುವ ಅವಕಾಶ ಕಡಮೆಯಾಗುತ್ತದೆ.

ಪ್ರತಿಯೊಬ್ಬರಿಗೂ ದವಸವನ್ನು ಹೇಗೆ ತೆಗೆದಿಡಬೇಕೆಂಬುದನ್ನು ಹೇಳಿ ಕೊಡಬೇಕು.

**ಹಳ್ಳಿಗಳಲ್ಲಿ ಕಚ್ಚಾಮಾಲನ್ನು ಉಳಿಸಬೇಕು:** ಗ್ರಾಮೋದ್ಯೋಗಗಳಿಗಿರುವ ಮುಖ್ಯ ಆತಂಕ ಕೆಲಸಗಾರನ ನಿಸ್ಸಹಾಯತೆ. ಸಂಘಟನೆಯಿಲ್ಲದುದರಿಂದ ಹೆಚ್ಚು ಸಂಘಟನೆ, ಅನುಕೂಲ ಇರುವ ಗಿರಣಿಗಳ ಸ್ಪರ್ಧೆಯ ಇದಿರು ಅವನು ನಿಲ್ಲಲಾರ. ಬೇಕಾದಷ್ಟು ಆನುಕೂಲ್ಯವಿರುವುದರಿಂದ ಗಿರಣಿಗಳು ಕಚ್ಚಾಮಾಲನ್ನೆಲ್ಲಾ ತಾವೇ ಆಕ್ರಮಿಸಿಕೊಂಡು, ನಿಸ್ಸಹಾಯನಾದ ಕೆಲಸಗಾರನ ಪದಾರ್ಥಗಳಿಗೆ ಪೇಟೆಯಲ್ಲಿಯೂ ಸ್ಥಳವಿಲ್ಲದ ಹಾಗೆ ವ್ಯಾಪಿಸಿಕೊಂಡು ಬಿಡುತ್ತವೆ. ಬ್ಯಾಂಕುಗಳ ಹಣಕಾಸಿನ ಧೋರಣೆ, ರೈಲಿನ ಬಾಡಿಗೆಯಲ್ಲಿ ಗಿರಣಿಗಳಿಗೆ ತೋರಿಸುವ ಪಕ್ಷಪಾತ, ಬಂಡವಾಳಗಾರಿಕೆಯ ವ್ಯಾಪಾರ ಸಂಸ್ಥೆ, ಎಲ್ಲವೂ ಚಿಕ್ಕ ಪುಟ್ಟ ಒಂಟಿ ಕೆಲಸಗಾರರನ್ನು ಹಿಸುಕಿಹಾಕಿ ದೊಡ್ಡ ಪ್ರಮಾಣದ ಉತ್ಪಾದನೆಯನ್ನೇ ಬೆಳೆಸುತ್ತವೆ. ಹಳ್ಳಿಗಳಲ್ಲಿ ಕೆಲಸಗಾರನಿಗೆ ಬೇಕೆಂದರೂ ಕಚ್ಚಾಮಾಲು ಸಿಗದು. ಈ ಕ್ರಮ ತಿರುಗುಮುರುಗಾಗಬೇಕು. ಹಳ್ಳಿಯಲ್ಲಿ ಬೆಳೆದ ಪದಾರ್ಥವೆಲ್ಲ ಅಲ್ಲಿಯೇ ವಿನಿಯೋಗವಾಗಬೇಕು. ಸ್ಥಳೀಯ ಆವಶ್ಯಕತೆಗಳನ್ನೆಲ್ಲ ಪೂರಯಿಸಿದ ಮೇಲೆ, ಉಳಿದುದನ್ನು ಮಾತ್ರವೇ ಹೊರಗೆ ಕಳಿಸಲು ಬಿಡಬೇಕು. ಗ್ರಾಮೋದ್ಯೋಗಗಳಿಗೆ ಅಗತ್ಯವಾದ ವಸ್ತುಗಳನ್ನು ಉತ್ಪತ್ತಿ ಮಾಡಬೇಕೇ ವಿನಾ ಗಿರಣಿಗಳಿಗೆ ಬೇಕಾದುದನ್ನು ಬೆಳೆಯಲಾಗದು.

**ಉಪಕರಣಗಳ ಸರಬರಾಜು:** ಗ್ರಾಮೋದ್ಯೋಗಗಳಿಗೆ ಬೇಕಾದ ಉಪಕರಣಗಳು ದೇಶದಲ್ಲಿ ಒಂದೇ ಬಗೆಯಾಗಿಲ್ಲ. ಒಂದೇ ಪ್ರಾಂತದಲ್ಲೂ ಒಂದೇ ಪ್ರಕಾರದ ಉಪಕರಣಗಳು ಇಲ್ಲ. ಉಪಯುಕ್ತವಾದ ಉಪಕರಣಗಳನ್ನು ಸಿದ್ಧಗೊಳಿಸಲು ತಕ್ಕ ಸಂಶೋಧನೆ ನಡೆಯಬೇಕು.

**ಜಿಲ್ಲಾ ಪ್ರದರ್ಶನ ಕೇಂದ್ರಗಳು:** ಸಹಕಾರ ಸಂಘಗಳ ಪ್ರದರ್ಶನ ಕೇಂದ್ರಗಳು ಹಳ್ಳಿಗಳಲ್ಲಿ ಇರಬೇಕು. ಅವುಗಳ ಕರ್ತವ್ಯ ಈ ರೀತಿ:

೧. ಹಳ್ಳಿಯ ಕೈಗಾರಿಕೆಯ ಕಸಬುದಾರರಿಗೆ ಬೇಕಾದ ಮುಟ್ಟು, ಉಪಕರಣಗಳನ್ನು ಉತ್ಪತ್ತಿ ಮಾಡಿ ಸರಬರಾಜು ಮಾಡುವುದು; ಹಳೆಯ ಉಪಕರಣಗಳ ಸ್ಥಾನದಲ್ಲಿ ಸುಧಾರಿಸಿದ ಹೊಸವನ್ನು ರೂಢಿಗೆ ತರುವುದು.

೨. ಬಡಗಿಗಳನ್ನು ಇತರ ಕೆಲಸಗಾರರನ್ನು ತರಬೇತು ಮಾಡಿ ಬೇರೆ ಬೇರೆ ಉದ್ಯೋಗಗಳಲ್ಲಿ ರೂಢಿಗೆ ಬಂದ ಹೊಸ ಪದ್ಧತಿಗಳನ್ನು ಅವರಿಗೆ ಕಲಿಸುವುದು.

೩. ಉಪಕರಣಗಳನ್ನು, ಸ್ಥಳದ ಕಲಾಕೃತಿಗಳನ್ನು ಸಂಗ್ರಹಿಸಿ ಒಂದು ಸಂಗ್ರಹಾಲಯದಲ್ಲಿಟ್ಟು ಪ್ರದರ್ಶಿಸುವುದು.

೪. ಜಿಲ್ಲೆಯಲ್ಲಿ ಔದ್ಯೋಗಿಕ, ಆರೋಗ್ಯ ವಿಷಯಕ ಪರಿಶೀಲನೆ ನಡೆಸುವುದು.

೫. ಇತರ ಸಹಕಾರ ಸಂಘಗಳೊಡನೆ, ಮೂಲಶಿಕ್ಷಣ ಶಾಲೆಯೊಡನೆ ಕೂಡಿ ಹಳ್ಳಿಯ ಪುರೋಭಿವೃದ್ಧಿಗಾಗಿ ದುಡಿಯುವುದು.

# ಪ್ರಕರಣ ೫

## ಗ್ರಾಮೋದ್ಯೋಗಗಳು

ವಿವಿಧೋದ್ದೇಶಗಳ ಸಹಕಾರ ಸಂಘಗಳು ಕಚ್ಚಾಮಾಲನ್ನು ಒದಗಿಸ ಬಹುದು, ಸಿದ್ಧವಾದ ಸಾಮಾನನ್ನು ಶೇಖರಿಸಬಹುದು, ಗ್ರಾಮೋದ್ಯೋಗಗಳಿಂದ ಉತ್ಪತ್ತಿಯಾದ ಪದಾರ್ಥಗಳನ್ನು – ಮುಖ್ಯವಾಗಿ ಆಹಾರ, ವಸ್ತ್ರ, ಇತರ ಪ್ರಾಥಮಿಕ ಆವಶ್ಯಕತೆಗಳಿಗೆ ಸಂಬಂಧಿಸಿದವುಗಳನ್ನು ಜನರಿಗೆ ಒದಗಿಸಿ ಹಂಚುವುದರಲ್ಲಿ ನೆರವಾಗಬಹುದು. ಹಳ್ಳಿಯವರ ಹಿತವನ್ನು ಸದಾ ಗಮನಿಸುತ್ತಲೇ ಇರಬೇಕು. ಮುಖ್ಯವಾಗಿ ಮುಂದೆ ಹೇಳುವ ಮಾತನ್ನು ಗಮನಿಸಬೇಕು :

೧. ಭತ್ತ : ೧. ಭತ್ತದ ಗಿರಣಿಗಳನ್ನು ನಿಲ್ಲಿಸಿ ಆ ಇಂಜಿನುಗಳನ್ನು ನೀರಾವರಿ ಕೆಲಸಕ್ಕೆ ಉಪಯೋಗಿಸಬೇಕು.

೨. ಭತ್ತವನ್ನು ತೊಳಿಸುವ ಹಲ್ಲರ್ ಯಂತ್ರಗಳನ್ನು ನಿಷೇಧಿಸಬೇಕು.

೩. ಗಿರಣಿಯಲ್ಲಿ ತೊಳಿಸದ ಅಕ್ಕಿಯಲ್ಲಿರುವ ಸತ್ವದ ವಿಷಯವನ್ನು ಜನರಿಗೆ ತಿಳಿಸಬೇಕು. ಆ ಅಕ್ಕಿಯನ್ನು ಅಡಿಗೆ ಮಾಡುವ ವಿಧಾನವನ್ನು ಪ್ರತ್ಯಕ್ಷವಾಗಿ ತೋರಿಸಬೇಕು. ಅಕ್ಕಿಯನ್ನು ಪಾಲಿಷು ಮಾಡುವುದನ್ನು ನಿಲ್ಲಿಸಬೇಕು. ಅಥವಾ ಇಷ್ಟಕ್ಕಿಂತ ಹೆಚ್ಚು ಪಾಲಿಷು ಮಾಡಬಾರದೆಂದು ಕಟ್ಟುಮಾಡಬೇಕು. ಭತ್ತವನ್ನು ಕುಸುಬಲಕ್ಕಿಯಾಗಿ ಮಾಡುವಂತೆ ಪ್ರೋತ್ಸಾಹಿಸಬೇಕು.

೪. ಪ್ರಧಾನವಾಗಿ ಭತ್ತವನ್ನೇ ಬೆಳೆವ ಗದ್ದೆಯ ಸೀಮೆಯಲ್ಲಿ ವ್ಯಾಪಾರದ ಉದ್ದೇಶ್ಯದಿಂದ ಭತ್ತ ಕುಟ್ಟುವುದನ್ನೇ ಒಂದು ದೊಡ್ಡ ಉದ್ಯೋಗವಾಗಿ ಮಾಡಿದ ಕಡೆ ಬೇರೆ ಬೇರೆ ಯಂತ್ರೋಪಕರಣಗಳನ್ನು ಸಹಕಾರ ಸಂಘದ ಮೂಲಕ ಕೆಲಸಗಾರರಿಗೆ ಬಾಡಿಗೆಯ ಮೇಲೆ ಒದಗಿಸಬೇಕು.

೫. ಪಾಲಿಷ್ ಮಾಡದ ಅಕ್ಕಿಯನ್ನು ಬಳಸಿ ಎಂದು ಪ್ರಚಾರ ಮಾಡಿದರೆ ಅಕ್ಕಿಯ ಬದಲು ಭತ್ತವನ್ನು ಸ್ಥಳದಿಂದ ಸ್ಥಳಕ್ಕೆ ಸಾಗಿಸ ಬೇಕಾಗುತ್ತದೆ. ಆಗ ಅದನ್ನು ಸಾಗಿಸುವ ವೆಚ್ಚ ಹೆಚ್ಚಾಗಿ, ಅಕ್ಕಿಯ ಬೆಲೆ ಏರದಂತೆ ಸಾಗಣೆಯ ಬಾಡಿಗೆಯನ್ನು ವ್ಯವಸ್ಥೆ ಮಾಡಬೇಕು.

೬. ಭತ್ತ ಸುಲಿಯುವುದು, ಅಕ್ಕಿ ತೊಳೆಸುವುದು, ಎರಡನ್ನೂ ಸಾಧಿಸುವ ಭತ್ತದ ಕುಟ್ಟುವಿಕೆಯನ್ನು ನಿಲ್ಲಿಸಲು, ಆಯಾ ಸ್ಥಳಗಳಲ್ಲಿ ಭತ್ತಸುಲಿಯುವ ಕಲ್ಲುಗಳನ್ನು ಪ್ರಚಾರಕ್ಕೆ ತರಬೇಕು. ಜಿಲ್ಲಾ ಪ್ರದರ್ಶನ ಕೇಂದ್ರಗಳ ಮೂಲಕ ಆ ಉಪಕರಣಗಳನ್ನು ಒದಗಿಸಬೇಕು. ಅಕ್ಕಿ ಯನ್ನು ಬೆಳ್ಳಗೆ ತೊಳೆಸುವ ಯಂತ್ರ–ಉಪಕರಣಗಳ ಮೇಲೆ ತೆರಿಗೆ ಹಾಕಿ, ಅಕ್ಕಿಯನ್ನು ಪಾಲಿಷ್ ಮಾಡುವ ಪದ್ಧತಿಯನ್ನು ತಪ್ಪಿಸಬೇಕು. ಈ ಉಪಕರಣಗಳಿಂದ ಇಷ್ಟೇ ಮಟ್ಟಿಗೆ ಪಾಲಿಷ್ ಮಾಡಬಹುದೆಂದು ನಿಯಂತ್ರಣ ಮಾಡಬೇಕು.

ಹಳ್ಳಿಗೆ ಅಗತ್ಯವಾದ ಭತ್ತ, ಬೇರೆ ದವಸ, ಬೀಜದ ದವಸಗಳನ್ನು ಹಳ್ಳಿಯಲ್ಲಿಯೇ ಶೇಖರಿಸಿಡಬೇಕು. ಹೆಚ್ಚಾದುದನ್ನು ಸಹಕಾರ ಸಂಘದ ಮೂಲಕ ಹೊರಗೆ ಕಳಿಸಬಹುದು.

೨. ಹಿಟ್ಟು ಬೀಸುವುದು: ೧. ಜಿಲ್ಲಾ ಪ್ರದರ್ಶನ ಕೇಂದ್ರಗಳ ಮೂಲಕ ಒಳ್ಳೆಯ ಬೀಸುವ ಕಲ್ಲುಗಳನ್ನೂ, ಎತ್ತನ್ನು ಕಟ್ಟಿ ತಿರುಗಿ ಸುವ, ನೀರಿನಿಂದ ನಡೆಸುವ ಬೀಸುವ ಕಲ್ಲುಗಳಿಗೆ ಬೇಕಾದ ಸಾಮಗ್ರಿ ಯೆಲ್ಲವನ್ನೂ ಒದಗಿಸಬೇಕು.

೨. ಬಿಳೀ ಮೈದಾಹಿಟ್ಟನ್ನು ಬೀಸದ ಹಾಗೆ ನಿಷೇಧಿಸಬೇಕು.

೩. ಹಿಟ್ಟಿನ ಗಿರಣಿಗಳು ಮೂಟೆಮೂಟೆ ದವಸವನ್ನು ಹಿಟ್ಟು ಮಾಡಿ ಬಹಳ ದಿನ ತಮ್ಮಲ್ಲಿಯೆ ಸಂಗ್ರಹಿಸಿ ಇಟ್ಟುಕೊಳ್ಳುತ್ತವೆ. ಇದ ರಿಂದ ಆ ಹಿಟ್ಟಿನಲ್ಲಿ ಸಾರವೆಲ್ಲ ನಾಶವಾಗುತ್ತದೆ, ಹಿಟ್ಟು ಕೆಡುತ್ತದೆ. ಆದುದರಿಂದ ಅಂಥ ಗಿರಣಿಗಳನ್ನು ಪ್ರೋತ್ಸಾಹಿಸಬಾರದು.

೪. ಎಲ್ಲಿ ಅನುಕೂಲಗಳಿವೆಯೋ ಅಲ್ಲಿ ಎತ್ತು ಕಟ್ಟಿ ಹಿಟ್ಟು ಬೀಸುವ ವ್ಯವಸ್ಥೆ ಮಾಡಬೇಕು.

೫. ನದಿ, ಕಾಲುವೆ ಹರಿಯುವ ಕಡೆ ಅದರಿಂದ ಜಲಶಕ್ತಿ ಸಿಗು

ವಂತಿದ್ದರೆ, ಅದನ್ನು ಉಪಯೋಗಿಸಿ ಹಿಟ್ಟು ಬೀಸುವ ದೊಡ್ಡ ಕಲ್ಲು ಗಳನ್ನು ಏರ್ಪಾಟು ಮಾಡಬೇಕು.

೬. ಪಂಜಾಬಿನಲ್ಲಿ ಇಂಥ ದೊಡ್ಡ ಕಲ್ಲುಗಳನ್ನು ಊರೊಟ್ಟಿನಲ್ಲಿ ಇಟ್ಟುಕೊಂಡಿದಾರೆ. ಉಳಿದ ಕಡೆಯಲ್ಲಿಯೂ ಹಾಗೆಯೆ ಮಾಡಬಹುದು.

೩. ಎಣ್ಣೆಯ ಗಾಣ: ಹಳ್ಳಿಯ ಎಣ್ಣೆಗಾಣಗಳನ್ನು ಪುನರುಜ್ಜೀವನ ಗೊಳಿಸುವುದರಲ್ಲಿ ಇರುವ ಅಡಚಣೆಗಳು ಮುಖ್ಯವಾಗಿ ಇವು:

ಸುಗ್ಗಿಯಲ್ಲಿಯೇ ಹಳ್ಳಿಯಲ್ಲಿ ಬೆಳೆದ ಎಣ್ಣೆಯ ಬೀಜವೆಲ್ಲ ನಿಶ್ಶೇಷ ವಾಗಿ ಹೊರಗೆ ಸಾಗಿಹೋಗುತ್ತದೆ. ಊರಿನ ಗಾಣಗಳಿಗೆ ಸಾಕಾಗಿ ಉಳಿದ ಎಣ್ಣೆಯ ಬೀಜ ಮಾತ್ರವೇ ಊರಿನಿಂದ ಹೊರಗೆ ಹೋಗುವಂತೆ, ಮೊಟ್ಟಮೊದಲು ವ್ಯವಸ್ಥೆ ಮಾಡಬೇಕು.

ಹಲವು ಕಡೆ ಹಳ್ಳಿಯ ಗಾಣಗಳು ಬಹಳ ಚಿಕ್ಕವು. ಸರಿಯಾದ ಪ್ರಮಾಣದಲ್ಲಿ ಎಣ್ಣೆಕೊಡುತ್ತಿಲ್ಲ. ಅವನ್ನು ನಡೆಸಿ ಬದುಕು ನಡೆಸುವ ಹಾಗಿಲ್ಲ. ಒಂದೊಂದು ಪ್ರಾಂತದಲ್ಲಿಯೂ ಹಲವಾರು ಬಗೆಯ ಗಾಣ ಗಳಿವೆ. ಇವೆಲ್ಲ ಗಾಣಗಳನ್ನು ವಿಶದವಾಗಿ ಪರಿಶೀಲಿಸಬೇಕು. ಸುಧಾರಿತ ವಾದ ಹೊಸ ಗಾಣಗಳ ವಿಶೇಷ ಗುಣಗಳನ್ನೂ ಅದನ್ನು ನಡಸುವ ರೀತಿಯನ್ನೂ ಪ್ರದರ್ಶಿಸಬೇಕು.

ಹಳೆಯ ರೀತಿಯ ಗಾಣಗಳನ್ನು ಮಾಡುವ ಬಡಗಿಗಳೂ ಸಹ ಈಗ ಹೆಚ್ಚಾಗಿಲ್ಲ. ಅನೇಕ ವೇಳೆ ಗಾಣಿಗರಿಗೆ ಸಕಾಲಕ್ಕೆ ಬಡಗಿಗಳ ನೆರವು ಸಿಗದು. ಗಾಣದ ಚಿಲ್ಲರೆ ಭಾಗಗಳಾಗಲಿ ತತ್ಸಂಬಂಧವಾದ ಸಾಮಗ್ರಿ ಯಾಗಲಿ ಸಿಗುವುದು ಬಹಳ ಕಷ್ಟ. ಆದುದರಿಂದ ಗಾಣವಾಡುವವರಿಗೂ ಬಡಗಿಗಳಿಗೂ ಈ ಸುಧಾರಿಸಿದ ಗಾಣಗಳ ಬಗ್ಗೆ ಶಿಕ್ಷಣ ಕೊಡಬೇಕು. ಆ ಶಿಕ್ಷಣಕೇಂದ್ರಗಳಲ್ಲಿ ಗಾಣದ ಭಾಗಗಳೂ ಚಿಲ್ಲರೆ ಮುಟ್ಟೂ ಸಿಗು ವಂತಿರಬೇಕು.

೪. ಬೆಲ್ಲದ ಕೈಗಾರಿಕೆ: ಬಂಗಾಳದಲ್ಲಿ ಮದರಾಸಿನಲ್ಲಿ ತಾಳೆ ಬೆಲ್ಲ ವನ್ನು ಮಾಡುವ ಕೈಗಾರಿಕೆ ಸ್ಥಿರಗೊಂಡಿದೆ. ಒಂದು ವ್ಯಾಪಾರವಾಗಿಯೆ ನಡೆಯುತ್ತಿದೆ.

ತಾಳೆಗಿಡಗಳ ಸಂರಕ್ಷಣೆ, ವೃದ್ಧಿ: ತಾಳೆ ಗಿಡಗಳನ್ನು ಕಡಿಯು

ವುದನ್ನು ತಡೆಯುಬೇಕು. ಸಾಗುವಳಿಗೆ ಯೋಗ್ಯವಲ್ಲದ ಸರಕಾರಿ ಭೂಮಿಯನ್ನು ತಾಳೆ-ವನಗಳನ್ನು ಬೆಳೆಸಲು ಉಪಯೋಗಿಸಬೇಕು. ಕ್ರಮೇಣ ಕಬ್ಬಿನ ಬೆಲ್ಲದ ಬದಲು ತಾಳೆಯ ಬೆಲ್ಲವನ್ನೇ ಬಳಕೆಗೆ ತರಬೇಕು. ಖಾಸಗಿ ಹೊಲಗಳಲ್ಲಿಯೂ ಹೊಲದ ಬದುಗಳಲ್ಲಿಯೂ ತಾಳೆಗಿಡಗಳನ್ನು ಬೆಳೆಯುವಂತೆ ಪ್ರೋತ್ಸಾಹಿಸಬೇಕು. ಸರಿಯಾದ ಬೀಜಗಳನ್ನು ಒದಗಿಸಿ, ಯೋಗ್ಯ ಕೃಷಿ ವಿಧಾನವನ್ನು ತಿಳಿಸಬೇಕು.

ಸಹಕಾರ ಸಂಘಗಳು ಈ ಉತ್ಪಾದನೆ, ವ್ಯಾಪಾರಗಳನ್ನು ಕೈಗೆ ತೆಗೆದುಕೊಳ್ಳಬೇಕು. ಅಗತ್ಯವಿದ್ದಲ್ಲೆಲ್ಲ ಬೆಲ್ಲಮಾಡುವ ಕಡಾಯಿ, ಕೊಪ್ಪರಿಗೆ ಮುಂತಾದ ಸಾಮುಗ್ರಿಗಳನ್ನು ಒದಗಿಸಬೇಕು.

**೫. ಜೇನು ಸಾಕಣೆ:** ಜೇನು ಸಾಕುವುದು ಎರಡು ಬಗೆಯಲ್ಲಿ ಲಾಭಕರ. ಅದರಿಂದ ಪೈರು ಹೆಚ್ಚು ಹುಲುಸಾಗಿ, ರೈತರಿಗೆ ಹೆಚ್ಚು ಬೆಳೆ ಸಿಗುತ್ತದೆ. ಜೊತೆಗೆ ಪುಷ್ಟಿಕರ ಆಹಾರವಾದ ಜೇನುತುಪ್ಪವೂ ಸಿಗುತ್ತದೆ.

ಪ್ರದರ್ಶನ ಕೇಂದ್ರಗಳಲ್ಲಿ ಒಂದೆರಡು ಪೆಟ್ಟಿಗೆ ಇಟ್ಟು ಜೇನು ಸಾಕಣೆ ನಡಸಬೇಕು. ಆಮೇಲೆ ಜೇನು ಸಾಕಣೆಗೆ ಯೋಗ್ಯವಾದ ಬನಸಿರಿ ಇರುವಲ್ಲೆಲ್ಲ ಅದನ್ನು ಪ್ರಾರಂಭಿಸಬಹುದು. ಇದಕ್ಕಾಗಿ ಜೇನು ಸಾಕಣೆಯ ವಿದ್ಯೆಯನ್ನು ಬಲ್ಲವರೊಬ್ಬರಿಂದ ಮೊದಲು ಆ ಕ್ಷೇತ್ರ ಪರಿಶೀಲನೆಮಾಡಿಸಬೇಕು. ಜೇನುನೊಣಗಳನ್ನು ಸ್ವಲ್ಪ ಪಳಗಿಸಿ ಬಿಟ್ಟರೆ–ಆ ಕೇಂದ್ರದಲ್ಲಿ ಹಳ್ಳಿಯವರಿಗೆ ಶಿಕ್ಷಣಕೊಟ್ಟು ಅವರಿಗೆ ಸುಲಭ ಧಾರಣೆಗೆ ಸಲಕರಣೆಗಳನ್ನು ಒದಗಿಸಬಹುದು.

**೬. ಹತ್ತಿ-ಉಣ್ಣೆ:** ಹತ್ತಿ ಬೆಳೆಯುವ ಪ್ರದೇಶದಲ್ಲಿ ಕನಿಷ್ಠಪಕ್ಷ ತಲಾ ೧೨ ವರೆ ಎಕರೆ ಆಗುವಷ್ಟು ನೆಲವನ್ನು ಆಯಾ ಸ್ಥಳದ ಜನ ಸಂಖ್ಯೆಗನುಗುಣವಾಗಿ ಬಿಡಬೇಕು. ಅಖಿಲ ಭಾರತ ಚರಖಾ ಸಂಘದ ನಿಯಮದಂತೆ ನೂಲುವಿಕೆ–ನೇಕಾರಿಕೆಯನ್ನು ಕಲಿಸಬೇಕು.

ಇದೇ ರೀತಿ ಕುರಿ ಸಾಕುವ ಸ್ಥಳಗಳಲ್ಲಿ, ಕುರಿ-ಸಾಕಣೆ, ಉಣ್ಣೆ ಶೋಧನೆ ಮುಂತಾದವುಗಳಿಗೆ ನೆರವನ್ನು ನೀಡಿ ಉಣ್ಣೆ ಬಟ್ಟೆಗಳ ಉತ್ಪತ್ತಿಯನ್ನು ವೃದ್ಧಿಗೊಳಿಸಬೇಕು.

೭. ಚರ್ಮ ಹದಮಾಡುವಿಕೆ: ದೇಶದಿಂದ ಹೊರಕ್ಕೆ ತೊಗಲು-ಚರ್ಮಗಳನ್ನು ರಫ್ತು ಮಾಡುವುದರಲ್ಲಿ ಜಗತ್ತಿನಲ್ಲೆಲ್ಲ ಭಾರತವೇ ಮೊದಲನೆಯದು. ಈ ಪದಾರ್ಥವನ್ನೆಲ್ಲಾ ನಾವೇ ಹದಮಾಡಿದರೆ ಲಕ್ಷಗಟ್ಟಲೆ ಹರಿಜನರಿಗೆ ಅದರಿಂದ ಜೀವನೋಪಾಯ ಸಿಗುತ್ತದೆ. ಇದರಲ್ಲಿ ಹದಮಾಡುವ ಕೌಶಲವೇ ಮುಖ್ಯ. ಇದಕ್ಕೆ ಹೇರಳವಾಗಿ ಹಣ ಬೇಕು. ಆದುದರಿಂದ ಈ ಕೆಲಸ ಸಹಕಾರ ಪದ್ಧತಿಯಿಂದ ನಡೆದರೆ ಉತ್ತಮ. ಸಂಘಗಳು ಸತ್ತ ಪ್ರಾಣಿಗಳ ಚರ್ಮವನ್ನು ಕೊಂಡು, ಉಳಿದ ಎಲ್ಲಾ ಕೆಲಸಗಳಿಗೂ ಕೂಲಿಕೊಟ್ಟು, ಆ ಪದಾರ್ಥಗಳನ್ನು ಪೇಟೆಯಲ್ಲಿ ಮಾರಬೇಕು.

೧. ಎಲ್ಲಾ ಪ್ರಾಂತಗಳಲ್ಲಿಯೂ ಚರ್ಮವನ್ನು ಹದಮಾಡುತ್ತಾರೆ. ಈ ಕೆಲಸ ಎಲ್ಲಾ ಕಡೆಯಲ್ಲಿಯೂ ಒಂದೇ ಮಟ್ಟದಲ್ಲಿಲ್ಲ. ಕಲ್ಕತ್ತೆಯ "ಕ್ರೋಮ್" ಮದರಾಸಿನ 'ಗಾವಿ'ಗಳು ಉತ್ತಮವಾಗಿವೆ. ಅವನ್ನು ಎಲ್ಲಾ ಕಡೆ ಮಾಡರು. ಉಳಿದ ಮಾದರಿಗಳು ಇವೆರಡಕ್ಕಿಂತ ಕೆಳಮಟ್ಟದವು. ಇದಕ್ಕೆ ಕಾರಣವನ್ನು ತಿಳಿದುಕೊಂಡು ಎಲ್ಲಾ ಕಡೆಯೂ ಒಂದೇ ರೀತಿಯ ಹದವನ್ನು ತರಬೇಕು.

೨. ಹದಮಾಡದ ಚರ್ಮ, ತೊಗಲುಗಳನ್ನು ರಫ್ತುಮಾಡದಂತೆ ಅದರ ಮೇಲೆ ಹೆಚ್ಚಿನ ಸುಂಕ ಹಾಕಿ ನಿಲ್ಲಿಸಬೇಕು.

೩. ಸತ್ತ ಪ್ರಾಣಿಗಳನ್ನು ಸಾಗಿಸಲು ಒಂದೊಂದು ಗುಂಪು ಕೆಲಸಗಾರರಿಗೆ ಒಂದು ಗಾಡಿಯನ್ನು ಸಹಕಾರ ಸಂಘಗಳು ಒದಗಿಸಬೇಕು. ಈಗ ಈ ಸೌಕರ್ಯವಿಲ್ಲದೆ ಸತ್ತ ಪ್ರಾಣಿಯನ್ನು ನೆಲದ ಮೇಲೆ ಎಳೆಯುತ್ತಾರೆ. ಇದರಿಂದ ಚರ್ಮದ ಬೆಲೆ ರೂಪಾಯಿಗೆ ಎಂಟಾಣೆ ಕಡಮೆಯಾಗುತ್ತದೆ ಎಂದು ಅಂದಾಜು ಮಾಡಿದಾರೆ.

೪. ಈಗ ಈ ಕೈಗಾರಿಕೆ ನಡೆಯುತ್ತಿರುವ ಸನ್ನಿವೇಶ ತೀರಾ ಅನಾರೋಗ್ಯಕರ. ಕೂಡಲೇ ಅದನ್ನು ಸರಿಪಡಿಸಬೇಕು. ಹಳ್ಳಿಯ ವಸತಿಗೆ ಸ್ವಲ್ಪ ದೂರವಾಗಿ ಒಂದು ಸ್ಥಳದಲ್ಲಿ ಸರಿಯಾದ ಗುಡಿಸಲುಗಳು, ಗುಂಡಿಗಳು, ನೀರು ಹರಿಯುಲು ಕಾಲುವೆಗಳು, ನೀರಿನ ಸರಬರಾಜು

ಮುಂತಾದ ಏರ್ಪಾಟು ಮಾಡಿ, ಕೆಲವು ಅಶಾಸ್ತ್ರೀಯ ಪದ್ಧತಿಗಳನ್ನು ಬದಲಿಸಿ ಚಿಕ್ಕ ಪುಟ್ಟ ಯಂತ್ರ-ಸಲಕರಣೆಗಳನ್ನು ಬಳಸಿದರೆ ಇದು ಸಾಧ್ಯ. ಹಳ್ಳಿಗೊಬ್ಬರಂತೆ ಇಬ್ಬರಂತೆ ಚದರಿ ಹೋಗಿರುವ ಚಮ್ಮಾರ ರನ್ನು ಈ ಕೈಗಾರಿಕೆಗಾಗಿ ಒಂದೊಂದು ಹೋಬಳಿಯಲ್ಲೂ ಒಂದೇ ಕಡೆ ಒಂದು ಚರ್ಮಾಲಯದ ಸುತ್ತಲೂ ಸೇರಿಸಬೇಕಾದರೆ, ಅದೂ ಒಳಿತೆ. ಅಂಥ ಚರ್ಮಾಲಯಗಳನ್ನು ಸಹಕಾರ ಸಂಘಗಳು ಸ್ಥಾಪಿಸಿ ನಡೆಸ ಬಹುದು. ಆ ಸಂಘಗಳಲ್ಲಿ ಚಮ್ಮಾರರು ಮಾತ್ರವೇ ಸದಸ್ಯರಾಗಿರ ಬೇಕು.

೫. ಈಗ ಒಂದೆರಡು ಸ್ಥಳಗಳಲ್ಲಿ ಮಾತ್ರ ಚರ್ಮದ ಪದಾರ್ಥ ಬಹಳ ದೊಡ್ಡ ಪ್ರಮಾಣದಲ್ಲಿ ತಯಾರಾಗುತ್ತಿದೆ. ಅಲ್ಲಿಂದ ಅವನ್ನು ಇಡೀ ದೇಶದ ಮೂಲೆಮೂಲೆಗೂ ಸರಬರಾಜು ಮಾಡುತ್ತಾರೆ. ಈ ವ್ಯವಸ್ಥೆಯನ್ನು ತಪ್ಪಿಸಿ ಆಯಾ ಸ್ಥಳದಲ್ಲಿಯೇ ಸಾಮಾನ್ಯವಾಗಿ ಚರ್ಮದ ಎಲ್ಲಾ ಪದಾರ್ಥಗಳನ್ನೂ-ಉದಾ: ಎಕ್ಕಡ, ಹಣದ ಚೀಲ, ಕೈಪೆಟ್ಟಿಗೆ, ನಡುಕಟ್ಟು ಇತ್ಯಾದಿ-ಮಾಡುವಂತೆ ಪ್ರಯತ್ನಿಸಬೇಕು. ಸ್ಥಳೀಯ ಪದಾರ್ಥಗಳಿಗೆ ದ್ರವ್ಯ ಸಹಾಯವನ್ನಾದರೂ ಕೊಡಬಹುದು; ಹೊರಗಿನಿಂದ ತರಿಸುವ ಪದಾರ್ಥಗಳಿಗೆ ಸುಂಕವನ್ನಾದರೂ ಹಾಕಬಹುದು.

ಸತ್ತ ಪ್ರಾಣಿಗಳ ಮಾಂಸ ರಕ್ತ ಮೂಳೆಗಳಿಂದ ಗೊಬ್ಬರ ಮಾಡಲು ಖಾಸಗಿ ಗುತ್ತಿಗೆದಾರರಿಗಾಗಲಿ ಸಹಕಾರ ಸಂಘಗಳಿಗಾಗಲಿ ಸಹಾಯ ಧನ ಕೊಡಬೇಕು. ಎಷ್ಟು ಗೊಬ್ಬರ ಮಾಡಿದರೆ ಅಷ್ಟು ಪ್ರಮಾಣದಲ್ಲಿ ಸಹಾಯ.

೬. ಗೋಂದು, ನರಗಳು, ಬ್ರಷ್ಷು ಮುಂತಾದ ಇತರ ಪದಾರ್ಥ ಗಳನ್ನೂ ಈ ಸಂಘಗಳು ತಯಾರು ಮಾಡಬಹುದು. ಚಮ್ಮಾರರ ಮನೆ ಗಳಲ್ಲಿ ಕೊಂಬಿನ ಕೈಗಾರಿಕೆಯನ್ನು ಪ್ರವೇಶ ಮಾಡಿಸಿ ಲಾಭದಾಯಕ ವಾಗಿ ಮಾಡಬಹುದು. ಕೆಲವು ಕಾಲ ಆ ಕೈಗಾರಿಕೆಗೆ ಸರಕಾರ ಸಹಾಯ ನೀಡಿ, ತಯಾರಾದ ಪದಾರ್ಥಗಳನ್ನು ಕೊಳ್ಳಬೇಕು. ಕೈಗಾರಿಕೆಗೆ ಬೇಕಾದ ಉಪಕರಣಗಳನ್ನು ಬಾಡಿಗೆಗೆ ಅಥವಾ ಕಂತುಗಳಲ್ಲಿ ಒದಗಿಸ ಬೇಕು.

೮. **ಸಾಬೂನು ಮಾಡುವುದು :** ಸಾಬೂನಿನ ರಚನೆಗೆ ತಕ್ಕ ಮಣ್ಣಿನ ಪರಿಶೀಲನೆ ನಡೆಯಬೇಕು. ಎಲ್ಲೆಲ್ಲಿ ಆ ಮಣ್ಣು ಇದೆಯೋ ಗೊತ್ತಾಗಬೇಕು. ಅದನ್ನು ಸಾಬೂನು ಮಾಡುವವರು ಉಚಿತವಾಗಿ ಉಪಯೋಗಿಸಲು ಅವಕಾಶವಿರಬೇಕು. ಅದಕ್ಕೆ ಯಾವ ತೆರಿಗೆ, ಸುಂಕವೂ ಇರಬಾರದು. ಈ ಸವುಳು ಮಣ್ಣನ್ನು ಕೆರೆದು ಹಾಕುವುದರಿಂದ ಭೂಮಿ ಉತ್ತಮಗೊಳ್ಳುತ್ತದೆಯೆಂಬುದನ್ನು ನೆನಪಿಡಬೇಕು. ಸವುಳು ಮಣ್ಣಿನ ಕ್ಷಾರಜಲವನ್ನೂ ತಿನ್ನಲು ಯೋಗ್ಯವಲ್ಲದ ಎಣ್ಣೆಗಳನ್ನೂ ಹಳ್ಳಿಗಳಲ್ಲಿ ಸಾಬೂನು ಮಾಡಲು ಉಪಯೋಗಿಸಬೇಕು.

೯. **ದೀಪ :** ಬೇವು, ಪಾರ್ಡಿ, ಹಿಪ್ಪೆ, ಹೊಂಗೆ ಮುಂತಾದ ಸೇವನೆಗೆ ಯೋಗ್ಯವಲ್ಲದ ಎಣ್ಣೆಗಳಿಗೆ ಈಗ ಉಪಯೋಗ ಬಹಳ ಕಡಮೆ. ಅವನ್ನು ದೀಪಕ್ಕಾಗಿ ಬಳಸಬೇಕು. ದೀಪದ ವಿಷಯದಲ್ಲಿ ಪ್ರತಿ ಗ್ರಾಮವೂ ಸ್ವಾವಲಂಬಿಯಾಗಿರುವಂತೆ ಪ್ರಯತ್ನಿಸಬೇಕು.

ಅಖಿಲ ಭಾರತ ಗ್ರಾಮೋದ್ಯೋಗ ಸಂಘದವರು ತಯಾರಿಸಿದ 'ಮಗನ್ ದೀಪ'ದಂಥ ವನಸ್ಪತಿ ತೈಲದ ದೀಪಗಳನ್ನು ಅಲ್ಲಲ್ಲಿ ಪ್ರದರ್ಶಿಸಬೇಕು. ಸ್ಥಳೀಯ ಕೆಲಸಗಾರರು ಇವನ್ನು ಮಾಡಲು ಪ್ರೋತ್ಸಾಹಿಸಬೇಕು.

೧೦. **ಕಾಗದ ಮಾಡುವುದು :** ೧. ಕಾಗದ ಮಾಡಲು ಬೇಕಾದ ಸಾಮಗ್ರಿ ಸ್ಥಳದಲ್ಲಿಯೆ ಸಿಗುವ ಕಡೆ ಸೆರೆಮನೆಗಳಲ್ಲಿ ಸರಕಾರ ಈ ಕೈಗಾರಿಕೆಯನ್ನು ಪ್ರಾರಂಭಿಸಬಹುದು. ಇದಕ್ಕಾಗಿ ಸ್ಥಳದಲ್ಲಿ ಸಿಗುವ ಕಚ್ಚಾ ಸಾಮಗ್ರಿಯ ಪರಿಶೀಲನೆಯನ್ನು ಒಬ್ಬ ತಜ್ಞನಿಂದ ಮಾಡಿಸಬೇಕು.

೨. ಕಾಗದ ಮಾಡಲು ಬೇಕಾಗುವ ರಾಸಾಯನಿಕ ಪದಾರ್ಥಗಳನ್ನು ಸಹಕಾರ ಸಂಘಗಳು ಈ ಕೈಗಾರಿಕೆಯ ಕೇಂದ್ರಗಳಿಗೆ ನಿಗದಿಯಾದ ಬೆಲೆಗೆ ಒದಗಿಸಬೇಕು.

೩. ಇಂಥ ಎಲ್ಲಾ ಕೈಗಾರಿಕೆಗಳಿಗೂ ಅಗತ್ಯವಾಗುವ ಯಂತ್ರೋಪಕರಣಗಳನ್ನು ಮಾಡಲು ಒಂದು ಕೇಂದ್ರ ಉದ್ಯೋಗ ಮಂದಿರವಿರಬೇಕು. ಆಧುನಿಕ ಉಪಕರಣಗಳನ್ನು ಸಂಘಗಳು ಕೆಲಸಗಾರರಿಗೆ ಒದಗಿಸಬೇಕು.

೪. ಕಾಗದ ಮಾಡಲು ಉಪಯೋಗವಾಗುವ ಕಚೇರಿ ಹಳೇ ಕಾಗದಪತ್ರ ಚಿಂದಿಕಾಗದ, ಸರಕಾರಿ ಅಡವಿಗಳಲ್ಲಿರುವ ಹುಲ್ಲು, ಇವನ್ನು ಕಾಗದದ ತಿಳಲು ಮಾಡಲು ಕಾಗದದ ಕೈಗಾರಿಕೆಯ ಕೇಂದ್ರಗಳಿಗಾಗಿ ಮೀಸಲಾಗಿಡಬೇಕು. ಸಂಘಗಳ ಮೂಲಕ ಒದಗಿಸಬೇಕು. ಅದೇ ರೀತಿ ಕೇಂದ್ರಗಳು ಮಾಡಿದ ಕಾಗದವನ್ನು ಈ ಸಂಘಗಳ ಮೂಲಕವೇ ಸರಕಾರ ತನ್ನ ಕಚೇರಿ ಕಾಗದ ಪತ್ರಗಳಿಗೆ ಬಳಸಲು ಕೊಳ್ಳಬೇಕು. ಕೈಗಾರಿಕೆಗೆ ನಾಲ್ಕು ಕಾಸು ಗಿಟ್ಟುವಂತೆ ಧಾರಣೆ ಕಟ್ಟಬೇಕು.

೫. ತರಬೇತು–ಈ ಕೇಂದ್ರಗಳಿಗೆ ಬೇಕಾದ ಶಿಕ್ಷಕರನ್ನು ಪ್ರಾಂತೀಯ ಶಿಕ್ಷಣ ಕೇಂದ್ರದಲ್ಲಿ ತರಬೇತು ಮಾಡಬೇಕು.

೬. ಕೈಕಾಗದದ ಸಾಗಾಣಿಕೆಗೆ ರೈಲಿನಲ್ಲಿ ಮೊದಲು ಅವಕಾಶ ಕೊಡುವಂತೆ ವ್ಯವಸ್ಥೆ ಮಾಡಬೇಕು. ಹೆಚ್ಚಿನ ಸುಂಕ, ತೆರಿಗೆ ಯಾವುದನ್ನೂ ಅದಕ್ಕೆ ಹಾಕಬಾರದು.

**೧೧. ಕುಂಬಾರ ಗೆಲಸ:** ೧. ಇದಕ್ಕೆ ಮೊಟ್ಟಮೊದಲು ಮಾಡಬೇಕಾದುದು ಆ ಪ್ರಾಂತದ ಜೇಡಿಮಣ್ಣಿನ ಪರಿಶೀಲನೆ, ಪರೀಕ್ಷೆ. ಸರಕಾರ ಇದನ್ನು ಮಾಡಬೇಕು.

೨. ಜೇಡಿಮಣ್ಣನ್ನು ಕಲೆಸುವುದೂ ಒಂದು ಕಲೆ. ಅದಕ್ಕೆ ರಸಾಯನಶಾಸ್ತ್ರ ಜ್ಞಾನವೂ ಬೇಕು. ಆದುದರಿಂದ ಸಹಕಾರಸಂಘ, ಸೆರೆಮನೆ, ಇಂಥ ಮಧ್ಯಪ್ರದೇಶಗಳಲ್ಲಿ ಇದನ್ನು ಮಾಡಬೇಕು. ಆ ಮೇಲೆ ಆ ಮಣ್ಣನ್ನು ಬೇರೆ ಬೇರೆ ಕುಂಬಾರರಿಗೆ ಕೊಡಬೇಕು. ಈಗ ಕೆಲಸ ಮಾಡುತ್ತಿರುವ ಕುಂಬಾರರಿಗೇ ಮಣ್ಣನ್ನು ಶಾಸ್ತ್ರೀಯವಾಗಿ ಕಲೆಸುವ ಕಲೆಯನ್ನು ಕಲಿಸಿದರೂ ಸರಿಯೆ.

೩. ಉಳಿದ ಕೈಗಾರಿಕೆಗಳಿಗಿದ್ದ ಹಾಗೆ ಸಹಕಾರ ಸಂಘಗಳು ಕುಂಬಾರನ ಚಕ್ರವನ್ನೂ (ಸುಧಾರಿಸಿದುದು) ಮಣ್ಣನ್ನೂ ಒದಗಿಸಬೇಕು.

೪. ಕೆಲವು ಗಡಿಗೆ–ಮಡಕೆಗಳನ್ನು ನಯ ಮಾಡಿ ಸುಡುವುದನ್ನು ಒಟ್ಟಾಗಿ ಮಾಡಬೇಕು. ಮಣ್ಣನ್ನು ಕಲೆಸುವುದು, ಸುಡುವುದು, ನಯ ಮಾಡುವುದು ಪರಸ್ಪರ ಸಹಕಾರದಿಂದ ನಡೆಯಬೇಕು. ಹೆಚ್ಚು ಶಾಖ ಬೇಕಾಗದ ಪಾತ್ರೆಗಳನ್ನು ಸುಡಲು ಹಳ್ಳಿಗಳಲ್ಲಿ ಈಗ ಮಾಡುತ್ತಿ

ರುವಂಥವು-ಉತ್ತಮ ಸಲಕರಣೆಗಳನ್ನು ಒದಗಿಸಬೇಕು. ಸರಿಯಾಗಿ ಕಟ್ಟಿದ ಕುಲುಮೆಯಲ್ಲಿ ಉರವಲಿನ ವೆಚ್ಚ ಕಡಮೆ.

ಹೆಂಚು ಇಟ್ಟಿಗೆ ಸುಡಲು ಬೇಕಾದ ದೊಡ್ಡ ಕುಲಿಮೆಗಳನ್ನು ಸಹಕಾರ ರೀತಿಯಲ್ಲಿ ಏರ್ಪಡಿಸಬೇಕು. ಹೆಂಚು, ಇಟ್ಟಿಗೆಗಳ ಆಕಾರ ವನ್ನು ಸುಧಾರಿಸಬೇಕು.

೫. ಕುಂಬಾರರಿಗೆ ಆ ವಿದ್ಯೆಯ ಎಲ್ಲಾ ಅಂಶಗಳಲ್ಲಿಯೂ ಅಲ್ಪ ಕಾಲದ ಶಿಕ್ಷಣ ಸಿಗಬೇಕು; ಉದಾ-ಮಣ್ಣು ಕಲೆಸುವುದು, ಉತ್ತಮ ರೀತಿಯ ಮಾದರಿಗಳ ರಚನೆ, ಸುಡುವುದು, ನಯ ಮಾಡುವುದು.

**೧೨. ನೈರ್ಮಲ್ಯ-ಗೊಬ್ಬರ:** ೧. ಹಳ್ಳಿಗಳಲ್ಲಿ ಎಂಥ ಕಕ್ಕಸುಗಳಿರ ಬೇಕೋ ಬೇರೆಬೇರೆ ಪ್ರಯೋಗ ಮಾಡಿ ನಿರ್ಧರಿಸಬೇಕು. ಹಲವು ಬಗೆಯ ಕಕ್ಕಸುಗಳು ಅನುಕೂಲವಾಗಿ ಕಾಣಬಹುದು. ಹಳ್ಳಿಗಳನ್ನು ನಿರ್ಮಲ ವಾಗಿಡಲು ಈ ಕಕ್ಕಸು ಪ್ರಯೋಗಗಳು ಅಗತ್ಯ. ಬೈರಿಗೆ-ಗುಂಡಿ ಮೂತ್ರಿಗಳನ್ನು ಹಳ್ಳಿಯಲ್ಲಿ ನಾಲ್ಕಾರು ಕಡೆ ಮಾಡುವುದು ಒಳ್ಳೆಯದು.

೨. ಮಲ ಮೂತ್ರಗಳನ್ನು ಗೊಬ್ಬರವಾಗಿ ಮಾಡಲು ಖಾಸಗಿ ಗುತ್ತಿಗೆದಾರರಿಗೆ ಗುತ್ತಿಗೆ ಕೊಡಬೇಕು. ಅವರು ಸಿದ್ಧ ಮಾಡಿದ ಗೊಬ್ಬ ರಕ್ಕೆ ತಕ್ಕಂತೆ ಅವರಿಗೆ ಪ್ರೋತ್ಸಾಹ ಧನವನ್ನು ಕೊಟ್ಟು ಆಕರ್ಷಿಸಬೇಕು. ಲಾಭ ಸಿಗದಿದ್ದರೆ ಯಾರೂ ಕೆಲಸ ಮಾಡರು. ಈ ಪದ್ಧತಿ ಬೆಳೆಯುವ ವರೆಗೆ ಕೆಲವು ಕಾಲ ಸಹಾಯ ಕೊಡಬೇಕು.

೩. ಹಳ್ಳಿಯ ನೈರ್ಮಲ್ಯದ ದೃಷ್ಟಿಯಿಂದ ಊರಿನೊಳಗೆ, ವಾಸದ ಮನೆಗಳಲ್ಲಿಯೆ ದನ ಕಟ್ಟುವ ಪದ್ಧತಿಯನ್ನು ಪರಿಶೀಲಿಸಬೇಕು. ಗೋಶಾಲೆ-ನಂದಿಶಾಲೆ, ಅದರ ವ್ಯವಸ್ಥಾಪಕರು ಏರ್ಪಾಡಾಗದೆ ಈ ಸಮಸ್ಯೆ ಹರಿಯದು. ಒಂದು ದಿನದಲ್ಲಿ ಆಗುವ ಕೆಲಸವಲ್ಲ.

ಹೊಸದಾಗಿ ಹಳ್ಳಿಯನ್ನು ಕಟ್ಟುವಲ್ಲಿ, ಊರನ್ನು ಬೆಳೆಸುವಾಗ, ವಾಸದ ಮನೆಗಳಿಗೆ ದೂರವಾಗಿ ಗೋಶಾಲೆಯನ್ನು ಕಟ್ಟಬೇಕು. ಗ್ರಾಮ ನೈರ್ಮಲ್ಯ ದೃಷ್ಟಿಯಿಂದ ಕೆಲವರು-ಊರಿಗೆಲ್ಲಾ ಒಂದೇ ನಂದಿಶಾಲೆ ಗೋಶಾಲೆ ಇರಲಿ, ಒಬ್ಬೊಬ್ಬರ ಮನೆಯಲ್ಲಿಯೂ ಬೇಡ ಎನ್ನುತ್ತಾರೆ. ನೈರ್ಮಲ್ಯವೇ ಅಲ್ಲಿ ಪ್ರಧಾನ.

# ಪ್ರಕರಣ ೬

## ಪ್ರಜಾತಂತ್ರ

ಮೂಲತಃ ಭರತಖಂಡ ಗಣರಾಜ್ಯ. ಒಂದೊಂದು ಹಳ್ಳಿಯೂ ತನ್ನ ಆಡಳಿತವನ್ನು ತಾನೇ ನಡೆಸುತ್ತಿದ್ದ ಗ್ರಾಮರಾಜ್ಯವಾಗಿತ್ತು. ಸಾಮಾನ್ಯವಾಗಿ ಸಮಾಜದಲ್ಲಿ ಕಾಣಬರುವ ಸಾಧಾರಣ ಜನರನ್ನೇ ಆಧಾರವಾಗಿಟ್ಟುಕೊಂಡು ಭರತಖಂಡ ತನ್ನ ರಾಜ್ಯ ಪದ್ಧತಿಯನ್ನು ರಚಿಸಿತು.

ಮಾನವ ಸಮಾಜದಲ್ಲಿ ಸಮಸ್ತ ಕಾರ್ಯಕಲಾಪದಲ್ಲಿಯೂ ಎರಡು ದೃಷ್ಟಿ ಇರುತ್ತವೆ: ಒಂದು ದೀರ್ಘ ದೃಷ್ಟಿ, ಇನ್ನೊಂದು ತತ್ಕಾಲದ ದೃಷ್ಟಿ-ಸದ್ಯಃಫಲದ್ದು. ನಮ್ಮಲ್ಲಿ ಅನೇಕರಿಗೆ ದೀರ್ಘದೃಷ್ಟಿ ಸಾಧ್ಯವಿಲ್ಲ. ದೀರ್ಘದೃಷ್ಟಿಯೆಂದರೆ ಮಾಡಿದ ಕೆಲಸದ ಫಲ ಕಣ್ಣಿಗೆ ಕಾಣಲು, ಕೈಗೆ ಸಿಗಲು ಬಹಳ ಕಾಲ ಬೇಕು. ಜನರು ಅಷ್ಟುಕಾಲ ಕಾಯಲೊಲ್ಲರು. ನಮಗೆಲ್ಲ ತತ್ಕಾಲದ ದೃಷ್ಟಿಯೇ-ಚೆನ್ನಾಗಿ ತಿಂದು ತೇಗಿ ಸುಖವಾಗಿ ರೋಣ ಎಂಬುದು. ನೂರರಲ್ಲಿ ತೊಂಬತ್ತೊಂಬತ್ತು ಜನರದು ಈ ದೃಷ್ಟಿ. ಆದರೆ ಇಡೀ ಸಮಾಜದ ಹಿತಕ್ಕಾಗಿ ಕೆಲವು ಕೆಲಸಗಳನ್ನು ಮಾಡಲೇ ಬೇಕು. ಇವಕ್ಕೆ ದೀರ್ಘದೃಷ್ಟಿ ಅಗತ್ಯ. ಪ್ರಜಾತಂತ್ರ ರೂಪಿಸುವುದು ಇದನ್ನೇ. ಆಡಳಿತ ಸಫಲವಾಗಿ, ಅನೇಕ ಜನರ ಹಿತಸಾಧನೆಯಾಗ ಬೇಕಾದರೆ ಸರಕಾರ ದೀರ್ಘದೃಷ್ಟಿಯುಳ್ಳವರ ಕೈಯಲ್ಲಿರಬೇಕು. ತತ್ಕಾಲದ ದೃಷ್ಟಿಯ ಜನರಿಗೆ ಸರಕಾರ ವಶವಾದರೆ ಪರಿಣಾಮ ಭಯಂಕರ. ಅವರ ಮಂದದೃಷ್ಟಿ ಯುದ್ಧಗಳಿಗೆ ಕಾರಣವಾಗುತ್ತದೆ.

ಈ ರೀತಿ ವಿಚಾರ ಮಾಡಿದರೆ ಅಮೆರಿಕಾ ಇಂಗ್ಲೆಂಡುಗಳು ಪ್ರಜಾತಂತ್ರಗಳೇ ಅಲ್ಲ. ಅಲ್ಲಿರುವುದು ಪೂರಾ ನಿರಂಕುಶಾಧಿಕಾರ. ಯುದ್ಧ ಕಾಲದಲ್ಲಿ ಈ ದೇಶಗಳಲ್ಲಿ ಎಂಥ ರಾಜ್ಯವಿತ್ತು? ಪ್ರಜಾತಂತ್ರವೆ, ಸರ್ವಾಧಿ

ಕಾರವೆ? ಬಹಿರಂಗವಾಗಿಯೆ ಸರ್ವಾಧಿಕಾರ ಸ್ಥಾಪಿತವಾಗಿತ್ತು. ಅಕಸ್ಮಾತ್ತಾಗಿ ಹಾಗೆ ಆಗಲಿಲ್ಲ. ಹಾಗೆ ಆಗಲೇಬೇಕಿತ್ತು. ಈ ದೇಶಗಳಲ್ಲಿ ಉತ್ಪಾದನಾವಿಧಾನ ಕೇಂದ್ರಿತವಾದುದು. ಕೇಂದ್ರೀಯ ನಿಯಂತ್ರಣ, ಸೈನಿಕತೆ, ಅದರ ಅನಿವಾರ್ಯ ಪರಿಣಾಮ. ಅದರಿಂದ ಸರ್ವಾಧಿಕಾರ ಬಂದೇ ತೀರಬೇಕು. ಆರ್ಥಿಕ ಕ್ಷೇತ್ರದಲ್ಲಿ ಸರ್ವಮಾನ್ಯ, ರಾಜಕೀಯದಲ್ಲಿ ಮಾತ್ರ ಪ್ರಜಾಧಿಕಾರ–ಸಾಧ್ಯವಿಲ್ಲ. ಇದು ಹುಲಿ–ಮೇಕೆಯ ನ್ಯಾಯ. ಇಂಥ ಪ್ರಜಾಧಿಕಾರ ಬರೀ ಕಪಟ. ಆರ್ಥಿಕ ಕ್ಷೇತ್ರದಲ್ಲಿ ಪ್ರಜಾತಂತ್ರ ಬರಬೇಕೆಂದರೆ ಹಳ್ಳಿಗಳಲ್ಲಿ ವೈಯಕ್ತಿಕ ಉತ್ಪಾದನೆಯ ಪದ್ಧತಿಯಿರಬೇಕು.

ನೀರಾವರಿ, ರಸ್ತೆ ಮುಂತಾದ ದೊಡ್ಡ ಕೆಲಸಗಳೂ ನಡೆಯಬೇಕಲ್ಲ. ಅದಕ್ಕೆ ಸಮಾಜದಲ್ಲಿ ದೀರ್ಘದೃಷ್ಟಿಯಿರುವವರನ್ನು ಆರಿಸಿ ನೇಮಿಸಬೇಕು. ಮಂತ್ರಿಗಳು, ಸರಕಾರಿ ಅಧಿಕಾರಿಗಳು ದೀರ್ಘದೃಷ್ಟಿಯುವರಾಗಬೇಕು. 'ಎಷ್ಟು ಲಾಭ ಬರುತ್ತದೆ?' ಎಂದು ಕೇಳುವವರು ಆ ಜವಾಬದಾರಿ ಸ್ಥಾನಗಳಿಗೆ ತಕ್ಕವರಲ್ಲ. ದೀರ್ಘದೃಷ್ಟಿಗೆ 'ಲಾಭವೆಷ್ಟು?' ಎಂಬುದಲ್ಲ ಅಳತೆ. ಜನತೆಯ ಅಗತ್ಯಗಳನ್ನು ತೃಪ್ತಿಗೊಳಿಸುತ್ತದೆಯೆ? ಎಂಬುದು ಹಾಕಬೇಕಾದ ಪ್ರಶ್ನೆ. ಸರಕಾರ ವ್ಯಾಪಾರಿ ಸಂಸ್ಥೆಯಲ್ಲ: ಹಣ ಮಾಡುವ ಸಂಸ್ಥೆಯೂ ಅಲ್ಲ, ಅಧಿಕಾರಿ ವರ್ಗದ ಕಾರಖಾನೆಯೂ ಅಲ್ಲ. ಸರಕಾರ ಇರುವುದು ಜನಸೇವೆಗಾಗಿ. ಜನರ ಆವಶ್ಯಕತೆಗಳನ್ನು ಪೂರ್ಣಗೊಳಿಸಿದರೆ, ಎಷ್ಟು ವೆಚ್ಚವಾದರೂ ಸರಿಯೆ. ಆ ಸೇವೆ ಸಲ್ಲಿಸಲೇಬೇಕಲ್ಲ. ಇದು ಮುಖ್ಯ ತತ್ವ. ಇದನ್ನು ನೆನಪಿಡಬೇಕು. ಖಾಸಗಿ ಹಣಕಾಸಿಗೂ ಸಾರ್ವಜನಿಕ (ರಾಷ್ಟ್ರೀಯ) ಹಣಕಾಸಿಗೂ ಇದೇ ಭೇದ. ಸಾರ್ವಜನಿಕ ಹಣಕಾಸಿನದು ದೀರ್ಘದೃಷ್ಟಿ. ಪ್ರಜಾತಂತ್ರಕ್ಕಾಗಿ ಯೋಜನೆ ಮಾಡುವಾಗ ಪ್ರತಿಯೊಬ್ಬ ವ್ಯಕ್ತಿಯೂ ಅದರಲ್ಲಿ ತನ್ನ ಪಾತ್ರವೇನೆಂಬುದನ್ನು ಅರಿಯುವಂತೆ ಮಾಡಬೇಕು.

**ಕೆಲಸಗಾರರು :** ಇದನ್ನು ಮಾಡುವಾಗ ಬಹಳ ಮುಖ್ಯವಾದುದು ಮಾಡುವ ಕೆಲಸಗಾರರಲ್ಲಿ 'ಸ್ವಾರ್ಥ'ವಿರಬಾರದು ಎಂಬುದು. ಸ್ವಾರ್ಥವಿದ್ದರೆ ಲಕ್ಷಗಟ್ಟಲೆ ಜನರ ಶ್ರಮವನ್ನು ಅವರು ದುರುಪಯೋಗ

ಪಡಿಸುತ್ತಾರೆ. ಅದೇ ಅಪಾಯ. ಇದಕ್ಕಾಗಿಯೆ ಕಾಂಗ್ರೆಸು ಮಂತ್ರಿ ಮಂಡಲಗಳಲ್ಲಿ ಅನೇಕ ವಿಷಯಗಳ ವೆಚ್ಚವನ್ನು ತಗ್ಗಿಸಬೇಕೆನ್ನುವುದು. ಹಿಂದಿನ ಮಂತ್ರಿಮಂಡಲಗಳು ೫೦೦ ರೂ ಸಂಬಳ ತೆಗೆದುಕೊಂಡವು. ಈಗ ಅವರ ಮಟ್ಟ ಏರಿದೆ; ಸಂಬಳವೂ ಹೆಚ್ಚಿದೆ. ಎಂದರೆ ' ಸ್ವಾರ್ಥ ' ಬಂತು ಎಂತ. ಇಲ್ಲಿ ಅಪಾಯವಿದೆ. ನಾವು ಹಳ್ಳಿಯ ಜೀವನದ ಮಟ್ಟವನ್ನು ಅನುಸರಿಸಬೇಕು. ಅರಮನೆಗಳಲ್ಲಿ ವಾಸಮಾಡಬಾರದು. ಪಟ್ಟಣಗಳಲ್ಲಿ ಶ್ರೀಮಂತರ ಅರಮನೆಗಳೆಷ್ಟೋ ಇವೆ. ಹಳ್ಳಿಗಳಲ್ಲಿ ಒಂದೂ ಇಲ್ಲ.

ಪಟ್ಟಣಕ್ಕೆ ಐದಾರು ಮೈಲಿ ದೂರದ ಒಂದು ಹಳ್ಳಿಯಲ್ಲಿ ಒಬ್ಬ ಪಾದರಿಯನ್ನು ಒಮ್ಮೆ ಕಂಡೆ. ನಮ್ಮ ಮಂತ್ರಿಗಳ ಮನೆ ಇದ್ದ ಹಾಗಿತ್ತು ಅವನ ಮನೆ: ಒಂದು ಅರಮನೆ. ಸೊಗಸಾದ ಅಲಂಕಾರ ಬೇರೆ. ಆ ಕಾಡಿನಲ್ಲಿ ವಿದ್ಯುತ್ತನ್ನು ಹಾಕಿಸಿದ್ದ. ಬಾವಿಗೆ ಪಂಪು, ಪಟ್ಟಣಗಳ ರೀತಿಯ ಸ್ವಚ್ಛವಾದ ಕಕ್ಕಸು, ಇನ್ನೂ ಆಧುನಿಕ ಸಲಕರಣೆಗಳು. ಸುಮಾರು ೩೦೦ ಎಕರೆ ಸೊಗಸಾದ ಭೂಮಿ ಬೇರೆ.

ಅಲ್ಲಿಗೆ ಅರ್ಧಮೈಲಿ ದೂರದಲ್ಲಿ ಕೆಲವು ಚಿಕ್ಕ ಚಿಕ್ಕ ಮಣ್ಣಿನ ಗುಡಿಸಿಲುಗಳನ್ನು ಕಟ್ಟಿಸಿದ್ದ–ಬಡಕುಟುಂಬಗಳಿಗಾಗಿ. ಒಂದೊಂದಕ್ಕೂ ಕೋಳಿ ಸಾಕಣೆಗೆ ಸ್ವಲ್ಪ ಸ್ಥಳ, ಬೇಸಾಯಕ್ಕೆ ಸ್ವಲ್ಪ ಹೊಲ ಬಿಟ್ಟಿದ್ದ. 'ಬೇಕಾದಷ್ಟು ಹಣ ಸುರಿಯುತ್ತಿದೇವೆ. ಆದರೆ ಹಳ್ಳಿಗಳಲ್ಲಿ ನಮ್ಮ ಕೆಲಸ ಪರಿಣಾಮಕಾರಿಯಾಗಿಲ್ಲ. ಜನ ನಮ್ಮ ಕೈಗೆ ಸಿಗುತ್ತಿಲ್ಲ. ಅದಕ್ಕೆ ಏನಾದರೂ ಒಂದು ಮಂತ್ರ ಹೇಳಿಕೊಡುತ್ತೀರಾ?' ಎಂದು ಆತ ನನ್ನನ್ನು ಕೇಳಿದ. 'ಅದಕ್ಕೇನು, ಬಹಳ ಸುಲಭವಾದ ಮಂತ್ರ ಇದೆ. ಈ ಅರಮನೆಗೆ ಮೊದಲು ಬೆಂಕಿಹಚ್ಚಿ: ಅದೇ ಮಂತ್ರ. ಪಶ್ಚಿಮ ದೇಶದಿಂದ ಬಂದಿದ್ದೀಯೆ. ಇಲ್ಲಿನ ಸ್ಥಿತಿಗತಿ ನಿನಗೆ ತಿಳಿಯದು. ನಿಮಗೆ ಸದಾ ಹಣದ ಚಿಂತೆ, ಅದರಿಂದ ಬರುವ ದೊಡ್ಡಸ್ತಿಕೆಯ ಚಿಂತೆ. ಹಳ್ಳಿಯವರಿಗೆ ನಮ್ಮ ಈ ಉಡುಪನ್ನು ಕಂಡರೆ ಗೌರವ. ಪಂಚೆ ಎರಡು ಕಡೆ ಹರಿದಿದ್ದರೆ ಇನ್ನೂ ಹೆಚ್ಚು. ಮೈಮೇಲಿನ ಈ ಅಂಗಿಯನ್ನು ಕಿತ್ತೊಗೆದರೆ ನಮ್ಮ ಹಿಂದೆಯೆ ಬರುತ್ತಾರೆ. ಕೌಪೀನಧಾರಿಗಳಾದರೆ

ನಮಸ್ಕಾರಮಾಡುತ್ತಾರೆ! ಈ ದೇಶದ ಬೆಲೆ-ಅಳತೆ ಅದು. ನಿಮಗೆ ಈ ಸ್ಥಿತಿ ತಿಳಿಯದು. ನಮ್ಮ ಜನರ ಸೇವೆ ಮಾಡಬಯಸಿದರೆ ಮೊದಲು ಈ ಅರಮನೆಯನ್ನು ಬಿಡಬೇಕು. ಇದು ಶೋಷಣದ ಕುರುಹು. ಹಳ್ಳಿಯವರಿಗೆ ಇದರಿಂದ ಭಯ ಸಂದೇಹ ಹುಟ್ಟುತ್ತವೆ. ಅವರಿಗಾಗಿ ನೀವು ಕಟ್ಟಿರುವ ಈ ಗುಡಿಸಲುಗಳಿಗೆ ೨೫೦ ರೂ ವೆಚ್ಚವಾದರೆ ನೀವು ೧೫ ರೂ ಗೇ ಗುಡಿಸಿಲು ಕಟ್ಟಿಕೊಳ್ಳಬೇಕು. ಹೀಗಾದರೆ ನೀವು ಹಳ್ಳಿಯವರ ಸೇವೆ ಮಾಡೀರಿ. ಹಾಗೆ ಮಾಡಿದರೆ ನಿಮಗೆ 'ಸ್ವಾರ್ಥ'ವಿಲ್ಲ ಎಂದು ಅವರಿಗೆ ಮನದಟ್ಟಾಗಿ ನಿಮ್ಮ ಮಾತು ಕೇಳಲು ಬರುತ್ತಾರೆ. ಇದೇ ಆ ಗುಟ್ಟು. ನಮ್ಮ ದೇಶ ಅನಾಗರಿಕ ದೇಶವಲ್ಲ. ನಮಗೆ ಒಂದು ಸಂಸ್ಕೃತಿಯಿದೆ. ಹಣವಲ್ಲ ಅದರ ಆಧಾರ. 'ಬ್ರಾಹ್ಮಣ ಸಂಸ್ಕೃತಿ' ನಮ್ಮದು. ಜನಿವಾರವಲ್ಲ ಬ್ರಾಹ್ಮಣ ಸಂಸ್ಕೃತಿಯ ಗುರುತು. ಸಾವಿರಾರು ರೂಪಾಯಿ ಸಂಬಳ ತರುವ ದೊಡ್ಡ ಅಧಿಕಾರಿಗಳಿಗೆ ಜನಿವಾರ ವಿದ್ದರೂ ಅವರು ಬ್ರಾಹ್ಮಣರಲ್ಲ, ಮ್ಲೇಚ್ಛರು. ಗಾಂಧೀಜಿ ಅಮೆರಿಕಾಕ್ಕೆ ಹೋದರೆ ಕೋಟಿಗಟ್ಟಲೆ ಜನ ಸೇರಿ ಅವರನ್ನು ಸ್ವಾಗತಿಸುತ್ತಾರೆ. ಆದರೆ ಭಾರತದ ಜನಕೋಟಿಯ ಭಾವನೆ ಅವರಲ್ಲಿಲ್ಲ. ನಮ್ಮ ಜನರಿಗೆ ಗಾಂಧೀಜಿಯಲ್ಲಿ ಭಕ್ತಿ; ಏಕೆಂದರೆ, ಅವರಿಗೆ ಸೊತ್ತಿಲ್ಲ, ಸ್ವಂತದ್ದೇನೂ ಇಲ್ಲ. ಪ್ರಜಾಸರಕಾರಗಳಿಗೆ ನಿಜವಾದ ಅಧಿಕಾರ ತರುವುದು ಇದೇ. ಜನಗಳಲ್ಲಿ ವಿಶ್ವಾಸ ಮೂಡಿಸುವುದು ಇದೇ. ಈ ಯೋಜನೆ ಹಾಕಿ. ಜನ ಒಡನೆಯೆ ಒಪ್ಪುತ್ತಾರೆ. ಇದಕ್ಕೆ ಹಣವೂ ಹೆಚ್ಚು ಬೇಡ.

ನಮ್ಮನ್ನು ನಾವು ಪರಿವರ್ತಿಸಿಕೊಂಡು ಈ ಬಗೆಯ ಜೀವನ ಮಾರ್ಗವನ್ನು ಹಿಡಿದರೆ ಸಾಕು. ಇನ್ನೇನೂ ಬೇಡ. ಇದೇ ನಮಗೆ ಆರ್ಥಿಕ ಸ್ವರಾಜ್ಯವನ್ನು ಕೊಡುತ್ತದೆ. ಆ ಸ್ವರಾಜ್ಯದಲ್ಲಿ ಎಲ್ಲರಿಗೂ ಹೊಟ್ಟೆ ತುಂಬಾ ಅನ್ನ ಸಿಗುತ್ತದೆ.

ಬಡತನ ಇರುವ ದೇಶದಲ್ಲಿ ಮೊಟ್ಟಮೊದಲು ಎಲ್ಲರಿಗೂ ಅನ್ನ-ಬಟ್ಟೆ ಆಗಬೇಕು. ಆದುದರಿಂದ ನಮ್ಮ ಸಮಸ್ಯೆಗೆ ಉತ್ತರ ಬೇಸಾಯದಲ್ಲಿದೆ. ಜನರ ದೇಶಭಕ್ತಿಯನ್ನು ಪ್ರಚೋದಿಸಬೇಕಾಗಿಲ್ಲ. ಜನರ

ಶ್ರಮಶಕ್ತಿಗೆ ಒಂದು ಅವಕಾಶ ಮಾಡಿ ಕೊಡಬೇಕು. ಪ್ರತಿಯೊಬ್ಬರಿಗೂ ಅನ್ನ-ಬಟ್ಟೆ ಒದಗಿಸಲೇ ಬೇಕು.

**ಜಗತ್ತಿನ ಪ್ರತಿಕ್ರಿಯೆ:** ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಲು ಇದೊಂದೇ ದಾರಿ. ಚೀನಾಕ್ಕೂ ನಮಗೂ ಬಹಳ ನಿಕಟ ಸಂಬಂಧ ವಿದೆ. ನಾವೇನು ಆಟಂಬಾಂಬು ಮಾಡುತ್ತಿದೇವೆಯೆ ಈ ಸಂಬಂಧವಿರ ಲಿಕ್ಕೆ? ಬುದ್ಧ ಭಗವಾನ್ ನಿರ್ಮಿಸಿದ ಸಂಬಂಧ ಇದು. ನಮಗೆ ಬೇಕಾದುದು ಆ ಸಂಸ್ಕೃತಿ. ನಾವೂ ಜಗತ್ತಿನ ಒಂದು ಪ್ರಬಲ ರಾಷ್ಟ್ರ ವಾಗಬೇಕು. ಈ ಸಂಸ್ಕೃತಿಯ ತಳಹದಿಯ ಮೇಲೆ ಆ ಪ್ರಾಬಲ್ಯವನ್ನು ಕಟ್ಟಬೇಕು ನಾವು. ಅದಕ್ಕೆ ಹಳ್ಳಿಗಳನ್ನು ಮೊದಲು ಭವ್ಯಗೊಳಿಸಿ, ಮೇಲೇರಬೇಕು. ನಮ್ಮ ಸಮಸ್ಯೆಗಳೇ ಅಲ್ಲ. ಇಡೀ ಜಗತ್ತಿನ ಸಮಸ್ಯೆ ಗಳ ಪರಿಹಾರಕ್ಕೂ ಇದೊಂದೇ ದಾರಿ. ನಾಯಕತನ ವಹಿಸಿಕೊಂಡವರು 'ಸ್ವಾರ್ಥ' ಬಿಡಬೇಕು. ಎಲ್ಲವನ್ನೂ ಬಿಡಬೇಕು. ಆಮೇಲೆ ಜನರ ಮುಂದೆ ಈ ಯೋಜನೆಯನ್ನು ಇಡಬೇಕು. ನಮ್ಮ ದೇಶಕ್ಕೆ ಅವರು ಸಲ್ಲಿಸಬಹುದಾದ ಕಾಣಿಕೆ ಇದೇ.

**ಸರಕಾರದ ವಿರೋಧ:** ಪ್ರತಿನಿಧಿಗಳ ದ್ವಾರಾ ನಡೆವ ಪ್ರಜಾ ಸರಕಾರದಲ್ಲಿ ಕೆಲಸ ನಡೆಯಲು ವಿರೋಧವಿರಬೇಕು. ದಡಗಳಿರುವುದ ರಿಂದ ಹೊಳೆಯ ನೀರು ಉಕ್ಕದೆ ಹರಿಯುತ್ತದೆ. ಕಲ್ಲಿನ ದಡಗಳಾದರೆ ಮತ್ತೂ ಕ್ಷೇಮ. ಇಲ್ಲದಿದ್ದರೆ ದಡಗಳನ್ನು ಕೊರೆಯುತ್ತದೆ ನೀರು. ನದಿಯಲ್ಲಿ ಮಣ್ಣು ತುಂಬಿ ಅದರ ಪಾತ್ರವೇ ಬದಲಾಗುತ್ತದೆ. ನದಿಯ ನೀರಿಗೂ ದಡಗಳಿಗೂ ಸ್ಪರ್ಧೆಯೇನಿಲ್ಲ.

ಅದೇ ರೀತಿ, ಆಡಳಿತ ನಡಸುವವರಿಗೂ ಉಳಿದವರಿಗೂ ಸ್ಪರ್ಧೆಯಿರ ಬಾರದು; ಸಹಕಾರವಿರಬೇಕು. ಒಂದೇ ರೀತಿ ಹರಿಯಲು ನದಿಗೆ ಕಲ್ಲು ದಡ ಅಗತ್ಯವಿದ್ದಂತೆ ದೇಶದ ಸರಕಾರ ವ್ಯವಸ್ಥಿತವಾಗಿ ನಡೆಯಲು ಅಧಿ ಕಾರಿ ವರ್ಗಕ್ಕೆ ಸೇರದ ಬೇರೆ ಜನ ಅದಕ್ಕೆ ಮಾರ್ಗದರ್ಶನ ಮಾಡ ಬೇಕು. ಇಂಗ್ಲೆಂಡಿಗೆ ತನ್ನ 'ಪಾರ್ಲಿಮೆಂಟ್' ಎಂದರೆ ಬಹಳ ಹೆಮ್ಮೆ. ಸರಕಾರ ಮಾಡಬೇಕೆನ್ನುವ ಕೆಲಸಗಳ ಬಗ್ಗೆ ಸಾರ್ವಜನಿಕರ ಅಭಿಪ್ರಾಯವನ್ನು ಪ್ರಕಟಿಸಿ ಮಂತ್ರಿಮಂಡಲವನ್ನು ನಿಗ್ರಹಿಸುವುದು,

ಅದಕ್ಕಾಗಿ ಸರಕಾರದ ವೆಚ್ಚದಿಂದ 'ಸರಕಾರದ ವಿರೋಧ ಪಕ್ಷ'ವನ್ನು ನಿರ್ಮಿಸುವುದು ಅವರ ಪದ್ಧತಿ. ರಾಜಕೀಯ ಯೋಧರು ದ್ವಂದ್ವ ಯುದ್ಧ ಮಾಡುವ ಮಲ್ಲರಂಗ ಆ ಪಾರ್ಲಿಮೆಂಟು. ಸೋತವನು ಗೆದ್ದವನಿಗೆ ಸ್ಥಾನ ಬಿಡುತ್ತಾನೆ. ಪಾರ್ಲಿಮೆಂಟಿನ ವಾದ-ವಿವಾದಗಳ ಭರಾಟೆಯ ಗಾಳಿಯಲ್ಲಿ ಇಂದು ವಿರೋಧ ಪಕ್ಷದಲ್ಲಿ ಕುಳಿತವರು ನಾಳೆ ಮಂತ್ರಿಮಂಡಲದಲ್ಲಿರಬಹುದು. ಬ್ರಿಟಿಷ್ ಪಾರ್ಲಿಮೆಂಟಿನ ವಿರೋಧ ಪಕ್ಷದ ಕೆಲಸ ಇದು. ಅವರ ಸ್ಪರ್ಧಾಮಯ ಆರ್ಥಿಕ ವಿಧಾನ ಅವರ ರಾಜಕೀಯದಲ್ಲಿಯೂ ಕಾಲು ಚಾಚಿ ಕುಳಿತಿದೆ.

ಮಂತ್ರಿಮಂಡಲದ ರಚನೆಯೇ ಆರ್ಥಿಕ ಕ್ಷೇತ್ರದಲ್ಲಿರುವ ಸಾಮ್ರಾಜ್ಯಷಾಹಿಯ ಕುರುಹು. ಕೇಂದ್ರೀಯ ಉದ್ಯೋಗಗಳಿಗೆ ನಾಲ್ಕೂ ಮೂಲೆಗಳಿಂದಲೂ ಕಚ್ಚಾಮಾಲು ಒದಗಬೇಕು. ಅವನ್ನು ಪೂರ್ಣ ಪದಾರ್ಥವಾಗಿ ಸಜ್ಜುಗೊಳಿಸಿ ಮತ್ತೆ ಇವರು ಜಗತ್ತಿನ ಮೂಲೆಮೂಲೆಗೂ ಕಳಿಸಬೇಕು. ಇದರಿಂದ ಹಣದ ಚಲಾವಣೆ, ಸಂಚಾರ ಸಾಧನಗಳು, ರಾಜಕೀಯಾಧಿಕಾರ ಅತ್ಯಗತ್ಯವಾಗುತ್ತವೆ. ಇದನ್ನು ಸಾಧಿಸಲು ಪರರಾಷ್ಟ್ರಗಳ ರಾಜಕೀಯ, ಹಣಕಾಸು, ಸೈನ್ಯ, ನೌಕೆ, ವಿಮಾನದಳ ಬಹಳ ಆವಶ್ಯಕವಾಗುತ್ತವೆ. ಆದುದರಿಂದ ಮಂತ್ರಿಮಂಡಲದಲ್ಲಿ ಆ ಶಾಖೆಗಳೇ ಬಹಳ ಮುಖ್ಯ.

ಸ್ಪರ್ಧೆ, ಸಾಮ್ರಾಜ್ಯವಾದ-ಎರಡಕ್ಕೂ ಹಿಂಸೆಯೇ ತಳಹದಿ.

ನಮ್ಮ ದೇಶ ಆಡಳಿತವನ್ನು ವಹಿಸಿಕೊಂಡಿದೆ. ನಾವು ಅಹಿಂಸೆಯನ್ನು ಅವಲಂಬಿಸುವುದಾದರೆ ನಮ್ಮ ರಾಜ್ಯದ ರಚನೆ ಹೇಗಿರಬೇಕು ? ನಮ್ಮ ಸರಕಾರಕ್ಕೂ ತಪ್ಪಿದಲ್ಲಿ ತಡೆದು ತಿದ್ದುವ 'ವಿರೋಧ'ವೊಂದು ಬೇಕಲ್ಲ. ಆದರೆ ನಮಗೆ ಸ್ಪರ್ಧೆ ಬೇಡ, ಸಹಾಕಾರದ ಆರ್ಥಿಕ ರಚನೆ ಬೇಕು. ನಮ್ಮ 'ವಿರೋಧ' ಪಕ್ಷದ ಸದಸ್ಯರು ಅಧಿಕಾರ ತಮ್ಮ ಪಾಲಿಗೆ ಎಂದು ಬಂದೀತು ಎಂದು ಹಾತೊರೆಯುತ್ತ ಕೂಡರು. ಅಹಿಂಸೆ-ಸಹಕಾರಗಳ ಆರ್ಥಿಕ ವಿಧಾನದಲ್ಲಿ ವೈಯಕ್ತಿಕ ಆಕಾಂಕ್ಷೆಗಳಿಗೆ ಎಡೆಯಿಲ್ಲ. ಮಂತ್ರಿಗಳನ್ನು ಕೆಳಗಿಳಿಸಿ ನಾವು ಅಲ್ಲಿಗೆ ಹೋಗಬೇಕು ಎಂಬುದಲ್ಲ ನಮ್ಮ ಧ್ಯೇಯ; ಮಂತ್ರಿಗಳು ನಮ್ಮನ್ನು

ನೋಡಿ ನಡತೆಯನ್ನು ಕಲಿಯಲಿ ಎನ್ನುವ ಆದರ್ಶ ವ್ಯಕ್ತಿತ್ವ. ರಚನಾತ್ಮಕ ಕೆಲಸಗಾರರು ತಮ್ಮ ದೃಷ್ಟಾಂತ ಬಲದಿಂದ ಸರಕಾರ ಸರಿಯಾಗಿ ನಡೆಯುವಂತೆ ಮಾಡಬೇಕು. ಅಹಿಂಸಾತ್ಮಕ ಆರ್ಥಿಕವ್ಯವಸ್ಥೆಯಲ್ಲಿ ರಚನಾತ್ಮಕ ಕೆಲಸಗಾರರಿಗೆ ಈ ಮಹತ್ತರ ಜವಾಬದಾರಿ ಬರುತ್ತದೆ.

ಈ ರೀತಿ ಮಾರ್ಗದರ್ಶನ ಮಾಡಲು ರಚನಾತ್ಮಕ ಕೆಲಸಗಾರರದೊಂದು ಸುಸಂಘಟಿತ ಮಂಡಳಿ ಆಗತ್ಯ. ಅವರು ಮಾಡಿದ ಜನಸೇವೆಯೇ ಅವರ ಬಲ. ಅವರ ಕೆಲಸದ ಉತ್ತಮ ಗುಣವೇ ಅವರ ಅಧಿಕಾರ. ಇಂಥ ಮಂಡಲಿಯಿದ್ದರೆ ಮಂತ್ರಿಗಳು ಅವರಿಂದ ಸ್ಫೂರ್ತಿ ಪಡೆದಾರು. ಈ ಮಂಡಲಿ ಅವರಿಗೆ ಸೂಚನೆ-ಸಲಹೆ ಕೊಟ್ಟೀತು. ಇಂಥ ಜವಾಬದಾರಿಯ ಕೆಲಸವನ್ನು ನಡೆಸಲು ಈ ಗುಂಪಿನಲ್ಲಿ ತ್ಯಾಗಮಯರೂ ಅನಾಸಕ್ತರೂ, ಜನಸೇವೆ-ಲೋಕಸಂಗ್ರಹವೊಂದೇ ತಮ್ಮ ಗುರಿ ಆದವರೂ ಇರಬೇಕು.

ಇಂಥ ರಾಜಕೀಯ ರಚನೆಯಲ್ಲಿ ಮಂತ್ರಿಗಳು ಸ್ವಾವಲಂಬನದ ಆರ್ಥಿಕ ವಿಧಾನಕ್ಕೆ ಮುಖ್ಯವಾದ ಶಾಖೆಗಳನ್ನು ವಹಿಸಿಕೊಂಡಾರು. ಆಗ ಆಡಳಿತ ಶಾಖೆಗಳಲ್ಲಿ-ಕೃಷಿ, ಭೂಸುಧಾರಣೆ, ಭೂಸಾರ ನಷ್ಟಕ್ಕೆ ತಡೆ, ಹೊಸದಾಗಿ ಭೂಮಿಯನ್ನು ಕೃಷಿಯೋಗ್ಯವಾಗಿ ಮಾಡುವುದು, ನೀರಾವರಿ, ನದಿಗಳ ಯೋಜನಾನ್ಯ, ಕಾಡು, ಗ್ರಾಮೋದ್ಯೋಗ, ಖನಿಜ-ಭಾರಿ ಉದ್ಯೋಗಗಳು, ಆರೋಗ್ಯ, ಶಿಕ್ಷಣ, ಗೃಹಶಾಖೆಗಳು ಮುಖ್ಯವಾಗುತ್ತವೆ. ಪರರಾಷ್ಟ್ರ ನೀತಿ, ಅರ್ಥ, ರಕ್ಷಣೆಗಳಿಗೆ ಮಂತ್ರಿ ಮಂಡಲದಲ್ಲಿ ಸ್ಥಾನವನ್ನು ಕೊಡಬೇಕಾಗಿಯೆ ಇಲ್ಲ.

ಈ ಬಗೆಯ ರಾಜಕೀಯ ಸ್ವರೂಪದಲ್ಲಿ ಜನತೆಯನ್ನು ಶೋಷಣಕ್ಕೆ ತುತ್ತಾಗದಂತೆ ತಡೆಯಲು ಈ ರಚನಾತ್ಮಕ ಕೆಲಸಗಾರರ ಗುಂಪು ರಕ್ಷಾಕವಚವಾಗಿ ಇರುತ್ತದೆ. ಈ ಪ್ರಕಾರ ನಡೆದ ಸರಕಾರ ಜನತೆಯ ವ್ಯವಹಾರಕ್ಕೆ ಪ್ರಾಧಾನ್ಯ ಕೊಟ್ಟು ಜನರ ಯೋಗಕ್ಷೇಮವನ್ನು ಸಾಧಿಸುತ್ತದೆ.

'ರಾಷ್ಟ್ರೀಯಕರಣ' ಎಂದರೆ ರಾಷ್ಟ್ರ ಜನತೆಯ ಕೈಯಲ್ಲಿದೆ ಎಂದು ಅರ್ಥ. ಇದಕ್ಕೆ ಮೊದಲನೆ ಮೆಟ್ಟಲಾಗಿ ನಮ್ಮ ವ್ಯವಹಾರ-ನಿರ್ವಹಣದಲ್ಲಿ ಅನುಭವ ವಿಸ್ತಾರವಾಗಿ ಸಿಗಬೇಕು. ಹಳ್ಳಿಗಳಲ್ಲಿ ಚೆನ್ನಾಗಿ ಸಂಘಟಿಸಿದ ಪಂಚಾಯತಿಗಳ ಮೂಲಕ ಜನರು ತಮ್ಮ ತಮ್ಮ ಆವಶ್ಯಕತೆಗಳನ್ನು ತಾವೇ ಪೂರಯಿಸಕೊಳ್ಳಬೇಕು. ಹೀಗೆ ಅನುಭವ ಪಡೆದ ಜನರ ಗುಂಪಿನಿಂದ ಜಿಲ್ಲೆಗಳು ತಮ್ಮ ಆಡಳಿತಗಾರರನ್ನು ಆರಿಸಿ ಕೊಳ್ಳುತ್ತವೆ. ಇಡೀ ಪ್ರಾಂತದ ಆಡಳಿತಕ್ಕೆ, ವಿಧಾನ ಸಭೆಗೆ ಬೇಕಾದ ಜನರನ್ನು ಈ ಗುಂಪು ನೀಡಬಲ್ಲದು. ಹೀಗೆ ಸುವ್ಯವಸ್ಥಿತವಾಗಿ ದೃಢ ಆಧಾರದ ಮೇಲೆ ಪ್ರಾಂತದ ಆಡಳಿತವನ್ನು ರಚಿಸಿದರೆ ಕೇಂದ್ರವನ್ನೂ ನಿಗ್ರಹಿಸಿ, ಗ್ರಾಮಸ್ಥರ ಹಿತಕ್ಕಾಗಿ ಅದು ದುಡಿಯುವಂತೆ ಮಾಡ ಬಹುದು.

ಇಂಥ ಅನುಭವಿ ದೇಶಭಕ್ತರ ಕೈಯಲ್ಲಿ ಆಡಳಿತವಿದ್ದರೆ, ಜನತೆಯ ಯೋಗಕ್ಷೇಮವೇ ಅವರ ಅಗ್ರಧರ್ಮ ಎಂಬ ವಿಶ್ವಾಸ ಜನರಿಗಿದ್ದರೆ, ಅದು ರಾಷ್ಟ್ರೀಯ ಸರಕಾರ. ಆಗ ರಾಷ್ಟ್ರೀಯಕರಣ ಮಾಡಿದರೂ ಜನತೆಯ ಹಿತಕ್ಕೆ ಆತಂಕವಿರದು.

ಈ ಬಗೆಯ ಗ್ರಾಮಗಳ ತಳಹದಿಯ ಮೇಲೆ ಕಟ್ಟಿದ, ಗ್ರಾಮ ಗಳಿಂದ ನಿಗ್ರಹಿತವಾದ, ಕೇಂದ್ರ ಸರಕಾರವಿಲ್ಲದಿದ್ದರೆ-ಬರೀ 'ರಾಷ್ಟ್ರೀಯ ಕರಣ'ದಿಂದ ಬಡವರು ಭಾಗ್ಯವಂತರಿಂದ ಶೋಷಣೆಗೆ ಮತ್ತಷ್ಟು ಬಲಿ ಯಾದಾರು.

ಉದಾ: ವಿಮಾನ ಸಂಚಾರದ ವ್ಯವಸ್ಥೆಯನ್ನು ರಾಷ್ಟ್ರೀಯಕರಣ ಮಾಡುವ ಮಾತು ಎಲ್ಲೆಲ್ಲಿಯೂ ಹುಟ್ಟಿದೆ. ವಿಮಾನ ಪ್ರಯಾಣ ಹಳ್ಳಿಗಳವರಿಗೆ ಎಟುಕದ ಹಣ್ಣು. ಅವರಿಗೆ ಅದು ಅಗತ್ಯವೂ ಇಲ್ಲ, ಅವರು ಅದನ್ನು ಬಳಸುವುದೂ ಇಲ್ಲ. ಈಗ ಅವು ಭಾಗ್ಯವಂತರ ಸೊತ್ತು. ಅದನ್ನು ಬಳಸುವವರೂ ಅವರೇ. ಈಗ ಅದನ್ನು ರಾಷ್ಟ್ರೀಯಕರಣ ಮಾಡುವುದೆಂದರೆ, ಭಾಗ್ಯವಂತರ ಅನುಕೂಲಕ್ಕಾಗಿ ಸರಕಾರ ತನ್ನ ಹಣ, ಬುದ್ಧಿ, ವ್ಯವಸ್ಥೆಗಳನ್ನು ಉಪಯೋಗಿಸಬೇಕು. ವಿಮಾನ ನಿಲ್ದಾಣ ಗಳನ್ನು ಕಟ್ಟಬೇಕು, ಬೇರೆ ದಾರಿಗಳನ್ನೇ ಮಾಡಬೇಕು. ಈಗ

ವಿಮಾನ ನಡಸುವ ಖಾಸಗಿ ಸಂಸ್ಥೆಗಳಿಗೆ ಇಂಥ ಅಗಾಧ ಕಾರ್ಯಗಳಿಗೆ ಸರಕಾರದ ಸರ್ವ ಸಹಾಯ ದೊರೆತರೆ ಬೆಣ್ಣೆ ಸಿಕ್ಕ ಹಾಗೆ. ಅವರಿಗೆ ಬೇಕಾದುದೂ ಅದೇ. ಸರಕಾರದ ಹಣ ಜನತೆಯ ಅನುಕೂಲ್ಯಕ್ಕಾಗಿ ವಿನಿಯೋಗವಾಗಬೇಕೇ ವಿನಾ ಈ ವಿಮಾನ ಮಾರ್ಗಗಳಿಗಾಗಿ ವೆಚ್ಚವಾಗ ಬಾರದು. ಇದುವರೆಗೆ ಮಾಡಿದಂತೆ ಖಾಸಗಿ ಜನ ಮಾಡುತ್ತ ಹೋಗಲಿ. ಹತ್ತು ಜನ ಭಾಗ್ಯವಂತರು ಇನ್ನೂ ಹತ್ತು ಜನ ಹಣಗಾರರನ್ನು ಸುಲಿದುಕೊಳ್ಳಲಿ. ನಿಜವಾದ ರಾಷ್ಟ್ರೀಯ ಸರಕಾರ ಬಂದಾಗ 'ರಾಷ್ಟ್ರೀಯ ಕರಣ'ದ ಪ್ರಸ್ತಾಪ ಬರಲಿ. ಈಗೇಕೆ?

# ಪ್ರಕರಣ ೭

## ರಾಷ್ಟ್ರೀಯ ಉದ್ಯೋಗಗಳು

ಉದ್ಯೋಗಗಳನ್ನು ಹೇಗೆ ರೂಪಿಸಬೇಕು, ಹೇಗೆ ನಡಸಬೇಕು ಎಂಬ ಪ್ರಶ್ನೆಗೆ ಬಂದೆವು. ಅರ್ಥಶಾಸ್ತ್ರದಲ್ಲಿ ನಾವು ನೆನಪಿಡಬೇಕಾದುದು ಎರಡು ಮುಖ್ಯ ತತ್ವ–ಧನಸಂಗ್ರಹ, ಧನವಿಭಾಜನ.

ಕೇಂದ್ರೀಯ ಉದ್ಯೋಗಗಳು ಕೇಂದ್ರಾಪಗಮನ ಯಂತ್ರಗಳಿದ್ದ ಹಾಗೆ. ಎಲ್ಲವೂ ಕೇಂದ್ರದಿಂದ ಹೊರಗೆ ಹರಿಯಬೇಕು. ಇದರಿಂದ ಕೆಲವೇ ಕೈಯಲ್ಲಿ ಐಶ್ವರ್ಯ ಸಂಗ್ರಹವಾಗುತ್ತದೆ. ಹಣವಾದರೂ ಕೇಂದ್ರಿತವಾಗಬಹುದು, ಅಧಿಕಾರವಾದರೂ ಆಗಬಹುದು. ವಿಕೇಂದ್ರಿತ ಉದ್ಯೋಗಗಳು ಸ್ವಾಭಾವಿಕವಾಗಿಯೇ ಐಶ್ವರ್ಯವನ್ನು ಹಂಚುತ್ತವೆ. ನಮ್ಮ ದೇಶದಲ್ಲಿ ಐಶ್ವರ್ಯ ಕೆಲವೇ ಕಡೆ ಕೇಂದ್ರಿತವಾಗಬಾರದು ಎನ್ನುವಂತಿದ್ದರೆ ಕೇಂದ್ರೀಯ ಉದ್ಯೋಗಗಳನ್ನು ಮೊದಲು ನಾಶಮಾಡಬೇಕು. ನಮ್ಮದು ಬಡ ದೇಶ. ನಮಗೆ ಬೇಕಾದುದು ಐಶ್ವರ್ಯದ ಹಂಚಿಕೆ. ಆದುದರಿಂದ ನಾವು ವಿಕೇಂದ್ರಿತ ಉದ್ಯೋಗಗಳನ್ನೆ ಅವಲಂಬಿಸಬೇಕು.

ಇದಕ್ಕೆ ಇನ್ನೊಂದು ಮಾರ್ಗವೂ ಇದೆ. ರಷ್ಯಾ ಅದನ್ನು ಮಾಡಿದೆ. ಮೊದಲು ಒಂದು ಕೇಂದ್ರದಲ್ಲಿ ಐಶ್ವರ್ಯವನ್ನು ಉತ್ಪತ್ತಿ ಮಾಡಿ, ಆಮೇಲೆ ಸರಕಾರದ ಮೂಲಕ ಅದನ್ನು ದೇಶದಲ್ಲಿ ಹಂಚುತ್ತೇವೆ ಎನ್ನುತ್ತಾರೆ. ಅಲ್ಲಿ ಕೇಂದ್ರಿತವಾಗುವುದು ಐಶ್ವರ್ಯವಲ್ಲ, ಅಧಿಕಾರ. ಐಶ್ವರ್ಯ ಉತ್ಪತ್ತಿಯಾದ ಮೇಲೆ ಅದನ್ನು ಹಂಚುವವರು ಯಾರು? ಅಧಿಕಾರವಿರುವವರು ತಾನೆ? ಆದುದರಿಂದ ಅಧಿಕಾರವಾಗಲಿ ಐಶ್ವರ್ಯವಾಗಲಿ, ಯಾವುದು ಕೇಂದ್ರಿತವಾದರೂ ಅಪಾಯವೇ. ಅಮೇರಿಕಾ, ಇಂಗ್ಲೆಂಡುಗಳಲ್ಲಿ ಐಶ್ವರ್ಯ ಕೇಂದ್ರಿತವಾಗಿದೆ. ರಷ್ಯಾದಲ್ಲಿ ಅಧಿಕಾರ ಕೇಂದ್ರಿತವಾಗಿದೆ. ಹಿಂದುಸ್ಥಾನ ಬಡದೇಶ. ಇಲ್ಲಿ ಐಶ್ವ

ಯೋತ್ಪತ್ತಿಯೂ ಆಗಬೇಕು; ಉತ್ಪತ್ತಿಮಾಡುವ ಕ್ರಮದಲ್ಲಿಯೇ ಹಂಚಿಕೆಯೂ ಆಗಬೇಕು. ಎಲ್ಲಿ ನಮಗೆ ದಿನಬಳಕೆಯ ಪದಾರ್ಥಗಳ ಉತ್ಪತ್ತಿ ಬೇಕೋ ಅಲ್ಲಿ ಕೇಂದ್ರೀಯ ಉತ್ಪಾದನಾ ಕ್ರಮ ಸಲ್ಲದು, ಅದು ವರ್ಜ್ಯ.

ಕೇಂದ್ರೀಯ ಉದ್ಯೋಗಗಳ ಸ್ಥಾನ: ಲಾಭದಾಸೆಯಿಲ್ಲದ ಜನ, ಐಶ್ವರ್ಯ ಸಂಗ್ರಹ ಮಾಡದ ಜನ ಇದ್ದಲ್ಲಿ ಕೇಂದ್ರೀಯ ಉದ್ಯೋಗಗಳಿರ ಬೇಕು. ಅಥವಾ ಕೇಂದ್ರೀಯ ಉದ್ಯೋಗಗಳಲ್ಲಿ ಇರುವ ಐಶ್ವರ್ಯ ಸಂಗ್ರಹ ಗುಣವನ್ನು ಮೊಟಕು ಮಾಡಬೇಕು. ಹೇಗೆ ಮಾಡುವುದು? ಈ ಉದ್ಯೋಗಗಳೆಲ್ಲವೂ ಸೇವಾ-ಪ್ರಧಾನವಾಗಬೇಕು. ವಿದ್ಯುತ್ತು, ಸಾಗಾಣಿಕೆ, ಅಂಚೆ-ತಂತಿ, ಸುದ್ದಿ-ಸಮಾಚಾರ, ರಸ್ತೆ ಮುಂತಾದುವೆಲ್ಲ ಸೇವಾಕಾರ್ಯವಾಗಬೇಕು. ನಿಸ್ವಾರ್ಥಿಗಳ ಸರಕಾರ ಅವನ್ನು ನಡೆಸ ಬೇಕು. ನಮಗೆ ಮೋಟಾರು ವಿಮಾನ ಬೇಕು ಎಂದರೆ ಸರಕಾರ ಅದನ್ನು ನಿರ್ಮಿಸಬೇಕು. ಸರಕಾರ ನಡೆಸುವ ಉದ್ಯೋಗಗಳಲ್ಲಿ ನಷ್ಟ, ವ್ಯರ್ಥ ಹೆಚ್ಚು ಎನ್ನಬಹುದು. ಸ್ವಲ್ಪಮಟ್ಟಿಗೆ ವ್ಯರ್ಥವಾದರೂ ಚಿಂತೆಯಿಲ್ಲ. ಹಾಗಲ್ಲವೆ ಐಶ್ವರ್ಯ ಸಂಗ್ರಹವಾಗಲು ಅವಕಾಶ ಕೊಟ್ಟರೆ ಅಪಾರ ವ್ಯರ್ಥ ವಾಗುತ್ತದಲ್ಲ. ಈ ಯುದ್ಧಗಳೆಲ್ಲ ಐಶ್ವರ್ಯ-ಅಧಿಕಾರಗಳ ಸಂಗ್ರಹದ ಫಲ. ಅಧಿಕಾರ, ಐಶ್ವರ್ಯಗಳ ಸಂಗ್ರಹ ಕೇಂದ್ರೀಯ ಉತ್ಪಾದನೆಯ ಪರಿಣಾಮ. ಕಳೆದ ಕೆಲವು ವರ್ಷಗಳಲ್ಲಿ ಎಷ್ಟು ಐಶ್ವರ್ಯ ಹಾಳಾ ಯಿತೋ ನೋಡಿ.

ಅನಿವಾರ್ಯವಾದರೆ ಮಾತ್ರ ಕೇಂದ್ರೀಯ ಉದ್ಯೋಗವಿರಲಿ. ಇಲ್ಲದಿದ್ದರೆ ಬೇಡ. ಇದು ವಿಷವಿದ್ದಂತೆ. ವಿಷವೂ ಒಂದೊಂದು ಸಲ ಔಷಧವಾಗುತ್ತದೆ. ನೀವು ಕೊಯಿನಾ ತೆಗೆದುಕೊಳ್ಳುತ್ತೀರಿ. ವೈದ್ಯರು ಹೇಳಿದ ರೀತಿ ಸ್ವಲ್ಪ ಪ್ರಮಾಣದಲ್ಲಿ ತೆಗೆದುಕೊಂಡರೆ ವಿಷವೂ ಹಿತವೇ. ವಿಷದಂಥ ಕೇಂದ್ರೀಯ ಉದ್ಯೋಗವನ್ನು ಸ್ಥಾಪಿಸಲೇಬೇಕಾದ ಪಕ್ಷದಲ್ಲಿ, ಅವಕ್ಕೊಂದು ಕೆಂಪು ಚೀಟಿ ಅಂಟಿಸಿ ವೈದ್ಯರು ಹೇಳಿದಷ್ಟು, ಅದೇ ರೀತಿ, ತೆಗೆದುಕೊಳ್ಳಬಹುದು! ಇಲ್ಲದಿದ್ದರೆ ಆಪತ್ತು ಸಿದ್ಧ. ಕೇಂದ್ರೀಯ ಉದ್ಯೋಗಗಳು ಸ್ವಭಾವತಃ ಸಮಾಜ-ಕಂಟಕಗಳು. ಆದುದರಿಂದ

ಅವುಗಳ ವ್ಯಾಪ್ತಿಯನ್ನು ಪರಿಮಿತಿಗೊಳಿಸಬೇಕು. ಹೇಗೆ? ಸಮಾಜಕ್ಕೆ ಇದು ಬೇಕೇಬೇಕು ಎಂಬಂತಿದ್ದರೆ, ಆ ಉದ್ಯೋಗದ ಸ್ವಭಾವವೇ ಸರ್ವ ಮಾನ್ಯವಾದರೆ ಆಗ ಅದನ್ನು ಕೈಗೊಳ್ಳಿ. ಉದಾ: ನೀರಿನ ಸರಬರಾಜು. ಸರಕಾರವೆ ನೀರಿನ ಸರಬರಾಜು ಮಾಡಬೇಕು. ಹೀಗೆ ದೀರ್ಘದೃಷ್ಟಿಯ ಕೆಲಸಗಳನ್ನು ಸರಕಾರಕ್ಕೆ ವಹಿಸಬೇಕು.

ವೆಚ್ಚ-ಲಾಭ: ಕೆಲವರು ಬೆಲೆಯ ಮಾತನ್ನು ಆಡುತ್ತಾರೆ. ಕೇಂದ್ರೀಯ ಉದ್ಯೋಗಗಳಾದರೆ ಉತ್ಪಾದನೆ ಅಗ್ಗವಾಗುತ್ತದೆ. ಆದುದ ರಿಂದ ಕೇಂದ್ರೀಯ ಉದ್ಯೋಗಗಳು ಉತ್ತಮ ಎನ್ನುತ್ತಾರೆ. ಯಾವಾ ಗಲೂ ಹೀಗೆ ಅಲ್ಲ. ರೈಲು, ಅಂಚೆ-ತಂತಿ, ವಿದ್ಯುತ್ತು, ನೀರಾವರಿ-ಇಂಥವು ಸಹಜವಾಗಿಯೆ ಏಕಾಧಿಕಾರದಲ್ಲಿರಬೇಕು. ಇವು ಸಾರ್ವಜನಿಕ ಸೌಕರ್ಯಕ್ಕಾಗಿ ಲಾಭದೃಷ್ಟಿಯಿಲ್ಲದೆ ಸೇವಾರ್ಥ ನಡೆಸಲ್ಪಡಬೇಕು. ಸರಕಾರ ಇವನ್ನು ನಡೆಸಿದರೆ ಲಾಭದೃಷ್ಟಿ ಹೋಗುತ್ತದೆ. ಖಾಸಗಿ ಯವರು ಮಾಡಿದರೆ ಲಾಭವೆ ಮುಖ್ಯ.

ಖಾಸಗಿ ವ್ಯಕ್ತಿಗಳಿಗೆ ಲಾಭವೇ ಮುಖ್ಯೋದ್ದೇಶ. ಬೆಲೆ ಅಥವಾ ವೆಚ್ಚ ಹೆಚ್ಚಾದರೆ ಲಾಭ ಕಡಮೆ. ಬೆಲೆ ಕಡಮೆಯಾದರೆ ಲಾಭ ಹೆಚ್ಚು. ಆದುದರಿಂದ ಕೇಂದ್ರೀಯ ಉದ್ಯೋಗಗಳಲ್ಲಿ ಸಾಧ್ಯವಾದಷ್ಟು ವೆಚ್ಚವನ್ನು ತಗ್ಗಿಸುತ್ತಾರೆ. ಇದಕ್ಕೆ ಸುಲಭವಾದ ಉಪಾಯ ಕಡಮೆ ಕೂಲಿ ಕೊಡುವುದು, ಕಚ್ಚಾಮಾಲನ್ನು ಅಗ್ಗವಾಗಿ ಕೊಳ್ಳುವುದು, ಮೇಲ್ವಿ ಚಾರಣೆಯ ವೆಚ್ಚವನ್ನು ತಗ್ಗಿಸುವುದು. ಕಡಿಮೆ ಕೂಲಿ, ಅಗ್ಗದ ಮಾಲು ಆದರೆ ಆ ಉದ್ಯೋಗದ ವ್ಯವಸ್ಥಾಪಕ-ಮಾಲಿಕ ಭಾಗ್ಯವಂತನಾದ; ಉಳಿದವರು ಬಡವರಾದರು. ಐಶ್ವರ್ಯದ ವಿಷಮ ವಿಭಾಜನೆ ತಲೆತೂರಿಸು ತ್ತದೆ.

ಗ್ರಾಮೋದ್ಯೋಗಗಳಲ್ಲಿ ಹೀಗಿಲ್ಲ. ಧಾರಣೆ ಹೆಚ್ಚಾದರೂ ಲಾಭದ ಮಾತಿಲ್ಲ. ಪ್ರತಿಯೊಬ್ಬರಿಗೂ ಸರಿಯಾದ ಪಾಲು ಸಿಗುತ್ತದೆ. ಆದುದ ರಿಂದ ಗ್ರಾಮೋದ್ಯೋಗಗಳಲ್ಲಿ ಧಾರಣೆ ಹೆಚ್ಚಾದರೂ ಚಿಂತಿಸಬೇಕಾಗಿಲ್ಲ. ನಾವು ಮಾಡಬೇಕಾದುದು ಒಂದುಕಡೆ ಐಶ್ವರ್ಯ ಹೆಚ್ಚು, ಉಳಿದೆಲ್ಲ ಕಡೆ ಬರಿಗೈ ಆಗದಂತೆ ನೋಡಿಕೊಳ್ಳುವುದು.

ಬೆಲೆಯ ನಿಯಂತ್ರಣ: ಬೆಲೆಯ ನಿಗದಿಯಲ್ಲಿ ಭಾರಿ ಉದ್ಯೋಗ ಗಳನ್ನೂ ಅಲ್ಪೋದ್ಯೋಗಗಳನ್ನೂ ಒಂದೇ ರೀತಿ ಕಾಣಬಾರದು. ನಿಯಂತ್ರಣ ಮಾಡುವ ಮುನ್ನ ಆ ಉದ್ಯೋಗದ ಲಕ್ಷಣವೇನೆಂಬುದನ್ನು ಅರಿತುಕೊಳ್ಳಬೇಕು. ಎಲ್ಲಾ ಕ್ಷೇತ್ರಗಳಲ್ಲಿಯೂ ನಿಯಂತ್ರಣ ಒಳ್ಳೆಯ ದಲ್ಲ. ಒಂದು ಉದ್ಯೋಗ ಸಮಾಜ ಕಂಟಕವಾಗಿದ್ದರೆ ಅದು ಕೇಂದ್ರಿತ ವಾಗಬಾರದು. ಇದು ಭಾರಿ ಉದ್ಯೋಗಕ್ಕೆ ಯೋಗ್ಯವೆ ಅಲ್ಲವೆ ಎಂಬು ದನ್ನು ನಿರ್ಧರಿಸುವುದು ಅದರ ಲಕ್ಷಣ: ಅದು ಸಮಾಜ ಕಂಟಕವೆ, ಅಲ್ಲವೆ?

ಸ್ವಾಭಾವಿಕವಾಗಿಯೆ ಸರ್ವಮಾನ್ಯ, ಏಕಾಧಿಕಾರದ ಲಕ್ಷಣದ ಉದ್ಯೋಗಗಳಿರುತ್ತವೆ. ಅಲ್ಲಿ ಹೇರಳವಾಗಿ ಬಂಡವಾಳವೂ ಬೇಕು. ಅಂಥವು ಕೇಂದ್ರಿಯ ಉದ್ಯೋಗಗಳಾಗಲಿ. ಉದಾ: ಕಲ್ಲಿದ್ದಲು ಗಣಿಗಳು, ರೈಲು ಮುಂತಾದವಕ್ಕೆ ಬಹಳ ಬಂಡವಾಳ ಬೇಕು, ಹೆಚ್ಚು ಜನ ಕೆಲಸಗಾರರು ಬೇಕು. ಅಂಥ ಉದ್ಯೋಗಗಳನ್ನು ಖಾಸಗಿ ಜನಕ್ಕೆ ಬಿಡಬಾರದು; ಸರಕಾರವೇ ನಡೆಸಬೇಕು.

ಉದ್ಯೋಗದಲ್ಲಿ ಪ್ರಜಾತಂತ್ರ: ಬಟ್ಟೆ ಗಿರಣಿಗಳಲ್ಲಿ ಸಾವಿರಾರು ಜನ ಒಬ್ಬ ನಿರಂಕುಶ ಯಜಮಾನನ ಕೈ ಕೆಳಗೆ ಕೆಲಸ ಮಾಡುತ್ತಾರೆ. ಆದುದರಿಂದ ಅವು ಪ್ರಜಾತಂತ್ರಕ್ಕೆ ವಿರುದ್ಧ. ಅವನು ಹೇಳಿದುದೇ ಶಾಸನ; ಅದನ್ನು ನಡಸಲೇ ಬೇಕು. ಇಂಥ ಅಸಾಮಾಜಿಕ ವ್ಯವಸ್ಥೆಗೆ ಪ್ರಜಾತಂತ್ರದಲ್ಲಿ ಎಡೆಯಿಲ್ಲ. ಎಲ್ಲೆಲ್ಲೂ ಶುದ್ಧ ಪ್ರಜಾತಂತ್ರವಿರಬೇಕು. ರಾಜಕೀಯ ದೃಷ್ಟಿಯಿಂದಲೂ ಕೇಂದ್ರೀಯ ಉದ್ಯೋಗಗಳು ಸರಿಯಲ್ಲ.

ನಮಗೆ ಬೇಕಾದುದು ಸಹಕಾರಿ-ಸಮಾಜ. ಸ್ಪರ್ಧೆ ಎಂದರೆ ಬಲಾಬಲಗಳ ಹಿಂಸಾ ರೀತಿ. ಅದು ನಮಗೆ ಬೇಡ. ನಮ್ಮ ಗುರಿ ಸಹಕಾರ; ಸ್ಪರ್ಧೆಯ ವಿನಾಶನ. ಸುಮ್ಮನೆ ಧಾರಣೆ ನಿಗದಿ ಮಾಡಿದ ಮಾತ್ರಕ್ಕೇ ಸ್ಪರ್ಧೆ ಸಾಯದು.

ರೋಗಿಗಳ ಸ್ಥಿತಿಯನ್ನು ಪರೀಕ್ಷಿಸಿ ವೈದ್ಯ ಅತ್ಯಲ್ಪ ಪ್ರಮಾಣದಲ್ಲಿ ವಿಷವನ್ನೇ ಔಷಧವಾಗಿ ಕೊಡುವಂತೆ ಪ್ರತಿಯೊಂದು ಉದ್ಯೋಗವನ್ನೂ ಪರೀಕ್ಷಿಸಿ, ಅದನ್ನು ಕೇಂದ್ರೀಕರಿಸಿದರೆ ಒಳ್ಳೆಯದೋ ಕೆಟ್ಟುದೋ ನೋಡ

ಬೇಕು. ಕೇಂದ್ರೀಕರಣ ಬೇಡ ಎಂದರೆ ಯಂತ್ರವೇ ಬೇಡ ಎಂದಲ್ಲ. ಮನುಷ್ಯ ಯಂತ್ರದ ಕೈ ಗೊಂಬೆ, ಅಡಿಯಾಳು ಆಗಬಾರದು. ಅಷ್ಟೇ. ಯಂತ್ರ ಮನುಷ್ಯನ ಕೈ ಮೀರಿದರೆ ಹಿಂಸೆ ಖಂಡಿತ.

**ಹಿಂಸೆ-ಶಾಂತಿ:** ಅರ್ಥಶಾಸ್ತ್ರದ ಪುಸ್ತಕಗಳಲ್ಲಿ ಬಯಕೆ-ಪೂರಯಿಕೆಗಳ ತತ್ವವನ್ನು ಓದುತ್ತೇವೆ. ಆದರೆ ವಾಸ್ತವ ಜಗತ್ತಿನಲ್ಲಿ, ಅದರಲ್ಲಿಯೂ ಸ್ಪರ್ಧಾಮಯ ಲೋಕದಲ್ಲಿ, ಅಂಥ ನಿಯಮ ಯಾವುದೂ ಕಾಣಬರುತ್ತಿಲ್ಲ. ಒಂದು ಯಂತ್ರವಿದ್ದರೆ ಅದರ ಶಕ್ತಿಯಿದ್ದಷ್ಟು ಅದು ಉತ್ಪತ್ತಿ ಮಾಡಬೇಕು. ಉದಾ: ಒಂದು ಚಪ್ಪಲಿ ಕಾರಖಾನೆ. ೩೦೦ ಜೊತೆ ಚಪ್ಪಲಿಗಳನ್ನು ಜನ ಬಯಸುತ್ತಾರೆ. ಆದರೆ ೫೦೦ ಜೊತೆ ಚಪ್ಪಲಿಗಳನ್ನು ಮಾಡಿದರೇನೆ ಕಾರಖಾನೆಗೆ ಲಾಭ ಸಿಗುವುದು. ಉತ್ಪಾದನದ ವೆಚ್ಚ ಕಡಮೆಯಾಗಬೇಕಾದರೆ ೫೦೦ ಜೊತೆ ಮೆಟ್ಟನ್ನು ಮಾಡಲೇಬೇಕು; ೫೦೦ ಕ್ಕೆ ಗಿರಾಕಿ ಇರಲಿ ಇಲ್ಲದಿರಲಿ. ಕಾರಖಾನೆ ಒಡೆಯನಿಗೆ ಬೇಕಾದುದು ಲಾಭ. ಆದುದರಿಂದ ಆದಷ್ಟು ಉತ್ಪಾದನದ ವೆಚ್ಚ ಕಡಮೆಯಿರಬೇಕೆಂದು ಅವನ ಪ್ರಯತ್ನ. ಗಿರಾಕಿಯಿರಲಿ ಬಿಡಲಿ, ೫೦೦ ಜೊತೆ ಮೆಟ್ಟನ್ನು ಅವನು ಮಾಡಿಸಿಯೆ ಮಾಡಿಸುತ್ತಾನೆ. ಆಗ ಅವನ ವೆಚ್ಚ ತಳಕ್ಕೆ ಬರುತ್ತದೆ. ಆಮೇಲೆ ಅವಕ್ಕೆ ಗಿರಾಕಿಯನ್ನು ಹುಡುಕುತ್ತಾನೆ. ಹೀಗೆ ಯಂತ್ರದ ವೇಗ-ಶಕ್ತಿಗಳಿಗೆ ಮನುಷ್ಯ ಗುಲಾಮನಾಗುತ್ತಾನೆ. ಬಯಕೆ-ಬೇಡಿಕೆಗಳ ಗೊಡವೆಯೆ ಇಲ್ಲ. ಆಗ ಪೇಟೆಯ ಬೇಟೆ, ಗಿರಾಕಿಗಳ ಶೋಧನೆ ನಡೆಯಬೇಕು ಈ ಹೆಚ್ಚಿನ ಜೊತೆಗಳಿಗೆ. ಅದಕ್ಕಾಗಿ ಯುದ್ಧ. ಮೊದಲು ಉತ್ಪಾದನೆ. ಆಮೇಲೆ ಕೈಯಲ್ಲಿ ಕತ್ತಿ, ಬಾಯಲ್ಲಿ ವ್ಯಾಪಾರ-ಹೀಗೆ ಗಿರಾಕಿಗಳನ್ನು ಹುಡುಕುವುದು. ಕೊಳ್ಳುತ್ತೀಯೋ ಕೊಲ್ಲಲೋ? ಯುದ್ಧಗಳಿಗೆಲ್ಲ ಈ ಕೇಂದ್ರೀಯ ಉದ್ಯೋಗಗಳೇ ಕಾರಣ ಎಂಬುದು ಸ್ಪಷ್ಟ. ಆದುದರಿಂದ ಈ ಭಾರಿ ಉದ್ಯೋಗಗಳಿಗೆ ಒಂದು ಮಿತಿಯನ್ನು ಕಲ್ಪಿಸಬೇಕಾದುದು ಅಗತ್ಯ.

ಚರ್ಮ ಹದಮಾಡುವ ಕೈಗಾರಿಕೆಯಂಥವರಲ್ಲಿ ಬೃಹತ್ ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಇಂಥ ಕೈಗಾರಿಕೆಗಳೂ ಇವೆ. ಅಲ್ಲಿ

ಅವನ್ನು ಉಪಯೋಗಿಸೋಣ. ಆದರೆ ಖಾಸಗಿ ಒಡೆತನದಲ್ಲಿ ಬೇಡ. ಕ್ರೋಮ್ ಚರ್ಮ ಬೇಕಾದರೆ ಸಹಕಾರ ಸಂಘಗಳ ಮೂಲಕ ಮಾಡಿ ಚಮ್ಮಾರರಿಗೆ ಚರ್ಮವನ್ನು ಮೂಲಕ್ರಯಕ್ಕೆ ಕೊಡೋಣ.

ಇದೇ ರೀತಿ ವೈಯಕ್ತಿಕವಾಗಿ ಅಥವಾ ಚಿಕ್ಕ ಪ್ರಮಾಣದಲ್ಲಿ ಮಾಡಬಹುದಾದವೂ ಎಷ್ಟೋ ಇವೆ. ಉದಾ : ೧೬೦೦ ಡಿಗ್ರಿ, ಶಾಖದ ಭಟ್ಟಿಯನ್ನು ಬಂಡವಾಳ, ವಿದ್ಯುತ್ತು ಇಲ್ಲದೆ ಕಟ್ಟಲಾಗುವುದಿಲ್ಲ. ಅದು ಕೇಂದ್ರಿತ ವಿಧಾನ. ವಿದ್ಯುತ್ತನ್ನು ಬಳಸೋಣ, ಆದರೆ ಲಾಭಕ್ಕಾಗಿ ಅಲ್ಲ. ಸಮಾಜವನ್ನು ಶೋಷಣೆ ಮಾಡಲು ಇದೊಂದು ಸಾಧನವಾಗಬಾರದು.

# ಪ್ರಕರಣ ೮

## ಆಡಳಿತದ ಕೆಲಸ

ಮನುಷ್ಯನ ಕಾರ್ಯ ಕಲಾಪಗಳಲ್ಲಿ ಒಂದು ದೀರ್ಘದೃಷ್ಟಿ, ಇನ್ನೊಂದು ತಾತ್ಕಾಲಿಕ ದೃಷ್ಟಿ ಇರುತ್ತವೆ ಎಂದು ನೋಡಿದೇವಲ್ಲ. ವ್ಯಕ್ತಿಗೆ ಸಾಧಾರಣವಾಗಿ ತನಗೆ ಸದ್ಯ ಸಿಗುವ ಲಾಭದ ದೃಷ್ಟಿಯೇ ಹೆಚ್ಚು. ತನ್ನ ಕಾಲವಾದ ಮೇಲೆ ಫಲ ಕೊಡುವ ಕೆಲಸದಲ್ಲಿ ಅವನಿಗೆ ಆಸಕ್ತಿ ಕಡಮೆ. ನಾಡಿದ್ದು ಬರುವ ಒಂದಾಣೆಗಿಂತ ನಾಳೆ-ಇವೊತ್ತೇ ಮೂರು ಕಾಸು ಬಂದರೆ, ಅವನಿಗೆ ಅದೇ ತೃಪ್ತಿ. ಆದುದರಿಂದ ಇಡೀ ಸಮಾಜದ ಹಿತಕ್ಕಾಗಿ ದೀರ್ಘಾಲೋಚನೆಮಾಡಲು ಕೆಲವರನ್ನಾದರೂ ಪ್ರತ್ಯೇಕವಾಗಿ ನೇಮಿಸುವುದು ಅಗತ್ಯವಾಗುತ್ತದೆ. ಇದೇ ರಾಷ್ಟ್ರೀಯ ಸರಕಾರದ ಕೆಲಸ.

ಸಾಧಾರಣ ಮನುಷ್ಯನ ಶಕ್ತಿ-ಸಾಮರ್ಥ್ಯಗಳಿಗೆ ಎಲ್ಲಾ ಕೆಲಸಗಳನ್ನೂ ಮಾಡಲು ಸಾಧ್ಯವಿಲ್ಲ. ಆದರೆ ಆ ಕೆಲಸ ಅಗತ್ಯ. ಅಂಥ ಕೆಲಸಗಳೆಲ್ಲ ಸರಕಾರದ ಪಾಲಿಗೆ. ಸರಕಾರಕ್ಕೆ ಜನಬಲ-ಧನಬಲ ಎರಡೂ ಅಪಾರ. ಸಂಶೋಧನೆ, ಪ್ರಯೋಗ, ಜ್ಞಾನ ಪ್ರಚಾರಗಳನ್ನು ವೈಯಕ್ತಿಕವಾಗಿ ಒಬ್ಬ ರೈತನಾಗಲಿ ಗ್ರಾಮೋದ್ಯೋಗಿಯಾಗಿ ಮಾಡಲಾರ.

ಇದುವರೆಗೆ ಸರಕಾರದ್ದಾಗಲಿ ಸಾರ್ವಜನಿಕರದಾಗಲಿ ಶಕ್ತಿ ಸಾಮರ್ಥ್ಯ, ಉತ್ಸಾಹ-ಬಲ ಎಲ್ಲವೂ ಗಿರಣಿ-ಕಾರಖಾನೆ ಪದಾರ್ಥಗಳನ್ನು ಮಾರುವುದರಲ್ಲಿಯೇ ತೊಡಗಿದೆ. ಇನ್ನು ಮುಂದೆ ಗ್ರಾಮೋದ್ಯೋಗದ ಆಧಾರದ ಮೇಲೆ ಗ್ರಾಮಸ್ವಾವಲಂಬನೆಯನ್ನು ನಿರ್ಮಿಸಲು ಈ ಶಕ್ತಿಯೆಲ್ಲವೂ ಉಪಯೋಗವಾಗಬೇಕು. ಈಗ ಹಳ್ಳಿಯವರಿಗೆ ಇರುವ ತೊಂದರೆ, ಅಡ್ಡಿ-ಆತಂಕಗಳನ್ನೆಲ್ಲ ನಿಶ್ಚಯಪೂರ್ವಕ ಪ್ರಯತ್ನ ಮಾಡಿ ನಿವಾರಿಸಬೇಕು.

ನೀರಾವರಿ : ಎಲ್ಲಾ ಹಳ್ಳಿಗಳಿಗೂ ನೀರಾವರಿಯ ಅನುಕೂಲತೆ ಬೇಕು. ಇದನ್ನು ಎಷ್ಟು ಒತ್ತಿ ಹೇಳಿದರೂ ಕಡಮೆಯೆ. ಕೃಷಿಯ ಪ್ರಗತಿಗೆ ಇದೇ ಆಧಾರ. ಇದರ ಹೊರತು ಕೃಷಿ ಬರೀ ಜೂಜಾಟ. ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಆಳ-ಅಗಲ ಮಾಡುವುದು, ಕಾಲುವೆ ತೋಡುವುದು-ಮುಂತಾದ ಕಾರ್ಯಕ್ರಮವನ್ನು ಕೈಗೊಳ್ಳಬೇಕು. ಭತ್ತದ ಗಿರಣಿ-ಹಿಟ್ಟಿನ ಗಿರಣಿಗಳಲ್ಲಿರುವ ಇಂಜಿನುಗಳನ್ನು ಸರಕಾರ ತೆಗೆದುಕೊಂಡು ಕೊಳವೆ ಬಾವಿ, ಸುರಂಗ ಬಾವಿಗಳಿಂದ ನೀರೆತ್ತಲು ಉಪಯೋಗಿಸಬಹುದು. ನೀರಿನ ಅನುಕೂಲವಿಲ್ಲದೆ ಗೊಬ್ಬರ ಹಾಕಿದರೆ ಪ್ರಯೋಜನವಿಲ್ಲ. ನೀರಿಲ್ಲದಿದ್ದರೆ ಗೊಬ್ಬರದಿಂದ ಅಪಾಯವಾಗುತ್ತದೆ.

ಭೂ ವ್ಯವಸ್ಥೆ : ಸಾಗುವಳಿ ಭೂಮಿಯನ್ನು ಹೆಚ್ಚಿಸಬೇಕು. ಹುಲುಸು ಮಾಡಲೂ ಬೇಕು. ನೆಲ ಕೊಚ್ಚಿಹೋಗದಂತೆ ತಡೆಯಲು ಅಡ್ಡಕಟ್ಟೆ ಹಾಕಿ ನೀರು ನಿಂತು ನೆಲ ಹುದಲಾಗದಂತೆ ಕಾಲುವೆ ತೋಡಿ, ಮೆಟ್ಟಲು ಕಟ್ಟಿ ನೆಲದ ಹುಲುಸನ್ನು ಕಾಯಬೇಕು. ಏನೇ ಮಾಡಿದರೂ, ಜನಕ್ಕೆ ದನಕ್ಕೆ ಅನ್ನ-ಮೇವು ಒದಗಿಸುವುದು ಭೂಮಿಯೇ. ಮತ್ತಾವುದೂ ಅಲ್ಲ. ಭೂಮಿಯ ಸಾರ ಕಡಮೆಯಾದರೆ ಬೆಳೆಯೂ ಹೀನವಾಗುತ್ತದೆ. ಅದರಿಂದ ಜನರ ಆರೋಗ್ಯ ಕೆಡುತ್ತದೆ. ಆದುದರಿಂದಲೇ ಆಹಾರಶಾಸ್ತ್ರ ಪಂಡಿತರು ಆರೋಗ್ಯಕ್ಕೂ ಕೃಷಿಗೂ ಬಿಡದ ಗಂಟು ಎನ್ನುವುದು.

ಬಿಹಾರ ಮೊದಲಾದ ಪ್ರದೇಶಗಳಲ್ಲಿ ಮೊದಲು ಭತ್ತ ಮುಂತಾದ ಧಾನ್ಯಗಳನ್ನು ಬೆಳೆಯುತ್ತಿದ್ದ ನೆಲದಲ್ಲಿ ಈಗ ವ್ಯಾಪಾರದ ಬೆಳೆಯಾದ ಕಬ್ಬು, ಹೊಗೆಸೊಪ್ಪು, ದೊಡ್ಡ ಹತ್ತಿಗಳನ್ನು ಬೆಳೆಯುತ್ತಿದಾರೆ. ಹಣ ಹೆಚ್ಚು ಬರುವ ದಾರಿ ಹುಡುಕಿದಾರೆ. ಅದೇ ರೀತಿ ಮಲಬಾರಿನಲ್ಲಿ ಸಾವಿರ ಸಾವಿರ ಎಕರೆ ಭತ್ತದ ಗದ್ದೆಯಲ್ಲಿ ಈಗ ತೆಂಗಿನ ತೋಟ ಬೆಳೆದಿದೆ. ಈ ತೆಂಗಿನಕಾಯಿ ಎಣ್ಣೆಗಿರಣಿಗಳಿಗೆ ಸರಬರಾಜಾಗುತ್ತದೆ. ಆ ಎಣ್ಣೆಯಿಂದ ಆಗುವುದು ಸಾಬೂನು. ಮೊದಲು ಗದ್ದೆಮಾಡಿ ತನ್ನ ಮನೆಯ ಅಕ್ಕಿಯನ್ನು ತಿನ್ನುತ್ತಿದ್ದ ಬೇಸಾಯಗಾರ, ಈಗ ಬ್ರೆಜಿಲ್ ಗಿರಣಿ

ಅಕ್ಕಿಯನ್ನು ತಿಂದು ಕಾಯಿಲೆ ಬೀಳುತ್ತಾನೆ. ಜನರು ಪ್ರಾಥಮಿಕ ಆವಶ್ಯಕತೆಗಳನ್ನು ಬೆಳೆಯುವಂತೆ ಮಾಡಬೇಕಾದುದು ಸರಕಾರದ ಕರ್ತವ್ಯ. ಅನ್ನ ಬಟ್ಟೆಗಳ ಉತ್ಪತ್ತಿ ಸಾಕಷ್ಟಾಗಿ ಹೊಲ ಮಿಕ್ಕರೆ, ಆಗ ಅವನ್ನು ವ್ಯಾಪಾರದ ಬೆಳೆಗಳಿಗೆ ಉಪಯೋಗಿಸಬಹುದು. ಉತ್ತಮ ವಾದ ಭತ್ತದ ಗದ್ದೆಗಳು ಸಾಬೂನು ತೋಟಗಳಾಗಿ, ಇತ್ತ ಜನ ಹೊಟ್ಟೆ ಗಿಲ್ಲದೆ ಸಾಯುವಂಥ ಸ್ಥಿತಿ ಬಂದಿರುವುದು ಸರಕಾರದ ಕರ್ತವ್ಯಲೋಪದ ಅಪರಾಧದಿಂದ ಎಂಬುದನ್ನು ಹೇಳಬೇಕೇ! ಒಂದು ಯೋಜನೆಮಾಡಿ, ಇಂಥಿಂಥ ಬೆಳೆ ಬೆಳೆಯಬೇಕೆಂದು ಲೈಸನ್ಸ್ ಪದ್ಧತಿಯನ್ನು ರೂಢಿಗೆ ತರಬೇಕು.

**ಸಂಶೋಧನೆ:** ವ್ಯವಸಾಯದ ಸಂಶೋಧನೆಯೆಲ್ಲಾ ಆಹಾರದ ಬೆಳೆಯನ್ನೂ, ಗ್ರಾಮೋದ್ಯೋಗದ ಮೂಲವಸ್ತುವನ್ನು ಅಭಿವೃದ್ಧಿ ಗೊಳಿಸುವ ಪ್ರಯತ್ನಮಾಡಬೇಕು. ಹಣದ ಬೆಳೆಯನ್ನು ಪ್ರೋತ್ಸಾಹಿಸ ಲಾಗದು: ಹೊಗೆಸೊಪ್ಪು, ಮರಗಬ್ಬು, ದೊಡ್ಡ ಹತ್ತಿಗಳ ಸಂಶೋಧನೆ ಅಗತ್ಯವಲ್ಲ.

**ಬಾಡಿಗೆಬಂಕ-ಮೊದಲು ಮಾನ್ಯ:** ಈಗ ಗಿರಣಿಪದಾರ್ಥ ಗಳಿಗೇ ಪಕ್ಷ ಪಾತ ತೋರುತ್ತಿದಾರೆ. ರಿಯಾಯಿತಿ ಬಾಡಿಗೆ, ಸಾಗಾಣಿಕೆಯ–ಮೊದಲು–ಮಾನ್ಯ ಗಿರಣಿಗಳಿಗೆ. ಗ್ರಾಮೋದ್ಯೋಗದ ಕೈಕಾಗದ, ಎಣ್ಣೆ ದೀಪ ಮುಂತಾದವನ್ನು ರೈಲಿನಲ್ಲಿ ಕಣ್ಣೆತ್ತಿಯೆ ನೋಡರು. ಇದರಿಂದ ಆ ಉದ್ಯೋಗಗಳಲ್ಲಿ ಪದಾರ್ಥ ಮುಂದೆ ಸಾಗದೆ ನಿಂತುಬಿಡುತ್ತದೆ. ಯುದ್ಧ ಕಾಲದಲ್ಲಿ ಗ್ರಾಮೋದ್ಯೋಗಗಳಿಗೆ ಒಳ್ಳೆಯ ಅವಕಾಶ. ಆಗ ಅವನ್ನು ಬೆಳೆಯಗೊಡದಂತೆ ರೈಲಿನ ಧೋರಣೆ ಹಿಸುಕಿಹಾಕಿತು. ಎಲ್ಲಾ ವಿಷಯಗಳಲ್ಲಿ ಹೇಗೋ ಇದರಲ್ಲಿಯೂ ಹಾಗೆ ಗ್ರಾಮೋದ್ಯೋಗಗಳ ಪರ ಧೋರಣೆ ಬದಲಾಗಬೇಕು. ಇವಕ್ಕೇ ಪ್ರಥಮಾವಕಾಶ ಸಲ್ಲಬೇಕು. ಗ್ರಾಮೋದ್ಯೋಗದ ವಸ್ತುಗಳಿಗೆ ಪೌರಸಭೆಯ ಸುಂಕ, ವಿಶೇಷ ತೆರಿಗೆ ಮುಂತಾದವನ್ನು ಹಾಕಬಾರದು.

**ಗೋಸಂವರ್ಧನ:** ಸರಕಾರ ಗೋಸಂವರ್ಧನಾ ಕಾರ್ಯವನ್ನು ಇನ್ನೂ ಹೆಚ್ಚಾಗಿ ಕೈಗೊಳ್ಳಬೇಕು. ಎಲ್ಲೆಲ್ಲಿ ಸ್ಥಳೀಯ ತಳಿ ಇದೆಯೋ

ಅಲ್ಲಿ ಅವನ್ನು ಕಾಪಾಡಿ ವೃದ್ಧಿಗೊಳಿಸುವ ಪ್ರಯತ್ನ ನಡೆಯಬೇಕು. ಅಗತ್ಯವಿದ್ದ ಕಡೆ ಬೀಜದ ಹೋರಿಗಳನ್ನು ಕಾಪಾಡಲು ಪ್ರೋತ್ಸಾಹ ನೀಡಬೇಕು. ಗೋ ಸೇವಾಸಂಘದ ಮೂಲಕ ಈ ಕೆಲಸ ನಡೆದರೆ ಒಳಿತು.

ಸಾಗಾಣಿಕೆ-ರಸ್ತೆ : ಹಳ್ಳಿಗಳಲ್ಲಿ ಮೋಟಾರು ಓಡುವ ರಸ್ತೆಗಳಿಗೆಲ್ಲ ಟಾರು ಬಳಿಯಬೇಕು. ಇದರ ವೆಚ್ಚ ಮೋಟಾರು ಒಡೆಯರಿಂದ ಬರ ಬೇಕು. ಈ ಬಗೆಯ ರಸ್ತೆಗಳ ನಿರ್ಮಾಣದ, ಅವುಗಳ ವ್ಯವಸ್ಥೆಯ ವೆಚ್ಚವೆಲ್ಲವೂ ಹುಟ್ಟುವಳಿಯಾಗುವಂತೆ ಮೋಟಾರುಗಳ ಮೇಲೆ, ಪೆಟ್ರೋಲಿನ ಮೇಲೆ ತೆರಿಗೆ ಸುಂಕ ಹಾಕಬೇಕು. ಟಾರು ಹಾಕದ ರಸ್ತೆ ಗಳಲ್ಲಿ ಮೋಟಾರು ಓಡಲು ಬಿಡಬಾರದು. ವಿಶೇಷ ಅಪ್ಪಣೆಯ ಮೇಲೆ ಗಂಟೆಗೆ ೫ ಮೈಲಿ ವೇಗದಲ್ಲಿ ಹೋಗಲು ಅವಕಾಶ ಕೊಡಬಹುದು.

ಅರಣ್ಯ ಸಂರಕ್ಷಣೆಯ ವಿಧಾನವನ್ನೂ ಸರಕಾರ ಬದಲಿಸಲೇಬೇಕು. ಅರಣ್ಯ ಶಾಖೆ ಸರಕಾರಕ್ಕೆ ಹಣ ಕೊಡಲಲ್ಲ, ಜನರಿಗೆ ಅನುಕೂಲ ಮಾಡಲಿಕ್ಕೆ. ಕಾಡಿನಲ್ಲಿ ಹುಟ್ಟುವಳಿಯಾಗುವ ತೇಗ, ಅರಗು ಇತ್ಯಾದಿ ಗಳನ್ನು ಜನರು ಉಪಯೋಗಿಸಬಹುದಾದ ರೂಪದಲ್ಲಿ ಒದಗಿಸಬೇಕು. ಅಡವಿಯ ಸುತ್ತ ಇರುವ ಹಳ್ಳಿಗಳ ಜನರ ಆವಶ್ಯಕತೆಗಳನ್ನು ಗಮನಿಸಿ ಅರಣ್ಯ ಯೋಜನೆ ಮಾಡಬೇಕು. ಮುಖ್ಯವಾಗಿ ಕಾಡು ಎರಡು ವಿಧ : ತೇಗದ ಕಾಡು, ಸೌದೆ-ಹುಲ್ಲು ಬೆಳೆವ ಅಡವಿ. ತೇಗದ ಕಾಡನ್ನು ದೀರ್ಘಕಾಲ ಯೋಜನೆಗಳಿಂದ ವೃದ್ಧಿ ಮಾಡಬೇಕು. ಎರಡನೆ ಬಗೆಯ ಅಡವಿಗಳನ್ನು ಜನರ ಉಪಯೋಗಕ್ಕೆ ಉಚಿತವಾಗಿಯೋ, ಅತಿ ಸುಲಭ ದರಲ್ಲಿಯೋ ಕೊಡಬೇಕು. ತಾಳೆಬೆಲ್ಲ, ಕೈಕಾಗದ, ಮಣ್ಣಿನ ಪಾತ್ರೆ ಇತ್ಯಾದಿ ಗ್ರಾಮೋದ್ಯೋಗಗಳಿಗೆ ಬಹಳ ಸುಲಭ ದರದಲ್ಲಿ ಸೌದೆ-ಹುಲ್ಲು ದೊರೆತರೆ ಅವು ಬೆಳೆಯಬಲ್ಲವು. ಇಲ್ಲದಿದ್ದರೆ ಇಲ್ಲ.

ಶಿಕ್ಷಣ ಕೇಂದ್ರಗಳು : ಅಲ್ಲಲ್ಲಿ ಭಾಷೆಯ ಪ್ರಕಾರ ಶಿಕ್ಷಣ ಕೇಂದ್ರ ಗಳಾಗಬೇಕು. ಅಲ್ಲಿ :

೧. ಜಿಲ್ಲಾ ಪ್ರಯೋಗ-ಪ್ರದರ್ಶನ ಕೇಂದ್ರಗಳ ಸಹಕಾರದಿಂದ ಆ ಪ್ರಾಂತದ ಗ್ರಾಮೋದ್ಯೋಗಗಳಿಗೆ ಅಗತ್ಯವಾದ ಕ್ರಮ-ವಿಧಾನಗಳ

ಸಂಶೋಧನೆ ನಡೆಯಬೇಕು. ೨. ಗ್ರಾಮೋದ್ಯೋಗಗಳ ಬಗ್ಗೆ ಪ್ರಾಂತೀಯ ಭಾಷೆಗಳಲ್ಲಿ ಪುಸ್ತಕಗಳನ್ನು ಒದಗಿಸಬೇಕು. ೩. ಗ್ರಾಮೋದ್ಯೋಗ ಪ್ರದರ್ಶನಗಳನ್ನು ನಡಸಬೇಕು. ೪. ಭತ್ತ ಸುಲಿಯುವ ಕಲ್ಲು, ಎತ್ತು ತಿರುವುವ ಹಿಟ್ಟು ಬೀಸುವಕಲ್ಲು, ಚಿಕ್ಕ ಸಕ್ಕರೆ ಯಂತ್ರ, ಮೂಳೆ ಪುಡಿ ಮಾಡುವ ಯಂತ್ರ ಇತ್ಯಾದಿ ಉಪಕರಣಗಳನ್ನು ಒದಗಿಸುವ ಕರ್ಮಾಲಯ ಅಥವಾ ಉದ್ಯೋಗಮಂದಿರ ನಡೆಯಬೇಕು. ೫. ಜಿಲ್ಲಾ ಪ್ರದರ್ಶನ ಕೇಂದ್ರಗಳಿಗೆ, ಸಹಕಾರ ಸಂಘಗಳಿಗೆ ಕೆಲಸಗಾರರನ್ನು, ಗ್ರಾಮಸೇವಕರನ್ನು ತರಬೇತು ಮಾಡಬೇಕು.

# ಪ್ರಕರಣ ೯

## ಜೀವನ ಶಿಕ್ಷಣ

ವಿಶ್ಲೇಷಣ ಮಾಡಿ ನೋಡಿದರೆ, ಎಲ್ಲಕ್ಕೂ ಶಿಕ್ಷಣವೇ ಆದಿಮೂಲ ಎಂಬುದು ತಿಳಿದುಬರುತ್ತದೆ. ಜನರೆಲ್ಲರೂ ಸಾಮಾನ್ಯವಾಗಿ ಒಂದೇ ದೃಷ್ಟಿಯಿಂದ ಜೀವನವನ್ನು ನಿರೀಕ್ಷಿಸುವಂತೆ ಶಿಕ್ಷಣಕೊಟ್ಟರೆ ನಮ್ಮ ಸಮಸ್ಯೆ ಬಗೆ ಹರಿಯುತ್ತವೆ. ಜೀವನದ ಎಲ್ಲಾ ಕ್ಷೇತ್ರಗಳ ಬಾಗಿಲನ್ನೂ ತೆರೆಯುವ ಬೀಗದ ಕೈ ಶಿಕ್ಷಣ.

**ಶಿಕ್ಷಣದ ಅರ್ಥ:** ಶಿಕ್ಷಣ ನಮ್ಮನ್ನು ಜೀವನಕ್ಕೆ ಅಣಿಮಾಡಬೇಕು, ಉತ್ತಮ ಪೌರರು, ಉತ್ತಮ ಮಾತಾಪಿತೃಗಳು, ಉತ್ತಮ ಪತಿಪತ್ನಿಯರು ಆಗಿಮಾಡಬೇಕು–ಎಂದರೆ, ಶಿಕ್ಷಣ ತೊಟ್ಟಿಲಿನಿಂದ ಚಟ್ಟದವರೆಗೂ ನಡೆಯಬೇಕು. ಮಗುವಾಗಿ ತೊಟ್ಟಿಲಲ್ಲಿ ಬಿದ್ದಾಗಿನಿಂದ ಹೆಣವಾಗಿ ಚಟ್ಟವೇರುವ ತನಕ ಶಿಕ್ಷಣ ಅವ್ಯಾಹತವಾಗಿ ನಡೆಯಬೇಕು, ಬಾಳಿನಲ್ಲಿ ಹಲವಾರು ಪರಿವರ್ತನೆಗಳಾಗುತ್ತವೆ. ಸ್ವಲ್ಪವೂ ಗಾಸಿಗೊಳ್ಳದಂತೆ ಅವನ್ನೆಲ್ಲ ನಾವು ದಾಟಬೇಕು. ಹಾಗಲ್ಲದೆ, ದೊಂಬರ ವಿದ್ಯೆಯಂತೆ, ಕೆಲವು ಲಾಗಗಳನ್ನು ಯುಕ್ತಿಗಳನ್ನು ಮಾತ್ರವೇ ಕಲಿಸಿದರೆ ನಾವು ಕಂಡು ಕೇಳಿ ಅರಿಯದ ಪ್ರಸಂಗಗಳಲ್ಲಿ ಹತವೀರ್ಯರಾಗುತ್ತೇವೆ. ಶಿಕ್ಷಣ ನಮ್ಮ ಮೆದುಳಿನಲ್ಲಿ ಅಂಕಿ ಅಂಶಗಳನ್ನು ಕೂರಿ ತುರುಕಬಾರದು. ಜೀವನದ ಬಗ್ಗೆ ಒಂದು ದೃಷ್ಟಿಯನ್ನು, ಒಂದು ಮನೋಧರ್ಮವನ್ನು ನೀಡಬೇಕು.

ಶಿಕ್ಷಣ ಪದ್ಧತಿಗೆ ಆಧಾರವಾಗಿ ಒಂದು ತತ್ವವಿರಬೇಕು. ವ್ಯಕ್ತಿಯ ಉತ್ತಮ ಗುಣಗಳ ವಿಕಾಸವೇ ಅದರ ಗುರಿಯಾಗಿರಬೇಕು. ಆದುದರಿಂದ ಶಿಕ್ಷಣ ಬರೀ ಮಾತಲ್ಲ, ಬಹಳ ದೊಡ್ಡ ಜವಾಬದಾರಿ. ಚೆನ್ನಾಗಿ

ವಿಚಾರ ಮಾಡದೆ, ಸಿದ್ಧತೆ ಮಾಡಿಕೊಳ್ಳದೆ ಶಿಕ್ಷಣವನ್ನು ಪ್ರಾರಂಭಿಸ ಬಾರದು.

ದುರ್ದೈವದಿಂದ, ಬರೀ ಓದುಬರೆಹವನ್ನೆ ವಿದ್ಯೆ ಎನ್ನುವ ಕಾಲ ಬಂದಿದೆ. ಇದಕ್ಕಿಂತ ಬೇರೆ ಆಭಾಸವಿಲ್ಲ. ಸಂಸ್ಕೃತಿಯನ್ನು ಗಳಿಸಲು, ಓದುಬರೆಹವೂ ಒಂದು ಸಾಧನ. ಅದೊಂದೇ ಸಾಧನವೂ ಅಲ್ಲ, ಮುಖ್ಯವಾದ ಸಾಧನವೂ ಅಲ್ಲ.

**ಉದ್ದೇಶ ಪೂರ್ಣ ಶಿಕ್ಷಣ:** ಅನೇಕ ದೇಶಗಳಲ್ಲಿ ಶಿಕ್ಷಣಕ್ಕೊಂದು ಗುರಿ, ಉದ್ದೇಶ ಇದೆ. ಔದ್ಯೋಗಿಕ ದೇಶಗಳಲ್ಲಿ ಉದ್ಯೋಗಪತಿಗಳು ಶಿಕ್ಷಣ ತಮ್ಮ ಉದ್ಯೋಗಗಳಿಗೆ ಕೆಲಸಗಾರರನ್ನು ಒದಗಿಸುವ ಏರ್ಪಾಡು ಎಂದು ತಿಳಿಯುತ್ತಾರೆ. ಸಮಾಜವಾದದ ದೇಶಗಳಲ್ಲಿ ಶಿಕ್ಷಣಕ್ಕೂ ಪದಾರ್ಥಗಳ ಉತ್ಪಾದನೆಗೂ ತಳುಕು. ಸೇನಾಪ್ರಧಾನ ದೇಶಗಳಲ್ಲಿ ಶಿಕ್ಷಣವೆಂದರೆ ಸಂಕುಚಿತ ದೇಶಭಕ್ತಿಯ ಪ್ರೇರಣೆ.

**ಪೂರ್ವ ದೇಶದ ಪದ್ಧತಿ:** ನಮ್ಮ ದೇಶದಲ್ಲಿ ಹಿಂದಿನ ಕಾಲದಲ್ಲಿ ವಿದ್ಯಾಭ್ಯಾಸವೆಂದರೆ ಜೀವನದ ಸಿದ್ಧತೆ. ವಿದ್ಯಾರ್ಥಿ ತನಗೆ ಬೇಕಾದ ಗುರುವನ್ನು ಆರಿಸಿಕೊಂಡು, ಆ ಗುರುವಿನ ಕಣ್ಣೆದಿರಿಗೇ ಅವರ ಆಶೀ ರ್ವಾದ ಪಡೆದು ನಿತ್ಯಜೀವನವನ್ನು ನಡಸುತ್ತಿದ್ದ. ಆಧ್ಯಾತ್ಮ ವಿದ್ಯೆಯೇ ಅಲ್ಲ, ಎಲ್ಲಾ ವಿದ್ಯೆಗಳಲ್ಲಿಯೂ ಹೀಗೇ. ಗುರುವಿಗೆ ಶಿಕ್ಷಣ ಒಂದು ವೃತ್ತಿಯಾಗಿರಲಿಲ್ಲ. ತಂದೆ ಮಕ್ಕಳನ್ನು ನೋಡಿಕೊಳ್ಳುವ ಹಾಗೆ ಶಿಷ್ಯ ರನ್ನು ನೋಡಿಕೊಳ್ಳುತ್ತಿದ್ದ. ಗುರು ತನ್ನ ಜೀವನವನ್ನು ನಡಸುತ್ತಿದ್ದರೆ ಶಿಷ್ಯರು ಆ ಜೀವನದಿಂದ ತಮಗೆ ಅರ್ಥವಾದಷ್ಟು ಜೀವನರಹಸ್ಯವನ್ನು ಅರಿತುಕೊಳ್ಳುತ್ತಿದ್ದರು. ಯೇಸು ತನ್ನ ಶಿಷ್ಯರನ್ನಾರಿಸಿಕೊಂಡು 'ನನ್ನ ಹಿಂದೆ ಬನ್ನಿ' ಎಂದಾಗ ಅವರಿಗೆ ಓದಲು ಒಂದು ಪುಸ್ತಕಗಳ ಪಟ್ಟಿ ಯನ್ನು ಕೊಡಲಿಲ್ಲ. ತಮ್ಮ ಗುರುವಿನ ಹೆಜ್ಜೆಯನ್ನು ಅವರು ಹಿಂಬಾ ಲಿಸಬೇಕು. ಅದು ನಮ್ಮ ಶಿಕ್ಷಣ ಪದ್ಧತಿ.

**ನಿಜವಾದ ಆರ್ಥಿಕ ಮೂಲ್ಯ:** ಪಾಶ್ಚಿಮಾತ್ಯ ವ್ಯಾಪಾರದ ಸಂಪರ್ಕ ದಿಂದ ನಾವು ಬಂಗಾರದ ಪೂಜೆ ಮಾಡತೊಡಗಿದೇವೆ. ನಮ್ಮ ಸಂಸ್ಕೃತಿ–ಸ್ವಧರ್ಮ ಎಲ್ಲಾ ಹಣದ ಅಳತೆಯಲ್ಲಿ ಸೋತಿವೆ. ನಮಗೀಗ ಮಾನವತೆ

ಯೆಲ್ಲ ಬೇಕಾದುದು; ಬಂಗಾರ. ಬ್ರಾಹ್ಮಣ ಸಂಸ್ಕೃತಿಯ ಲಕ್ಷಣಗಳೆಲ್ಲ ನಶಿಸಿ ಪಶ್ಚಿಮದ ವರ್ತಕತನದ ನಾಗರಿಕತೆ ಬಂದಿದೆ. ಅವನ ಸೊತ್ತು ಸಂಪತ್ತಿಗಾಗಿ ಬ್ರಾಹ್ಮಣ ಪೂಜ್ಯನಾಗಿರಲಿಲ್ಲ; ಪ್ರತಿಫಲಾಪೇಕ್ಷೆಯಿಲ್ಲದೆ ಅವನು ಮಾಡುತ್ತಿದ್ದ ಲೋಕಸೇವೆಯಿಂದ. ಪ್ರಥಮ ತತ್ವಗಳನ್ನು ಪ್ರಥಮದಲ್ಲಿ ಎಣಿಸದ ಯಾವ ಶಿಕ್ಷಣ ಪದ್ಧತಿಯೂ ನಮಗೆ ಗಮನಾರ್ಹ ವಲ್ಲ. ಜನತೆಗೆ ಶಿಕ್ಷಣ ಕೊಡುವ ಸರ್ವ ಪ್ರಯತ್ನವೂ ನಿಜವಾದ ಆರ್ಥಿಕ, ಸಾಮಾಜಿಕ, ಸಾಂಪತ್ತಿಕ ಮೂಲ್ಯಗಳನ್ನು ಅರಿಯಲು ಕಲಿಸಬೇಕು.

ಜೀವನದ ವೈವಿಧ್ಯ: ಮನುಷ್ಯ ನಾನಾ ಮುಖದ ಜೀವಿ. ಅವನ ಬಾಳಿಗೆ ಗೆರೆ ಎಳೆದು ತುಂಡುತುಂಡಾಗಿ ಮಾಡಿ ಈ ಭಾಗ ಇಷ್ಟು ಎಂದು ಹೇಳುವಂತಿಲ್ಲ. ಈ ಭಾಗವನ್ನು ಬೆಳೆಸೋಣ ಎನ್ನಲಾಗದು. ಶಾರೀರಿಕ, ನೈತಿಕ, ಆಧ್ಯಾತ್ಮಿಕ ಅಂಶಗಳನ್ನು ಕೈಬಿಟ್ಟು ಬರೀ ಬೌದ್ಧಿಕ ವಿಕಾಸ ವನ್ನೇ ಗಮನಿಸಿದರೆ ವಿಕೃತ ವ್ಯಕ್ತಿಗಳಾಗುತ್ತಾರೆ. ನಿಜವಾದ ಶಿಕ್ಷಣ ನಮ್ಮ ಗುರಿಯಾದರೆ ಇವೆಲ್ಲ ಅಂಶಗಳನ್ನೂ ಏಕಕಾಲದಲ್ಲಿ ಬೆಳೆಸಬೇಕು. ಶಾರೀರಿಕ, ಸಾಮಾಜಿಕ, ಬೌದ್ಧಿಕ, ಆಧ್ಯಾತ್ಮಿಕ–ಎಲ್ಲದರಲ್ಲಿಯೂ ವ್ಯಕ್ತಿ ಬೆಳೆಯಬೇಕು. ಅವನು ಜೀವನೋಪಾಯಕ್ಕಾಗಿ ಒಂದು ವೃತ್ತಿಯನ್ನು ಕಲಿಯಬೇಕು, ಸಮಷ್ಟಿಯಲ್ಲಿ ಸೇರಿ ಬಾಳುವುದನ್ನು ಕಲಿಯಬೇಕು, ಜನರನ್ನು–ಜೀವನವನ್ನು ಅಳೆಯುವ ಶಕ್ತಿಯನ್ನು ಪಡೆಯಬೇಕು. ಇವೆಲ್ಲವನ್ನೂ ಸಾಧಿಸಲು ಪ್ರಯತ್ನಿಸದಿದ್ದರೆ ಅದು ಶಿಕ್ಷಣವೇ ಅಲ್ಲ.

ನಾವು ಮಾಡಿದ ಪ್ರತಿಯೊಂದು ಕರ್ಮವೂ ನಮ್ಮ ಮೇಲೆ ಒಂದು ಗುರುತು ಮಾಡಿ ತೀರುತ್ತದೆ. ಅದನ್ನು ಅಳಿಸಲು ಸಾಧ್ಯವಿಲ್ಲ. ನಮ್ಮ ಕೆಲಸ, ಆಟ, ವಿನೋದ, ವಿಶ್ರಾಂತಿ ಎಲ್ಲವನ್ನೂ ಎಚ್ಚರಿಕೆಯಿಂದ ಯೋಜನೆಮಾಡಬೇಕು. ಆಗ ಇದರ ಸಾಮಾಜಿಕ ಪ್ರತಿಕ್ರಿಯೆ ಆರೋಗ್ಯ ವಂತವಾಗಿದ್ದೀತು. ಕರ್ಮಶಿಕ್ಷಣವೇ ಮನುಷ್ಯ ಜೀವನದ ಬಹುಭಾಗಕ್ಕೆ ಹೊಂದಿದುದು. ನಮ್ಮ ಕಾಲವೆಲ್ಲ ಹೆಚ್ಚಾಗಿ ಅರ್ಥಿಕ ವ್ಯಾಪಾರದಲ್ಲಿಯೆ ಕಳೆಯುತ್ತದೆ. ಆದುದರಿಂದ ಉತ್ಪಾದನೆ ಮಾಡುವ ಕ್ರಮದಲ್ಲಿಯೆ ನಮ್ಮ ಗುಣ–ಕೌಶಲ ವೃದ್ಧಿಯಾಗುವಂತೆ, ನಮ್ಮ ಜೀವನ ತುಂಬಿಬರುವಂತೆ ಯೋಜನೆ ಮಾಡಿದರೆ ಅಷ್ಟುಮಟ್ಟಿಗೆ ರಾಷ್ಟ್ರವೂ ಅಭಿವೃದ್ಧಿಗೊಳ್ಳುತ್ತದೆ.

ಯೋಗ್ಯವಾದ ಕೆಲಸ ರಾಷ್ಟ್ರ ಕ್ಷಯಕಾರಿಯಲ್ಲ, ನಿರ್ಮಾಣಕಾರಿ. ನಾವು ಮಾಡುವ ಕೆಲಸ ನಮ್ಮ ಜೀವನದ ಆದರ್ಶವನ್ನು ಆಚರಣೆಗೆ ತರಲು ಸಹಾಯಕವಾಗಿರಬೇಕು. ಬರೀ ಗಂಟೆ–ಜಾಗಟೆ, ಧೂಪದೀಪ, ಆರತಿಗಳಲ್ಲಿ ಪರ್ಯವಸಾನವಾಗುವ ಧರ್ಮ ಟೊಳ್ಳು. ನಮ್ಮ ಜೀವನದ ಪ್ರತಿಯೊಂದು ಕರ್ಮವನ್ನೂ, ಪ್ರತಿಯೊಂದು ಗಳಿಗೆಯನ್ನೂ ಆವರಿಸದಿದ್ದರೆ ಧರ್ಮ ಬರೀ ಬರಡು. ವ್ಯಕ್ತಿಯನ್ನೂ ಜನಾಂಗವನ್ನೂ ಬೆಳೆಸುವುದರಲ್ಲಿ ಕೆಲಸ ಎಷ್ಟು ಮುಖ್ಯ ಸಾಧನವೋ ಕೆಲಸ ಎಂಬ ಪ್ರಕರಣದಲ್ಲಿ ಓದಿದೇವೆ. ವ್ಯಕ್ತಿ ವಿಕಾಸದಲ್ಲಿ ಕೆಲಸ ಅಂಥ ಪ್ರಬಲ ಶಕ್ತಿಯಾದರೆ, ಮಗುವಿನ ಬೆಳವಣಿಗೆಗೆ ನಾವು ಅದನ್ನು ಉಪಯೋಗಿಸಬೇಡವೆ?

ನಮ್ಮ ಪ್ರಯತ್ನಗಳೆಲ್ಲ ಹಳ್ಳಿಗಳಲ್ಲಿ ನಡೆಯಬೇಕು. ವಿಶ್ವವಿದ್ಯಾನಿಲಯದ ಶಿಕ್ಷಣವನ್ನು ನಾಲ್ಕು ವರ್ಷ ಕೈಬಿಟ್ಟರೂ ರಾಷ್ಟ್ರಕ್ಕೇನೂ ನಷ್ಟವಾಗದು. ಈಗಲೇ ನಮಗೆ ತಲೆ ಭಾರವಾಗಿದೆ. ಬೇಕಾದುದಕ್ಕಿಂತ ಹೆಚ್ಚು ಜನ ಪದವೀಧರರಿದ್ದಾರೆ. ಇವರು ಪಡೆದ ಶಿಕ್ಷಣ ನಮಗೆ ಅಗತ್ಯವಾದುದಲ್ಲ. ಆದುದರಿಂದ ಇವರು ನಿರುದ್ಯೋಗಿಗಳಾಗಿ ಕುಳಿತಿದ್ದಾರೆ. ಇಲ್ಲದಿದ್ದರೆ ಇವರಿಗೆ ಮಾಡಲು ಕೆಲಸ ಸಿಗುತ್ತಿರಲಿಲ್ಲವೆ? ನಮ್ಮ ಹಳ್ಳಿಗಳು ಹೆಚ್ಚು ಸಮರ್ಥವೂ ಪ್ರಯೋಜನಕರವೂ ಆಗುವಂತೆ ಮಾಡಬೇಕಾಗಿದೆ. ಸುಮ್ಮನೆ ಹಾಳುಮೂಳು ಸುದ್ದಿಗಳನ್ನೆಲ್ಲ ಅಲ್ಲಿ ತುರುಕಬೇಕಾಗಿಲ್ಲ. ಆಕಾಶವಾಣಿ, ಚಲಚ್ಚಿತ್ರಗಳಿಂದ ಸ್ವಲ್ಪ ಸಹಾಯವಾದೀತೋ ಏನೋ, ಆದರೆ ಶಿಕ್ಷಣದ ಪ್ರಧಾನ ಸಾಧನಗಳಲ್ಲ ಅವು. ಅವಕ್ಕಾಗಿ ನಾವು ವೆಚ್ಚಮಾಡುವ ಹಣ ಬಹಳ ಹೆಚ್ಚು. ಬಹಳ ತಾರತಮ್ಯವಿದೆ. ಹಳ್ಳಿಯೊಳಗಿರುವುದನ್ನೇ ವೃದ್ಧಿಗೊಳಿಸಬೇಕು. ಎಲ್ಲಿಂದಲೋ ತಂದು ಅದರ ಮೇಲೆ ಹೇರಿದರೆ ಆಗದು. ಹೊರಗಿನಿಂದ ತಂದುದನ್ನು ಕೃತಕ ಸಾಧನಗಳಿಂದ ಬೆಳೆಸಬೇಕಾಗುತ್ತದೆ. ಆದರೆ ಒಳಗಿನಿಂದ ಬೆಳೆದು ಬಂದುದು ನಿಜವಾದ ಸಂಸ್ಕೃತಿಯನ್ನು ವಿಕಾಸಗೊಳಿಸಿ, ಮನುಷ್ಯ–ಮನುಷ್ಯನನ್ನು, ಹಳ್ಳಿ ಹಳ್ಳಿಯನ್ನು, ಕಡೆಗೆ ಇಡೀ ದೇಶವನ್ನೂ ಒಂದಾಗಿ ಒಗ್ಗಟ್ಟಾಗಿ ಕಟ್ಟುತ್ತದೆ.

ಇದಕ್ಕಾಗಿ ಎಂಥ ವ್ಯವಸ್ಥೆ ಇರಬೇಕು ಎಂಬುದು ಬಹಳ ಮುಖ್ಯವಲ್ಲ. ಸಂಸ್ಥೆಗಳು ಎಷ್ಟೇ ಮುಖ್ಯವಾದರೂ ಅವಕ್ಕೇ ಜೋತುಬಿದ್ದರೆ, ವ್ಯಕ್ತಿ ಪ್ರಭಾವವನ್ನು ಕಳೆದುಕೊಳ್ಳುತ್ತೇವೆ. ಕಡೆಗೆ ಸಂಸ್ಥೆ ಕಲ್ಲಾಗುತ್ತದೆ, ಅಪಾರ ಧನವನ್ನು ನುಂಗುತ್ತದೆ. ಉಳಿದ ಕಡೆ ಮಾಡಿದಂತೆ ಶಿಕ್ಷಣದಲ್ಲಿಯೂ ಕೇಂದ್ರೀಕರಣಮಾಡಿದರೆ, ದೂರದಲ್ಲಿರುವವರು ಯಾರೋ ಯಾಜಮಾನ್ಯ ಮಾಡುವಂತಾಗುತ್ತದೆ. ಅದರಿಂದ ಏನೋ ಕೃತ್ರಿಮತೆ, ಕಾಠಿನ್ಯ ತಲೆದೋರಿ ಶಿಕ್ಷಣಕ್ಕೇ ಸಂಚಕಾರವಾಗುತ್ತದೆ. ಹಳ್ಳಿಯ ಶಿಕ್ಷಕ ತನ್ನ ನೆರೆಹೊರೆಯವರ ಕಣ್ಣೆದಿರಿನಲ್ಲಿಯೆ ಕೆಲಸ ಮಾಡುವುದು ಒಳಿತು. ಆದುದರಿಂದ ಆಯಾ ಹಳ್ಳಿಯೇ ತನ್ನ ಶಿಕ್ಷಣದ ವೆಚ್ಚವನ್ನು ವಹಿಸುವುದು ಸರಿ. ಹಳ್ಳಿಯು ವಿದ್ಯಾಮಂದಿರಕ್ಕೆ ಹೊಲವನ್ನು ಬಿಟ್ಟುಕೊಡಲಿ. ಈ ಪದ್ಧತಿಗೆ ಕೇಂದ್ರದ ಮೇಲ್ವಿಚಾರಣೆಯೂ ಸಲಹೆಯೂ ದೊರೆತರೆ ನಮ್ಮ ದೇಶಕ್ಕೆ ಒಳ್ಳೆಯ ಮಾದರಿಯಾಗಬಹುದು. ಸ್ಥಳದವರ ಅಭಿಪ್ರಾಯಕ್ಕೆ ಅಧೀನ ಅದರ ವ್ಯವಸ್ಥೆ. ಈಗಿರುವ ಹಾಗೆ ವರ್ಷಕ್ಕೊಂದು ಸಲ ವಿದ್ಯಾಧಿಕಾರಿಯ ಪರೀಕ್ಷೆಗೆ ಸಿದ್ಧವಾಗಿದ್ದರಾಯಿತು ಶಿಕ್ಷಕ. ಅದು ಮುಗಿದ ಮೇಲೆ ಯಾವ ಚಿಂತೆಯೂ ಇಲ್ಲ. ಇದರಿಂದ ಪ್ರಗತಿಯಾಗದು, ಕ್ರಮವಾದ ಕೆಲಸವೂ ಆಗದು. ಪ್ರತಿಯೊಂದು ಪಾಠಶಾಲೆಯೂ ಸಂಸ್ಕೃತಿ ಕೇಂದ್ರವಾಗಬೇಕು. ಹೊರಗಣ ಪ್ರಪಂಚಕ್ಕೂ ಹಳ್ಳಿಗೂ ಮಧ್ಯಬಿಂದುವಾಗಬೇಕು. ಇದರಲ್ಲಿ ಒಂದು ಬಾಧಕವಿದೆ: ತನ್ನ ಸಾಮಾಜಿಕ ಕರ್ತವ್ಯವನ್ನೇ ಮುಖ್ಯವಾಗಿ ಮಾಡಿಕೊಂಡು ಶಿಕ್ಷಕ ಮಕ್ಕಳ ಪ್ರಗತಿಯನ್ನು ಅಸಡ್ಡೆಮಾಡಬಹುದು. ಸಾಮಾಜಿಕ ಅಂಶ ಪಾಠಶಾಲೆಯ ಮುಖ್ಯ ಫಲವಲ್ಲ, ಪ್ರಾಸಂಗಿಕ ಫಲ. ಮಾನವ ಸ್ವಭಾವವನ್ನು ನಂಬಿ ಆತ್ಮ ವಿಶ್ವಾಸದಿಂದ ಆದರ್ಶದ ಧ್ರುವತಾರೆಯನ್ನು ಲಕ್ಷ್ಯವಾಗಿಟ್ಟು ನಡೆಯೋಣ. ಚಿಲ್ಲರೆ ಅಂಶಗಳಲ್ಲಿ ಭಿನ್ನಾಭಿಪ್ರಾಯ ಹಲವಿರಬಹುದು. ಈ ವೈವಿಧ್ಯ ಕಂಡರೂ ನಿಜವಾದ ಸಂಸ್ಕೃತಿಯನ್ನು ಬೆಳೆಸಿ, ಪ್ರಾಮಾಣಿಕವಾದ ಮೂಲ್ಯಗಳನ್ನು ನಿರ್ಮಿಸಿ, ಭದ್ರವಾದ ಏಕತೆಯನ್ನು ಪಡೆಯಬಹುದು.

**ಒಂದು ಯೋಜನೆ:** ನಿಜವಾದ ಶಿಕ್ಷಣ ಹೇಗಿರಬೇಕು ಎಂದು ಈಚೆಗೆ ಬಹಳ ಚರ್ಚೆ ನಡೆದಿದೆ. ಶಿಕ್ಷಣ ಸ್ವಾವಲಂಬಿಯಾಗಿರಬೇಕೆಂದು ಗಾಂಧೀಜಿ ಹೇಳುತ್ತಾರೆ. 'ಶಿಕ್ಷಣವೆಂದರೆ ಮಗುವಿನಲ್ಲಿ ಮನುಷ್ಯನಲ್ಲಿ –ದೇಹ ಮನಸ್ಸು ಆತ್ಮಗಳಲ್ಲಿ–ಇರುವ ಉತ್ತಮೋತ್ತಮ ಶಕ್ತಿಗಳನ್ನು ಸಮಗ್ರವಾಗಿ ವಿಕಸನಗೊಳಿಸುವುದು. ಅಕ್ಷರ ಪರಿಚಯ ಶಿಕ್ಷಣದ ಅಂತವೂ ಅಲ್ಲ, ಆದಿಯೂ ಅಲ್ಲ ಗಂಡಸು ಹೆಂಗಸು ಶಿಕ್ಷಣಪಡೆಯಲು ಅಕ್ಷರ ಜ್ಞಾನವೂ ಒಂದು ಸಾಧನ. ಬರೀ ಅಕ್ಷರಜ್ಞಾನವೇ ವಿದ್ಯೆಯಲ್ಲ. ಆದುದರಿಂದ, ಶಿಕ್ಷಣಕ್ಕೆ ಮೊದಲಿಟ್ಟ ಗಳಿಗೆಯಿಂದಲೂ ಏನಾದರೂ ಉತ್ಪತ್ತಿ ಮಾಡುವಂತೆ ಮಗುವಿಗೆ ಒಂದು ಕೈಗಾರಿಕೆಯನ್ನು ಕಲಿಸುವುದೇ ಶಿಕ್ಷಣದ ನಾಂದಿ ಎನ್ನುತ್ತೇನೆ. ಪ್ರತಿಯೊಂದು ಪಾಠಶಾಲೆಯೂ ಸ್ವಾವಲಂಬಿಯಾಗಬೇಕು. ಅಲ್ಲಿ ಉತ್ಪತ್ತಿಯಾದುದನ್ನು ಸರಕಾರ ತೆಗೆದುಕೊಳ್ಳಬೇಕು.

'ಇಂಥ ಶಿಕ್ಷಣ ಪದ್ಧತಿಯಲ್ಲಿ ಮನಸ್ಸು–ಆತ್ಮಗಳ ಅತ್ಯುತ್ತಮ ವಿಕಾಸ ಸಾಧ್ಯವೆಂದು ನನ್ನ ಮತ. ಆದರೆ ಈಗ ಕಲಿಸುವಂತೆ ಯಾಂತ್ರಿಕವಾಗಿ ಕೈಗಾರಿಕೆಯನ್ನು ಕಲಿಸಬಾರದು. ಶಾಸ್ತ್ರೀಯವಾಗಿ ಕಲಿಸಬೇಕು. ಪ್ರತಿಯೊಂದು ಕ್ರಮದ ಬಗ್ಗೆಯೂ ಮಗುವಿಗೆ ಇದೇಕೆ, ಇದೆಲ್ಲಿಯದು ಎಂಬ ವಿವರಗಳು ತಿಳಿಯಬೇಕು. ಆತ್ಮವಿಶ್ವಾಸವಿಲ್ಲದೆ ನಾನಿದನ್ನು ಬರೆಯುತ್ತಿಲ್ಲ. ನನಗೆ ಅನುಭವವಿದೆ. ಕೆಲಸಗಾರರಿಗೆ ನೂಲುವ ಶಿಕ್ಷಣ ಕೊಡುವಲ್ಲೆಲ್ಲ ಈ ಪದ್ಧತಿಯನ್ನೇ ಅನುಸರಿಸುತ್ತಿದಾರೆ. ಈ ಪ್ರಕಾರ ನಾನೇ ಮೆಟ್ಟು ಹೊಲೆಯುವುದನ್ನೂ ನೂಲುವುದನ್ನೂ ಕಲಿಸಿದೇನೆ. ಒಳ್ಳೆಯ ಫಲ ಬಂದಿದೆ. ಇದರಲ್ಲಿ ಇತಿಹಾಸ ಭೂಗೋಳಗಳ ಜ್ಞಾನವಿಲ್ಲದಿಲ್ಲ. ಆದರೆ ಬಾಯಿಮಾತಿನ ಮೂಲಕ ಆ ಜ್ಞಾನವನ್ನು ಹೇಳುವುದೇ ಉತ್ತಮ ಮಾರ್ಗವೆಂದು ನನಗೆ ಕಂಡುಬಂದಿದೆ. ಓದು ಬರೆಹದ ಮೂಲಕ ಕಲಿಸುವುದಕ್ಕಿಂತ ಹತ್ತರಷ್ಟು ಹೆಚ್ಚಾಗಿ ಕಲಿಸಬಹುದು ಈ ರೀತಿಯಲ್ಲಿ. ಅಕ್ಷರಗಳನ್ನು ಆಮೇಲೆ ಕಲಿಸಬಹುದು, ಮಗುವಿನ ಅಭಿರುಚಿ ಬೆಳೆದ ಮೇಲೆ. ಈ ಸೂಚನೆ ಕ್ರಾಂತಿಕಾರಿ. ಆದರೆ ಇದರಿಂದ ಅಪಾರ ಶ್ರಮಲಾಭವಾಗುತ್ತದೆ. ಹೆಚ್ಚು ಕಾಲದಲ್ಲಿ ಈಗ ಕಲಿಯುವು

ದನ್ನು ಹುಡುಗ ಒಂದೇ ವರ್ಷದಲ್ಲಿ ಕಲಿಯುತ್ತಾನೆ. ಇದರಿಂದ ಸರ್ವತ್ರ ಲಾಭ. ಕೈಗಾರಿಕೆ ಕಲಿಯುವಾಗಲೇ ಹುಡುಗ ಗಣಿತವನ್ನೂ ಕಲಿಯುತ್ತಾನೆ.

'ನನ್ನ ಮಟ್ಟಿಗೆ ಪ್ರಾಥಮಿಕ ಶಿಕ್ಷಣ ಬಹಳ ಮುಖ್ಯ. ಇಂಗ್ಲೀಷೊಂದನ್ನು ಬಿಟ್ಟರೆ ಇದು ಹೈಸ್ಕೂಲಿಗೆ ಸಮನಾಗಬೇಕು. ನಮ್ಮ ದೇಶದ ಪದವೀಧರರೆಲ್ಲ ಒಮ್ಮೆಲೇ ತಾವು ಓದಿದುದನ್ನೆಲ್ಲಾ ಮರೆತರೆ ಹಲವು ಲಕ್ಷಜನರ ಆ ಆಕಸ್ಮಿಕ ವಿಸ್ಮೃತಿಯಿಂದ ಆಗುವ ಪರಿಣಾಮಕ್ಕಿಂತ ನಮ್ಮ ಮೂವತ್ತು ಕೋಟಿ ಜನರನ್ನು ಕವಿದಿರುವ ಅಜ್ಞಾನಾಂಧಕಾರದ ಪರಿಣಾಮ ಘೋರತರವಾದುದು. ನಮ್ಮ ಕೋಟ್ಯಾಂತರ ಗ್ರಾಮಸ್ಥರ ಅಜ್ಞಾನಕ್ಕೆ ಅವರ ಅನಕ್ಷರತೆಯೊಂದು ಅಳತೆಯೆ ಅಲ್ಲ.'

ಮಕ್ಕಳ ಶಿಕ್ಷಣ ಮೊದಮೊದಲ ಹಂತಗಳಲ್ಲಿ ಸ್ವಾವಲಂಬಿಯಾಗುವುದು ಸಾಧ್ಯವೇ ಇಲ್ಲ. ಅವರು ಮಾಡಿದ ಪದಾರ್ಥಕ್ಕೆ ಬೆಲೆ ಬಾರದು. ಅವನ್ನು ಸರಕಾರವೆ ತೆಗೆದುಕೊಂಡರೂ ಸುಮ್ಮನೆ ನಷ್ಟವನ್ನು ತುಂಬಿಕೊಟ್ಟಂತೆ. ಶಿಕ್ಷಣ ಸ್ವಾವಲಂಬಿಯಾಗಿದೆ ಎಂದು ನಾವು ಆತ್ಮವಂಚನೆ ಮಾಡಿಕೊಳ್ಳಲು ಒಂದು ಅವಕಾಶ. ಸ್ವಾವಲಂಬನವೆಂದರೆ ಮಗು ಆಯಾ ವರ್ಷ ಮಾಡಿದ ಪದಾರ್ಥಗಳಿಂದ ಆಯಾ ವರ್ಷದ ವೆಚ್ಚ ಬರಬೇಕು ಎಂದು ಗಾಂಧೀಜಿ ಹೇಳಲಿಲ್ಲ. ಇದು ಬಹಳ ಸಂಕುಚಿತ ಹಣದ ದೃಷ್ಟಿ. ಸಾರ್ಥಕವಾಗಲಾರದು. ಸ್ವಾವಲಂಬನ ಅರ್ಥ ವಿಶಾಲವಾಗಿದೆ. ಪಾಠಶಾಲೆಯಲ್ಲಿ ಮಗು ಮಾಡಿದ ಪದಾರ್ಥಗಳ ಬೆಲೆಯೊಂದೇ ಅಲ್ಲ, ಮುಂದೆ ಸುಶಿಕ್ಷಿತ ಪೌರನಾದಾಗ ಅವನು ಮಾಡುವ ಸೇವೆಯೂ ಗಣನೀಯವೇ. ಈಗ ಹಳ್ಳಿಗಳಲ್ಲಿ ಮಗುವಿಗೆ ಸಿಗುವ ಅಕ್ಷರ ಶಿಕ್ಷಣವೂ ಅತ್ಯಲ್ಪ. ಕೆಲವು ವರ್ಷಗಳಾದ ಮೇಲೆ ಮತ್ತು ಅನಕ್ಷರಸ್ಥ ವಾಗುತ್ತದೆ. ಅದಕ್ಕೆ ವಿದ್ಯೆ ಕಲಿಸಲು ಕಳೆದ ಕಾಲ ಕೊಟ್ಟ ಹಣ ಎಲ್ಲವೂ ವ್ಯರ್ಥವಾಗುತ್ತದೆ. ಆ ಕಾಲ-ಹಣಗಳನ್ನು ಸರಿಯಾಗಿ ವಿನಿಯೋಗಿಸಿದ್ದರೆ, ಆಯಾ ತರಗತಿಯಲ್ಲಿ ಉತ್ಪತ್ತಿ ಮಾಡಿದ ಪದಾರ್ಥ ಆ ತರಗತಿಯ ವೆಚ್ಚಕ್ಕೆ ಸಾಲದಿದ್ದರೂ, ಒಟ್ಟು ಏಳು ವರ್ಷಗಳಲ್ಲಿ ಇಡೀ ತರಗತಿಗಳ ಉತ್ಪತ್ತಿ ಶಿಕ್ಷಕರ ವೆಚ್ಚಕ್ಕೆ ಸಾಕಾಗುತ್ತದೆ. ಮೊದಲ ಮೂರು ವರ್ಷ

ಬರೀ ನಷ್ಟ, ಆಮೇಲೆ ಮೂರು ವರ್ಷ ಅಲ್ಲಿಗಲ್ಲಿಗೆ; ಮಗುವಿಗೆ ಸರಿಯಾದ ತರಬೇತು ದೊರೆತರೆ ಕಡೆಯ ಎರಡು ವರ್ಷಗಳಲ್ಲಿ ಲಾಭಬಂದು ಮೊದಲಿನ ಎರಡು ವರ್ಷಗಳ ನಷ್ಟವನ್ನು ಸರಿದೂಗಿಸುತ್ತದೆ. ಇದಕ್ಕಿಂತ ಹೆಚ್ಚಾಗಿ, ಒಬ್ಬ ಒಳ್ಳೆಯ ಪೌರ ತರಬೇತಾದ ಎಂದರೆ ನಿರ್ಮಾಣ ಕಾರ್ಯಗಳಿಗಾಗಿ ಸರಕಾರ ಮಾಡುವ ಎಲ್ಲ ವೆಚ್ಚಗಳಿಗಿಂತ ಲಾಭಕರವಾಗುತ್ತದೆ. ಸ್ಥಳ ದಲ್ಲಿಯೇ ಗಿರಾಕಿಯಿರುವ ಕೈಗಾರಿಕೆಗಳನ್ನು–ಉದಾ: ನೂಲುವುದು, ಬಣ್ಣಹಾಕುವುದು, ನೇಯುವುದು, ಚಾಪೆ ಬುಟ್ಟಿ ಹೆಣೆಯುವುದು, ಗಡಿಗೆ ಮಾಡುವುದು, ಮೆಟ್ಟು ಹೊಲಿಯುವುದು, ಮರಗೆಲಸ, ಹಿತ್ತಾಳೆ ತಾಮ್ರದ ಕೆಲಸ, ಕಾಗದ ಮಾಡುವುದು, ಬೆಲ್ಲ ಮಾಡುವುದು, ಎಣ್ಣೆ ಗಾಣವಾಡುವುದು, ಜೇನು ಸಾಕಣೆ ಮುಂತಾದುವನ್ನು–ಕಲಿಸಿದರೆ ಉತ್ಪನ್ನವಾದ ಪದಾರ್ಥಗಳನ್ನು ಮಾರುವ ಸಮಸ್ಯೆಯೂ ಹೆಚ್ಚಾಗಿ ಇರದು. ಒಬ್ಬ ಉದ್ಯೋಗಿಯ ಬಳಿ ಕೆಲಸ ಕಲಿಯುವ ಶಿಷ್ಯ ಪ್ರಾರಂಭ ದಲ್ಲಿ ಏನೂ ಗಳಿಸುವುದಿಲ್ಲ. ಕೆಲವು ದಿನ ಬರಿದೇ. ಸ್ವಲ್ಪ ಕಾಲದ ಮೇಲೆ ಕೊಂಚ ಉತ್ಪತ್ತಿಮಾಡುತ್ತಾನೆ. ಆಮೇಲೆ ಸಂಪಾದನೆ. ಈ ಪ್ರಾರಂಭದ ಶಿಕ್ಷಣಕ್ಕಾಗಿ ಸರಕಾರ ಹಣವನ್ನು ಒದಗಿಸಬೇಕು. ಅಥವಾ ಜನರೇ ಅದಕ್ಕಾಗಿ ಹೊಲವನ್ನೋ ತೋಟವನ್ನೋ ಬಿಟ್ಟುಕೊಡಬೇಕು. ಬ್ರಿಟಿ ಷರು ಬಂದು ಹೊಸ ಬಗೆಯ ತೆರಿಗೆಗಳನ್ನು ಹಾಕಿ ನಮ್ಮ ಪಾಠಶಾಲೆ ಗಳನ್ನು ಮುರಿಯುವವರೆಗೆ ನಮ್ಮಲ್ಲಿ ಹೀಗೇ ನಡೆದಿತ್ತು. ಏನೇ ಇರಲಿ, ಮಕ್ಕಳ ಶಿಕ್ಷಣ ಸರಕಾರದ ಹೊಣೆ. ನಮ್ಮನ್ನು ಈಗ ಕಾಡುತ್ತಿರುವ ಸಮಸ್ಯೆ ಸಹಜವಾದುದಲ್ಲ, ರಾಜಕೀಯದಿಂದ ಹುಟ್ಟಿ ಬಂದ ಹಣದ ಸಮಸ್ಯೆ. ಅದನ್ನು ರಾಜಕೀಯವಾಗಿಯೇ ತಿದ್ದಬೇಕು. ಅನಿವಾರ್ಯವೆಂದು ಕೈಕಟ್ಟಿ ಕೂತರಾಗದು. ಶಿಕ್ಷಕನಿಗೆ ಪೂರ್ಣ ತರಬೇತು ಆಗಿರಬೇಕು. ಅವನಿಗೆ ಕನಿಷ್ಠ ರೂ. ೨೫ ನ್ನಾದರೂ ಕೊಡಬೇಕು. ಪಾಠಶಾಲೆಯ ವೇಳೆ, ಅಧ್ಯಯನಕಾಲ ಹಳ್ಳಿಯ ಋತುಮಾನದಂತೆ. ಸುಗ್ಗಿಯಲ್ಲಿ, ಆರಂಬ ಹೆಚ್ಚಾಗಿರುವ ದಿನಗಳಲ್ಲಿ ತರಗತಿಗಳಿರಬೇಕಾಗಿಲ್ಲ.

**ಯೋಜನೆಯ ಸಾಮಾನ್ಯ ರೂಪ-ರೇಖೆ:** ವರ್ಧಾಯೋಜನೆ ಅಥವಾ ಮೂಲಶಿಕ್ಷಣ ಎನಿಸಿಕೊಂಡ ಈ ಪದ್ಧತಿ ಎಂಟುವರ್ಷದ ಒತ್ತಾಯದ

ಪ್ರಾಥಮಿಕ ಶಿಕ್ಷಣವನ್ನು ೭ ರಿಂದ ೧೪ ವರ್ಷಗಳ ವರೆಗೆ ಎಲ್ಲಾ ಹುಡುಗ ಹುಡುಗಿಯರಿಗೂ ಕೊಡಲೇಬೇಕೆಂದು ವಿಧಿಸುತ್ತದೆ. ಶಿಕ್ಷಣ ಮಾಧ್ಯಮ ನೂಲುವಿಕೆಯಂಥ ಒಂದು ಕೈಗಾರಿಕೆ. ಅದರ ಸುತ್ತ ಉಳಿದ ವಿಷಯ ಗಳೆಲ್ಲವೂ ಬರುತ್ತವೆ. ಮಗುವಿನ ನಿತ್ಯಜೀವನ, ಕೈಗಾರಿಕೆಯ ಸಮನ್ವಯ, ಪ್ರಾಕೃತಿಕ–ಸಾಮಾಜಿಕ ವಾತಾವರಣ–ಎಲ್ಲವೂ ಸಮಗ್ರ ಜ್ಞಾನದ ಸಮನ್ವಯಕ್ಕೆ, ಸಮವಾಯಕ್ಕೆ ಬಿಂದುಗಳು. ಈಗಿನ ಗುರಿ ಇಂಗ್ಲೀಷಿಲ್ಲದ ಮೆಟ್ರಿಕುಲೇಷನ್ ಮಟ್ಟ. ಮಗುವಿಗೆ ರೇಖಾಚಿತ್ರಣ ಬರುವವರೆಗೆ ಬರೆವಣಿಗೆಯನ್ನು ಕಲಿಸುವುದಿಲ್ಲ. ಓದುವುದನ್ನೇನೋ ಮೊದಲೇ ಕಲಿಸುತ್ತಾರೆ. ೧೨ ವರ್ಷವಾದ ಮೇಲೆ ಮಗು ತನಗೆ ಬೇಕಾದ ಒಂದು ಕೈಗಾರಿಕೆಯನ್ನು ವೃತ್ತಿಯಾಗಿ ಆರಿಸಿಕೊಳ್ಳಬಹುದು. ೧೪ ವರ್ಷಕ್ಕೆಲ್ಲಾ ಕುಶಲರಾದ ಕೆಲಸಗಾರರನ್ನು ಅಣಿಮಾಡುವ ಗುರಿಯಲ್ಲ; ಯಾವುದಾದರೂ ವೃತ್ತಿಯನ್ನು ಹಿಡಿದರೆ ಅದನ್ನು ಸರಿಯಾಗಿ ನಿರ್ವಹಿಸು ವಷ್ಟು ಸಿದ್ಧತೆಯಿರಬೇಕು ಎಂಬುದು ಉದ್ದೇಶ.

ಈ ವಿಧಾನದ ಮುಖ್ಯ ಸಿದ್ಧಾಂತ ವೃತ್ತಿಶಿಕ್ಷಣದಲ್ಲಿಯೇ, ಅದರ ಮೂಲಕವೇ, ಬುದ್ಧಿಯ ವಿಕಾಸವೂ ಆಗಬೇಕು ಎಂಬುದು. ಈಗಿನ ಪದ್ಧತಿ ಬೌದ್ಧಿಕ ಶಿಕ್ಷಣಕ್ಕೆ ಮಹತ್ವವನ್ನು ಕೊಟ್ಟು ವೃತ್ತಿಶಿಕ್ಷಣವನ್ನು ಅದಕ್ಕೆ ಜೋಡಿಸುತ್ತದೆ. ಹೀಗೆ ಬೌದ್ಧಿಕ ಶಿಕ್ಷಣಕ್ಕೆ ಪ್ರಥಮ ಸ್ಥಾನ ಕೊಟ್ಟಾಗ ಮಗುವಿನ ಕೈಕಾಲು ಕಟ್ಟಿಹಾಕಿದಂತಾಗಿ ಅದು ಅವ್ಯವಹಾರಿ ಯಾಗುತ್ತದೆ. ಚಿಕ್ಕಂದಿನಲ್ಲಿ ಕಳೆದುಕೊಂಡ ಕೈಕಾಲು ಮುಂದೆ ಎಷ್ಟೇ ಸಾಹಸಪಟ್ಟರೂ ಬಾರದು. ಅನುಭವದ ಆಧಾರವಿಲ್ಲದ ಬರೀ ಕಲಿವು ಗಿಳಿಪಾಠವಾಗುತ್ತದೆ. ಜ್ಞಾಪಕ ಶಕ್ತಿಯ ವೃದ್ಧಿಯ ತರಬೇಕು ಆಗುತ್ತದೆ. ಅದರಿಂದ ವ್ಯಕ್ತಿತ್ವವಾಗಲಿ ಸ್ಫೂರ್ತಿ–(Initiative) ಅಭಿಕ್ರಮ ಶಕ್ತಿ ಯಾಗಲಿ ಬೆಳೆಯದು.

**ಪರೀಕ್ಷೆಗಳು:** ಈ ಪದ್ಧತಿಯಲ್ಲಿ ಪರೀಕ್ಷೆಯ ಪ್ರಯಾಸ ವಿದ್ಯಾರ್ಥಿ ಗಳಿಗಲ್ಲ, ಶಿಕ್ಷಕರಿಗೇ. ೨೪ ಗಂಟೆಯೂ ವಿದ್ಯಾರ್ಥಿಯ ಜೀವನ ಗುರು ಗಳ ಮೇಲ್ವಿಚಾರಣೆಯಲ್ಲಿಯೆ ಇರುವುದರಿಂದ, ಮಕ್ಕಳ ಗೃಹಜೀವನಕ್ಕೂ

ಗ್ರಾಮಜೀವನಕ್ಕೂ ಶಿಕ್ಷಕನಿಗೂ ನಿಕಟ ಸಂಬಂಧ ಬೆಳೆಯುತ್ತದೆ. ಮನೆಯಲ್ಲಿ, ಹಳ್ಳಿಯಲ್ಲಿ ಶಿಕ್ಷಕನ ಕೆಲಸದ ಪ್ರತಿಬಿಂಬ ಕಾಣಬರುತ್ತದೆ.

**ಹೆಂಗಸರ ಪಾಲು :** ಮಗುವಿನ ಸಹಜವಾದ ದೈಹಿಕ ವಿಕಾಸವನ್ನು ನಾವು ಅನುಸರಿಸಬೇಕು. ಬುದ್ಧಿ, ನೀತಿ, ಆತ್ಮ–ಎಲ್ಲದರಲ್ಲೂ ನಾವು ಅದನ್ನು ಅನುಸರಿಸಬೇಕು. ಮೊದಲು ಮಗು ಆಕಾರ, ಬಣ್ಣ, ಚಲನ ವಲನಗಳಲ್ಲಿ ಆಸಕ್ತಿಗೊಳ್ಳುತ್ತದೆ. ಆಮೇಲೆ ಹೀಗೇಕೆ ಇವೆ, ಇವು ಏನು ಎಂದು ಕುತೂಹಲ ಪಡುತ್ತದೆ. ತರುವಾಯ ತಾನು ಬಯಸಿದ ರೀತಿಯಲ್ಲಿ ಏಕಿರಬಾರದು ಇವೆಲ್ಲ ಎಂದು ಯೋಚಿಸಿ ಹಾಗೆ ಪ್ರಯೋಗಮಾಡುತ್ತದೆ. ಹೀಗೆ ಮೊದಲು ಆಟ, ಆಮೇಲೆ ನಿರೀಕ್ಷೆ–ಪರೀಕ್ಷೆ, ತರುವಾಯ ರಚನೆ. ಪ್ರತಿಯೊಂದು ಮಗುವಿನ ಉತ್ತಮೋತ್ತಮ ವಿಕಾಸವಾಗಬೇಕು ಎಂದರೆ, ಬೆಳೆವಣಿಗೆಯ ಈ ಮೂರೂ ಮನೋಧರ್ಮಗಳಿಗೂ ಪುಷ್ಟಿಕೊಡಬೇಕು. ಇವನ್ನು ಮಾಡಲು ಶಿಕ್ಷಕನಿಗೆ ಶಿಶು ಮನೋಧರ್ಮ ಅರ್ಥವಾಗಿ ಅದರಲ್ಲಿ ತಾನು ಪ್ರವೇಶಮಾಡುವ ಶಕ್ತಿ ಬೇಕು. ಸ್ವಾಭಾವಿಕವಾಗಿಯೂ ನೈಸರ್ಗಿಕ ವಾಗಿಯೂ ಹೆಂಗಸರು ಸಾಧಾರಣವಾಗಿ ಈ ಮೊದಲನೆ ಹಂತದ ಮಕ್ಕಳನ್ನು ಚೆನ್ನಾಗಿ ಅರಿತುಕೊಳ್ಳಬಲ್ಲರು. ಹೆಂಗಸರಲ್ಲಿ ವಿದ್ಯಾಭ್ಯಾಸ ವಿಲ್ಲದುದರಿಂದ ನಮ್ಮ ಶಿಕ್ಷಣ ಪದ್ಧತಿ ಬಹಳ ಕುಂಠಿತವಾಗಿದೆ. ತಾಯಿಗೆ ಮಗುವನ್ನು ಬೆಳೆಸಲು ತಕ್ಕ ಶಿಕ್ಷಣವಿಲ್ಲ. ವಿದ್ಯಾವತಿಯರು ಶಿಕ್ಷಣ ಕ್ಷೇತ್ರದಲ್ಲಿ ಕೆಲಸಮಾಡಲು ಬರುತ್ತಿಲ್ಲ. ನಮ್ಮ ಪಾಠಶಾಲೆಗಳನ್ನು ಸುಧಾರಿಸಬೇಕೆಂದರೆ, ಮೊದಲು ನಮ್ಮ ಹುಡುಗಿಯರಿಗೆ, ಯುವತಿ ಯರಿಗೆ ಶಿಕ್ಷಣವಾಗಬೇಕು. ಅವರೇ ಮುಂದಿನ ತಲೆಮಾರುಗಳ ಸಹಜ ಸಂರಕ್ಷಕಿಯರು. ಅಲ್ಲಿ ಪ್ರಾರಂಭಮಾಡದೆ ಗಂಡಸರೇ ಎಷ್ಟು ಯೋಜನೆ ಮಾಡಿದರೂ ವ್ಯರ್ಥವಾಗುತ್ತದೆ. ಮಗುವಿನ ಮೇಲೆ ಪ್ರಭಾವ ಬೀಳುವ ವಯಸ್ಸು ದಾಟಿದ ಮೇಲೆಯೆ ಗಂಡಸಿನ ಪ್ರವೇಶ. ಎಂಟು ವರ್ಷದೊಳಗಿನ ಮಕ್ಕಳ ಪಾಠಶಾಲೆಗಳೆಲ್ಲ ಹೆಂಗಸರ ಕೈಯಲ್ಲೇ ಇರಬೇಕು. ಸಾಧಾರಣ ವಾಗಿ, ಎಲ್ಲೋ ಅಪವಾದವಾಗಿ ಹೊರತು, ಗಂಡಸರು ಈ ಶಾಲೆಗಳಲ್ಲಿ ಇರಲೇಬಾರದು.

ಮಗುವಿನ ಬೆಳವಣಿಗೆಯ ಎರಡನೆ ಹಂತದಲ್ಲಿ . ವಿದ್ಯಾರ್ಥಿಗಳ ವಿಚಾರ ಶಕ್ತಿಯನ್ನು ಪ್ರಚೋದನೆಮಾಡಿ, ಸನ್ನಿವೇಶದ ಏಕೆ, ಹೇಗೆ ಗಳಿಗೆ ಉತ್ತರಕೊಡುವ ವ್ಯಕ್ತಿಗಳು ಬೇಕು. ನ್ಯೂಯಾರ್ಕಿನಲ್ಲಿ ಲೇಬರ್ ಯೂನಿಯನ್ ಫೆಡರೇಷನ್‌ರವರು ನಡೆಸುತ್ತಿದ್ದ ಒಂದು ಶಾಲೆಗೆ ನಾನು ಹೋಗಿದ್ದೆ. ಅಲ್ಲಿ ಇಡೀ ಸಮಾಜವೇ ಒಂದು ಕುಟುಂಬವಾಗಿ ಬಾಳುತ್ತಿತ್ತು. ಆಹಾರದ ಉತ್ಪತ್ತಿಯಲ್ಲಿ, ಉಳಿದ ಕೌಟುಂಬಿಕ ಕಾರ್ಯಗಳಲ್ಲಿ ಮಕ್ಕಳು ಭಾಗವಹಿಸುತ್ತಿದ್ದರು. ಪಾಠಶಾಲೆಯದೇ ಒಂದು ಗೋಶಾಲೆ. ಒಬ್ಬ ಶಿಕ್ಷಕ ಅದನ್ನು ನೋಡಿಕೊಳ್ಳುತ್ತಿದ್ದ. ಕೆಲವರು ಹುಡುಗರು ಅವನಿಗೆ ಸಹಾಯಮಾಡುತ್ತಿದ್ದರು. 'ಅರ್ಥಶಾಸ್ತ್ರ ತರಗತಿ' ಒಂದಕ್ಕೆ ಹೋಗಿ ಕುಳಿತೆ. ವಿದ್ಯಾರ್ಥಿಗಳು ೧೧ ವರ್ಷದ ಕೆಳಗಿನವರು. ವಿಷಯ– 'ಒಂದು ಹಸುವನ್ನು ಕೊಳ್ಳುವುದು.' ಹತ್ತುವರ್ಷದ ಹುಡುಗನೊಬ್ಬ ತರಗತಿಯನ್ನು ನಡೆಸಿದ. ಶಿಕ್ಷಕ ನನ್ನ ಜೊತೆಗೆ ಹಿಂದೆ ಬಂದು ಕುಳಿತ. ಗೋಶಾಲೆಯ ವ್ಯವಸ್ಥಾಪಕ ಶಿಕ್ಷಕನ ಜೊತೆಯಲ್ಲಿ ಪಕ್ಕದ ಸಂತೆಗೆ ಒಂದು ಹಸುವನ್ನು ಕೊಳ್ಳಲು ಹೋಗಿದ್ದಾಗ ತನಗಾದ ಅನುಭವವನ್ನು ಆ ಹುಡುಗ ವಿವರಿಸಿದ. ಹೀಗಿತ್ತು ತರಗತಿ: 'ನಾವಿಬ್ಬರೂ ಸಂತೆಗೆ ಹಸುವನ್ನು ಕೊಳ್ಳಲು ಹೋದೆವು. ನಮ್ಮ ಹಸುಗಳು ಕೊಡುವ ಹಾಲು ನಮಗೆಲ್ಲರಿಗೂ ಸಾಲುವುದಿಲ್ಲ.' ಸಂತೆ ಎಂದರೇನು ಎಂದು ಕೇಳಿದ ಒಬ್ಬ ಹುಡುಗ. 'ಪದಾರ್ಥಗಳನ್ನು ಮಾರುವ ಸ್ಥಳ. ಅಲ್ಲಿ ನಿಗದಿ ಬೆಲೆ ಇಲ್ಲ. ಹೆಚ್ಚು ಬೆಲೆ ಕೊಟ್ಟವರಿಗೆ ಪದಾರ್ಥ ಸಿಗುತ್ತದೆ. ಪದಾರ್ಥಗಳನ್ನು ಹರಾಜು ಮಾಡುತ್ತಾರೆ.' ಹರಾಜು ಎಂದರೆ? ಮತ್ತೊಂದು ಪ್ರಶ್ನೆ. ಅದಕ್ಕೆ ವಿವರಣೆ. ಒಬ್ಬೊಬ್ಬರು ಒಂದೊಂದು ಬೆಲೆಗೆ ಏಕೆ ಕೇಳುತ್ತಾರೆ' ಎಂಬುದು ಇನ್ನೊಬ್ಬನ ಪ್ರಶ್ನೆ. ಆ ಹುಡುಗ ಹೇಳಿದ: 'ಮೊಟ್ಟಮೊದಲು ೭೫ ರೂ ಗೆ ಬೆಲೆ ಪ್ರಾರಂಭ. ಕಡೆಗೆ ನಾವು ೧೨೫ ರೂ ಹೇಳಿ ತೆಗೆದುಕೊಂಡೆವು. ನಮ್ಮದೇ ಕಡೆಯ ಸವಾಲು.' ಕಡೆಯ ಸವಾಲು ಎಂದರೇನು? 'ಮೊದಲು ೭೫ ಹೇಳಿದ ನಲ್ಲ ಒಬ್ಬ. ಇನ್ನೊಬ್ಬ ಸ್ವಲ್ಪ ಹೆಚ್ಚು ಹೇಳಿದ. ಹೀಗೆ ಒಬ್ಬೊಬ್ಬರೂ ಹೆಚ್ಚು ಬೆಲೆ ಹೇಳಿ, ಇನ್ನಾರಾದರೂ ಇದೀರೋ ಹೆಚ್ಚು ಕೊಡುವವರು

ಎಂದು ಸವಾಲು ಹಾಕುತ್ತಾನೆ. ನಾವು ೧೨೫ ರೂ ಹೇಳಿದ ಮೇಲೆ ಯಾರೂ ಮರು-ಸವಾಲು ಹಾಕಲಿಲ್ಲ. ಆದುದರಿಂದ ಹಸು ನಮಗೆ ಬಂತು.' ೧೨೫ ಕ್ಕೆ ಹೆಚ್ಚಾಗಿ ಯಾರೂ ಏಕೆ ಕೇಳಲಿಲ್ಲ? ಆ ಹುಡುಗ ವಿವರವಾಗಿ ಹೇಳಿದ: 'ಹರಾಜಿಗೆ ಮೊದಲೇ ಆ ಹಸುವಿನ ವಿವರಣಾ ಪತ್ರಿಕೆಯನ್ನು ನೋಡಿದರು. ವರ್ಷಕ್ಕೆ ಎಷ್ಟು ಹಾಲು ಕೊಡುತ್ತದೆ, ಅದರ ತಿಂಡಿಯ ವೆಚ್ಚ ಎಷ್ಟು, ಉಳಿದ ವೆಚ್ಚ ಏನು? ಇದಕ್ಕೆ ಇಷ್ಟು ಬೆಲೆ ಕೊಟ್ಟರೆ ಅದು ಕೊಡುವ ಹಾಲಿಗೆ ಸರಿಹೋಗುತ್ತದೆ ಎಂದು ತೀರ್ಮಾನಿಸಿಕೊಂಡಿದ್ದರು. ಈ ಲೆಕ್ಕವನ್ನು ಮುಟ್ಟಿದ ಮೇಲೆ ಯಾರೂ ಹೆಚ್ಚಿಗೆ ಕೇಳರು.' ಈ ರೀತಿ ಮಕ್ಕಳು ಈ ವಿವರಗಳನ್ನು ಅರಿತುಕೊಳ್ಳಲು ಕಳೆದ ಒಂದು ಗಂಟೆಯ ಕಾಲ ದೊಡ್ಡ ಅರ್ಥಶಾಸ್ತ್ರವೇತ್ತರ ಸೂತ್ರಗಳ ಬಾಯಿಪಾಠ ಮಾಡುವುದಕ್ಕಿಂತ ಹೆಚ್ಚು ವಿಚಾರ ಪ್ರಚೋದಕವೂ ಬೋಧಪ್ರದವೂ ಆಗಿತ್ತು. ತತ್ವಕ್ಕೆ ಅನುಭವ ಜೊತೆಯಾದರೆ, ಅನುಭವದಿಂದ ತತ್ವ ತಿಳಿದರೆ, ಮುಂದಿನ ಹೆಜ್ಜೆ-ಸ್ವಂತ ರಚನೆ, ಕಲ್ಪನೆ.

ಈಗಿನ ಪದ್ಧತಿಯಲ್ಲಿ ಪ್ರತಿಭಾವಂತರೂ ಕಲ್ಪನಾಚತುರರೂ ಹುಟ್ಟುವುದು ಸಾಧ್ಯವಿಲ್ಲ. ನಮ್ಮ ವಿಶ್ವವಿದ್ಯಾನಿಲಯಗಳ ಪದವೀಧರರು ಕೂಡ ಈ ಮೂರನೆಯ ಹಂತಕ್ಕೆ ಬಂದಿಲ್ಲ. ಈ ದೋಷದಿಂದಲೇ ನಾವು ತೇಜೋಹೀನರಾಗಿದೇವೆ. ನಮ್ಮನ್ನು ಗುಮಾಸ್ತೆಗಳಾಗಿ ಮಾಡಲು ಬಂದುದು ಈ ವಿದ್ಯೆ. ಅದಕ್ಕೆ ವಿಚಾರ-ಕಲ್ಪನೆ ಏಕೆ? ಈ ಹಂತಕ್ಕೆ ಸ್ವಲ್ಪ ಅಭಿಕ್ರಮ, ಹೆಚ್ಚು ಆತ್ಮವಿಶ್ವಾಸ ಬೇಕು. ಇಲ್ಲಿ ಶಿಕ್ಷಕರು ಮಾಡಬೇಕಾದುದು ಪಕ್ಕದಲ್ಲಿ ನಿಂತು ನಿರೀಕ್ಷಿಸುವುದು, ಸಲಹೆ ಮಾಡುವುದು.

ಕಲಾದೃಷ್ಟಿಯಿಲ್ಲದ ವೃತ್ತಿ-ಶಿಕ್ಷಣ ಅಥವಾ ಶಿಕ್ಷಣ ಅಪೂರ್ಣ. ಶಿಕ್ಷಣಕ್ಕೂ ಕಲೆಗೂ ನಿಕಟ ಸಂಬಂಧ. ಕವೀಂದ್ರರು ರವೀಂದ್ರ ಈ ಅಂಶಕ್ಕೆ ಹೆಚ್ಚು ಗಮನ ಕೊಟ್ಟರು. ಪ್ರತಿಯೊಂದು ಗ್ರಾಮಶಾಲೆಯಲ್ಲಿಯೂ ಜನಪದ ಗೀತೆ, ಸಂಗೀತ, ಚಿತ್ರಕಲೆಗಳಿಗೆ ಒಂದು ಮುಖ್ಯ ಸ್ಥಾನವಿರಲೇ ಬೇಕು. ಮೂಲೋದ್ಯೋಗವೊಂದು ಮಾಧ್ಯಮವಾಗಿ, ಕಲೆ ಆದಕ್ಕೆ ಅಂಗವಾಗಿ ಒಂದು ಪಾಠಶಾಲೆಯನ್ನು ನಡೆಸಿದರೆ ಆ ಪಾಠಕ್ರಮ ಎಷ್ಟೇ

ಸರಳ, ಸುಲಭ ಆಗಿರಲಿ ಗುಣವಂತರಾದ, ದೃಢಶೀಲರಾದ ಸ್ತ್ರೀಪುರುಷರು ಅಲ್ಲಿ ರೂಪುಗೊಂಡಾರು. ಸುಖಭೋಗದ ಆಸೆಗೆ ಪರಕೀಯರ ಕಾಲಿಗೆ ಬಿದ್ದು ಹೊರಳಾಡದೆ, ಸ್ವತಂತ್ರವಾಗಿ ಎದೆ ಸೆಟೆದು, ತಲೆಯೆತ್ತಿ ನಿಂತು ಜನತೆಯ ಜೀವನದಲ್ಲಿ ಬೆರೆತು ಕಷ್ಟ ಸಹಿಸಿಯಾರು. ಇಂಥ ದೃಢ ಧೀರ ಜನಾಂಗವನ್ನು ನಿರ್ಮಿಸಲು ನಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸದಿದ್ದರೆ, ಜನತೆಯ ಸಂಸ್ಕೃತಿಯ ಆಧಾರದ ಮೇಲೆ ರಾಷ್ಟ್ರವನ್ನು ಕಟ್ಟದಿದ್ದರೆ, ಬರೀ ಕಂಬ ಛಾವಣಿ ಕಟ್ಟಿ ಏನು ಲಾಭ? ತನ್ನದೇ ಆದ ಸಂಸ್ಕೃತಿಯಲ್ಲಿ ಬೆಳೆದುಬಾರದ ಯಾವ ರಾಷ್ಟ್ರವೂ ಮುಂಬರಿದು, ಜನಾಂಗಗಳ ನಡುವೆ ನಿಲ್ಲಲಾರದು. ಎರವಲು ಪುಕ್ಕದಿಂದ ಹಾರಲು ಬಂದೀತೆ? ಸಾಹಿತ್ಯ ಸಂಗೀತ ಕಲೆಗಳಿಗೆ ನಮ್ಮದೇ ಕಾಣಿಕೆ ಸಲ್ಲಬೇಕು.

ಗಾಂಧೀಜಿ ಹೇಳಿದಂತೆ ಉನ್ನತ ಶಿಕ್ಷಣ (ಕಾಲೇಜು) ತನ್ನ ವೆಚ್ಚವನ್ನು ತಾನೇ ನಿರ್ವಹಿಸಬೇಕು. ತನ್ನ ಹೊಲದಿಂದ ತಾನು ನಿರ್ವಹಿಸಲಾರದ ವ್ಯವಸಾಯ ಕಾಲೇಜು ವ್ಯರ್ಥ. ಅದರ ಹೆಸರಿಗೇ ಕಳಂಕ. ಎಲ್ಲ ವೃತ್ತಿಶಿಕ್ಷಣ ಶಾಲೆಗಳೂ ಯಂತ್ರವಿಜ್ಞಾನ ಶಾಲೆಗಳೂ ಅಷ್ಟೇ; ತಮ್ಮ ವೆಚ್ಚವನ್ನು ತಾವೇ ಗಳಿಸಬೇಕು.

# ಪ್ರಕರಣ ೧೦

## ಸಂಘ ಜೀವನ – ಸಹಜೀವನ

ಇಲ್ಲಿಯವರೆಗೆ ವ್ಯಕ್ತಿಯ ನಿತ್ಯಜೀವನದ ಆರ್ಥಿಕ ವಿಚಾರವನ್ನೆ ಮುಖ್ಯವಾಗಿ ಚರ್ಚಿಸಿದೇವೆ. ಈ ಪ್ರಕರಣದಲ್ಲಿ ಸಮಾಜದ ಅಂಗವಾಗಿ ಅವನು ನಡಸುವ ಸಹಜೀವನವನ್ನು ಚರ್ಚಿಸೋಣ. ಮಾನವ ಜೀವನ ನಿಸರ್ಗದ ಒಂದು ಅಂಶ. ಈ ವಿಶ್ವದ ಬದುಕಿನಲ್ಲಿ ಒಬ್ಬೊಬ್ಬ ವ್ಯಕ್ತಿಯ ಜೀವನ ಒಂದು ನೀರುಗುಳ್ಳೆ. ಈ ಹಿನ್ನೆಲೆಯಲ್ಲಿ ನಮ್ಮ ನಿತ್ಯಜೀವನ ವನ್ನು ಅರಿತುಕೊಳ್ಳಬೇಕು.

ವ್ಯಕ್ತಿಯ ಜೀವನವಷ್ಟನ್ನೆ ನೋಡಿದರೆ ಅದು ತತ್ಕಾಲದ್ದು. ಅದಕ್ಕೆ ಅದೇ ಗುರಿ. ಆದರೆ ಒಬ್ಬನ ಬದುಕು ಹಲವರ ಬಾಳಿನೊಳಕ್ಕೆ ಚಾಚಿಕೊಂಡಿರುತ್ತದೆ. ಮನುಷ್ಯ ತನ್ನ ಮನಸ್ಸಿಗೆ ಬಂದಹಾಗೆ ನಡೆಯ ಲಾರ. ಇತರರ ಯೋಗಕ್ಷೇಮದ ದೃಷ್ಟಿಯಿಂದ ಅವನ ನಡೆನುಡಿ ಸಂಯಮಿತವಾಗಬೇಕು. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯ ನಡತೆ, ಅವನ ಅಭ್ಯಾಸ, ಅವನ ಆರೋಗ್ಯ, ಅವನ ವಸತಿ, ಎಲ್ಲವೂ ಸುತ್ತಲಿನ ಸನ್ನಿವೇಶಕ್ಕೆ ಸಂಬಂಧಿಸಿವೆ.

ಈ ದೃಷ್ಟಿಯಿಂದ ಜನರು ಸಂಘಜೀವನವನ್ನು ಹೇಗೆ ನಡೆಸ ಬೇಕೆಂಬುದನ್ನು ಸ್ಥೂಲವಾಗಿ ನಿರ್ಧರಿಸಬೇಕು. ಹಿಂದುಸ್ಥಾನದಲ್ಲಿ ನಮ್ಮ ವಸತಿಗಳೆಂದರೆ ಕೆಲವು ಮನೆಗಳ ಅಥವಾ ಗುಡಿಸಲುಗಳ ಗುಂಪು. ಅಲ್ಲೊಂದು ಇಲ್ಲೊಂದು ಗೊಂಚಲು. ಇವೇ ನಮ್ಮ ಹಳ್ಳಿಗಳು. ಆದುದರಿಂದ ನಮ್ಮ ಗ್ರಾಮ ಜೀವನವನ್ನು ಈ ನಿಟ್ಟಿನಿಂದ ಪರಿಶೀಲಿಸ ಬೇಕು.

ಒಂದು ಉದಾಹರಣೆ: ಮನುಷ್ಯ ತಿನ್ನುವುದು ತನ್ನ ದೇಹದ ಸಪೆತವನ್ನು ತುಂಬಲಿಕ್ಕೆ, ದೇಹಕ್ಕೆ ಶಕ್ತಿಕೊಡಲಿಕ್ಕೆ; ರೋಗರುಜಿನ

ಗಳನ್ನು ತಡೆಯುವಷ್ಟು ವೀರ್ಯವರ್ಧನಕ್ಕೆ. ನಾವು ತಿಂದುದರಲ್ಲಿ ದೇಹ ತನಗೆ ಬೇಕಾದುದನ್ನು ತೆಗೆದುಕೊಂಡು, ತಾನು ತೆಗೆದುಕೊಳ್ಳದುದನ್ನು ಪ್ರಕೃತಿಗೇ ಹಿಂದಕ್ಕೆ ಕೊಡುತ್ತದೆ. ಹಾಗೆ ದೇಹ ಹಿಂದಕ್ಕೆ ಕೊಟ್ಟುದನ್ನು ಪ್ರಕೃತಿ ಜೀರ್ಣಿಸಿಕೊಳ್ಳುವಂತೆ ಕೊಡಬೇಕು. ಇತರ ಮನುಷ್ಯರಿಗೆ ಹಿಂಸೆಯಾಗದಂತೆ ಕೊಡಬೇಕು. ಹೀಗೆ ಒಂದೊಂದು ಪ್ರಶ್ನೆಗೂ ಎರಡೆರಡು ಮುಖ ಇವೆ. ಇಲ್ಲಿ ಅದನ್ನು ಪರಿಶೀಲಿಸೋಣ.

ಆದುದರಿಂದ ಈ ಪ್ರಕರಣದಲ್ಲಿ ನೈರ್ಮಲ್ಯ, ಆರೋಗ್ಯ, ವಸತಿ ಮುಂತಾದವುಗಳ ಬಗ್ಗೆ ನಾನಾ ಅಂಶಗಳನ್ನು ಸ್ಥೂಲವಾಗಿ ಗಮನಿಸೋಣ. ಆಮೇಲೆ ಹಳ್ಳಿಯಲ್ಲಿ ಜನರ ಪರಸ್ಪರ ಸಂಬಂಧ. ಈಗಾಗಲೇ ನಾವು ಚರ್ಚಿಸಿರುವ ಆರ್ಥಿಕ ರಚನೆ ಹಾಗಿರಲಿ, ಸಾಮಾಜಿಕ-ರಾಜಕೀಯ ದಲ್ಲಿ ಒಂದು ಸುಸಂಘಟಿತ ವಸ್ತುವಿನಂತೆ ಸುಗಮವಾಗಿ ಗ್ರಾಮಜೀವನ ಹೇಗೆ ನಡೆದೀತೋ ನೋಡೋಣ. ಈ ಗ್ರಾಮಗಳೇ ಸ್ವರಾಜ್ಯದ ತಳಹದಿ. ಆಡಳಿತ, ಪ್ರಜಾಪ್ರಭುತ್ವಗಳ ಜವಾಬದಾರಿಯನ್ನು ನಿರ್ವಹಿ ಸಲು ಬೇಕಾದ ಅನುಭವಕ್ಕೆ ಇವೇ ಶಿಕ್ಷಣರಂಗ. ಇಲ್ಲೇ ಆ ತರಬೇತು. ಆದುದರಿಂದ ಈ ಗ್ರಾಮ ಸಂಸ್ಥೆಗಳ ಮಹತ್ವವನ್ನು ಒತ್ತಿ ಹೇಳ ಬೇಕಾದುದು ಅಗತ್ಯ.

ಗ್ರಾಮ ಸಂಸ್ಥೆಯನ್ನು ಸರಿಯಾಗಿ ರೂಪಿಸಿದರೆ, ಅದರದೇ ಒಂದು ಪ್ರತ್ಯೇಕ ಸಂಸ್ಕೃತಿ ಬೆಳೆದೀತು. ವ್ಯಕ್ತಿಯ ವ್ಯಕ್ತಿತ್ವವಿದ್ದಂತೆ ಸಂಘದ ಸಮಷ್ಟಿ ವ್ಯಕ್ತಿತ್ವ ಅದರಲ್ಲಿ ಕಂಡುಬಂದೀತು. ಗ್ರಾಮಜೀವನದ ಈ ಅಂಶ ಗಳು ನಮ್ಮನ್ನು ಶಾಶ್ವತತೆಯ ಸಮೀಪಕ್ಕೆ ಒಯ್ದಾವು. ಮಾನವ ಜೀವ ನಕ್ಕೆ ಹೆಚ್ಚಿನ ಆಯುಸ್ಸೆಂದರೆ ನೂರು ವರ್ಷ. ಆದರೆ ಗ್ರಾಮಸಂಸ್ಕೃತಿಯ ಈ ಸಂಸ್ಥೆಗಳಿಗೆ ಸದಾ ಕಾಲ ಆಯುಸ್ಸು. ನಾವು ಬೆಳೆಸುವ ಸಂಸ್ಕೃತಿಗೆ ಮನುಷ್ಯ ಸ್ವಭಾವವೊಂದೇ ಆಧಾರವಲ್ಲ; ಈ ಗ್ರಂಥದಲ್ಲಿ ಮೊದಲಿನಿಂದ ಕೊನೆಯವರೆಗೆ ವಿವರಿಸಿರುವ ಮನೋಧರ್ಮವೂ ಆಧಾರವೇ. ನಿತ್ಯ ಜೀವನಕ್ಕೆ ಸತ್ಯ ಅಹಿಂಸೆಗಳನ್ನು ಹೊಂದಿಸುವುದು ಹೇಗೆ ಎಂಬುದೇ ಇಲ್ಲಿ ವಿಚಾರ. ಪ್ರತಿಯೊಂದು ಅಂಶದಲ್ಲಿಯೂ ಈ ಮನೋಧರ್ಮವನ್ನು

ಎಚ್ಚರದಿಂದ ಕಾಪಾಡಿಕೊಂಡರೆ ಈ ತತ್ವಗಳ ಆಧಾರದ ಮೇಲೆ ಸಮಾಜ ವನ್ನು ಕಟ್ಟಬಹುದು.

ನೈರ್ಮಲ್ಯ ; ವೈಯಕ್ತಿಕ ಶುಚಿ–ರೂಢಿ, ಸಂಪ್ರದಾಯಗಳ ಮೂಲಕ ಹಳ್ಳಿಗಳಲ್ಲಿ ಉತ್ತಮ ರೀತಿಯ ವೈಯಕ್ತಿಕ ಶುಚಿ ಕಂಡು ಬರುತ್ತದೆ. ಆಧುನಿಕತೆಯ ಮಾಯೆಯಿಂದ ಈ ಕೆಲವು ಒಳ್ಳೆಯ ರೂಢಿ ಗಳು ದುರ್ದೈವವಶಾತ್ ಬಿಟ್ಟು ಹೋಗುತ್ತಿವೆ. ಆದುದರಿಂದ ಹಳೆಯ ಕಾಲದ ವೈಯಕ್ತಿಕ ಶುಚಿಯ ಪದ್ಧತಿಗಳನ್ನೆಲ್ಲ ಮತ್ತೆ ಉಜ್ಜೀವನಗೊಳಿಸ ಬೇಕು. ಅಗತ್ಯವಿದ್ದಲ್ಲಿ ಹೊಸ ಪದ್ಧತಿಗಳನ್ನು ಮೊದಲಿಡಬಹುದು.

**ಸಾಮೂಹಿಕ ಶುಚಿ :** ನಮ್ಮ ಹಳ್ಳಿಯ ಜೀವನದಲ್ಲಿ ಇದೇ ಬಹಳ ಅಭಾವ. ಹಳ್ಳಿಯ ಓಣಿ, ಬೀದಿ, ಬಯಲು ಕೆರೆಯೇರಿ ಎಲ್ಲವೂ ಶೌಚ ಸ್ಥಳಗಳೇ. ಜನರು ಓಡಾಡುವ ಸ್ಥಳ ಎಂಬುದನ್ನೂ ಲಕ್ಷಿಸದೆ ಹಳ್ಳಿಯ ಜನ ಎಲ್ಲಂದರಲ್ಲಿಯೆ ವಿವೇಕವಿಲ್ಲದೆ ಶೌಚಮಾಡುತ್ತಾರೆ. ಕುಡಿಯುವ ನೀರನ್ನೂ ಹೊಲಸುಮಾಡುತ್ತಾರೆ. ಆದರೆ ಈ ತಪ್ಪೆಲ್ಲವೂ ಗ್ರಾಮ ಸ್ಥರದೇ ಅಲ್ಲ. ಹಳ್ಳಿಗಳಲ್ಲಿ ಮೂತ್ರಿಗಳೂ ಇಲ್ಲ, ಶೌಚಕೂಪಗಳೂ ಇಲ್ಲ. ಮನೆಗಳೆಲ್ಲ ಚಿಕ್ಕವಾಗಿ ಇಂಥ ಸೌಕರ್ಯಗಳಿಗೆ ಸ್ವಲ್ಪವೂ ಸ್ಥಳವಿಲ್ಲದಂತೆ ಒತ್ತಾಗಿರುತ್ತವೆ. ಆದುದರಿಂದ ಸಾಮೂಹಿಕವಾದ ಮೂತ್ರಿಗಳನ್ನು ಶೌಚಕೂಪಗಳನ್ನೂ ಸ್ನಾನಗೃಹಗಳನ್ನೂ ಕಟ್ಟುವುದು, ಸರಿಯಾಗಿ ನೋಡಿಕೊಳ್ಳುವುದು ಅತ್ಯಗತ್ಯ. ಊರಿನ ಕಸ, ಮಲ ಮೂತ್ರ ಎಲ್ಲವನ್ನೂ ಗೊಬ್ಬರ ಮಾಡುವ ಒಂದು ವ್ಯವಸ್ಥೆ–ಯೋಜನೆ ಬೇಕು. ನೈರ್ಮಲ್ಯ ದೃಷ್ಟಿಯಿಂದಲೂ ಗ್ರಾಮದ ಆರ್ಥಿಕ ವ್ಯವಸ್ಥೆಯ ದೃಷ್ಟಿ ಯಿಂದಲೂ ಇಂಥ ಕಾರ್ಯಕ್ರಮ ಅತ್ಯಗತ್ಯ. ಸಾಮೂಹಿಕ ಶುಚಿಯ ವಿವರಗಳಿವು :

(ಅ) ಸುಲಭವಾದ ಚರಂಡಿಗಳು. ಬಯಲು ಚರಂಡಿಗಳಾದರೂ ಸರಿ. ಆಗಾಗ ಕ್ಲುಪ್ತವಾಗಿ ಅವನ್ನು ಸ್ಥಳದಲ್ಲಿಯೆ ಸಿಗುವ ಕ್ರಿಮಿನಾಶಕ ಪದಾರ್ಥಗಳಿಂದ ತೊಳೆಯುವುದು.

(ಆ) ಕೈ ತೋಟಗಳಿಗೆ, ಹಣ್ಣಿನ ಗಿಡಗಳಿಗೆ ಚರಂಡಿಯ ನೀರನ್ನು ಹರಿಯಿಸುವುದು. ಶೌಚ ಕುಟಿಗಳನ್ನು ಏರ್ಪಡಿಸುವುದು.

(ಇ) ಕಸವನ್ನು ಕೂಡಿಹಾಕಿ ಗೊಬ್ಬರ ಮಾಡುವುದು.

(ಈ) ಹಳ್ಳಿಯ ಬಾವಿ, ದಾರಿ, ಕೆರೆ, ಬಯಲುಗಳನ್ನು ಚೊಕ್ಕಟವಾಗಿ ಹೊಲಸಾಗದಂತೆ ನೋಡಿಕೊಳ್ಳುವುದು.

(ಉ) ಸಾರ್ವಜನಕರಿಗಾಗಿ ಚಿಕ್ಕ ತೋಟಗಳನ್ನು ಏರ್ಪಡಿಸುವುದು; ಮಕ್ಕಳ ಆಟದ ಬಯಲು, ಅಲ್ಲಲ್ಲಿ ಶುಚಿಯಾದ ತೆರವು ನೆಲ.

**ಆರೋಗ್ಯ: ೧. ಗ್ರಾಮದ ಆಹಾರಶಾಸ್ತ್ರ:** ಹಳ್ಳಿಗಳಲ್ಲಿ ಆಹಾರ ಲೋಪವೇ ಹೆಚ್ಚು. ಹಳ್ಳಿಗಳಲ್ಲಿಯೆ ಬೆಳೆಯುವ ಬೇರೆ ಬೇರೆ ಆಹಾರ ಪದಾರ್ಥಗಳ ಪೌಷ್ಟಿಕ ಅಂಶಗಳ ಜ್ಞಾನವನ್ನು ಹಳ್ಳಿಯವರಿಗೆ ನೀಡಬೇಕು. ಸಂಪೂರ್ಣ ಆಹಾರದ ಅರ್ಥವನ್ನೂ ಹಳ್ಳಿಯ ಪರಿಸ್ಥಿತಿಯಲ್ಲಿ ಎಲ್ಲಾ ಪೌಷ್ಟಿಕ ಅಂಶಗಳೂ ಇರುವ ಸಂಪೂರ್ಣ ಆಹಾರವನ್ನು ಹೇಗೆ ಒದಗಿಸಿಕೊಳ್ಳಬೇಕೆಂಬುದನ್ನೂ ತಿಳಿಸಬೇಕು. ಆರೋಗ್ಯಶಾಖೆ ಈ ಪ್ರಚಾರವನ್ನು ಬಿರುಸಾಗಿ ಮಾಡಬೇಕು. ಮೊಟ್ಟಮೊದಲು ಭತ್ತದ ಗಿರಣಿಗಳನ್ನು ಮುಚ್ಚಬೇಕು.

**೨. ಕುಡಿಯುವ ನೀರು:** ಕುಡಿಯಲು ಸ್ವಚ್ಛವಾದ ನೀರನ್ನು ಒದಗಿಸಬೇಕಾದುದು ಅಗತ್ಯ. ಹಳ್ಳಿಗಳಲ್ಲಿ ಇನ್ನೂ ಎಷ್ಟೋ ಬಾವಿಗಳು ಬೇಕು. ಹಳೆಯವನ್ನು ಸರಿಪಡಿಸಬೇಕು. ಕೆಲವು ಕಡೆ ನಿರ್ಮಲವಾದ ಕೆರೆಗಳನ್ನು ಕುಡಿಯುವ ನೀರಿಗಾಗಿ ಬಳಸಬಹುದು. ಈ ಕೆಲಸ ಮೊಟ್ಟಮೊದಲು ಮಾಡಬೇಕಾದುದು.

**೩. ಮುಂಜಾಗರೂಕತೆ:** ರೋಗರುಜಿನಗಳ ಬಗ್ಗೆ ಮುಂಜಾಗರೂಕತೆಯ ಕಾರ್ಯಕ್ರಮಕ್ಕೇ ಹೆಚ್ಚು ಗಮನ ಕೊಟ್ಟು, ರೋಗವನ್ನು ಗುಣಪಡಿಸುವ ಔಷಧಕ್ಕೆ ಕಡಮೆ ಗಮನ ಕೊಡಬೇಕು. ಎಂದರೆ, ವೈಯಕ್ತಿಕ–ಸಾಮೂಹಿಕ ಸಂಪೂರ್ಣಾಹಾರ, ಗ್ರಾಮ ನೈರ್ಮಲ್ಯ, ವ್ಯಾಯಾಮ–ವಿಶ್ರಾಂತಿ, ಆರೋಗ್ಯಪ್ರದ ಜೀವನ ಪದ್ಧತಿ.

**ಸಾಮಾನ್ಯ ಕಾಯಿಲೆ-ಸುಲಭ ಚಿಕಿತ್ಸೆ:** ಹಳ್ಳಿಯಲ್ಲಿ ಸಾಮಾನ್ಯವಾದ ಕಾಯಿಲೆಗಳ ಪರಿಹಾರ ಕ್ರಮವನ್ನೂ ಮುಂಜಾಗರೂಕತೆಯ ವಿವರಗಳನ್ನೂ ತಿಳಿಸಬೇಕು. ಸುಲಭ ಚಿಕಿತ್ಸೆ, ನಿಸರ್ಗೋಪಚಾರಗಳನ್ನು ಕಲಿಸಬೇಕು. ಹಳ್ಳಿಗಳಲ್ಲಿ ದೊರೆಯುವ ಗಿಡಮೂಲಿಕೆಗಳ ಗುಣಗಳನ್ನು

ತಿಳಿಸಬೇಕು. ಸುಲಭವಾದ ಕ್ರಿಮಿನಾಶಕಗಳ ಉಪಯೋಗ ತಿಳಿದಿರಬೇಕು. ಅವನ್ನು ಒದಗಿಸಬೇಕು. ವಿಷಮೂಲಿಕೆಗಳ ಪ್ರಯೋಜನವನ್ನು ಆರೋಗ್ಯಶಾಖೆ ಸಂಶೋಧಿಸಿ ತಿಳಿಸಬೇಕು.

**೫. ವ್ಯಾಯಾಮ - ವಿಶ್ರಾಂತಿ:** ಬಯಲಿನಲ್ಲಿ ವ್ಯಾಯಾಮಕ್ಕೂ ವಿಶ್ರಾಂತಿಗೂ ತಕ್ಕ ಸ್ಥಳವನ್ನು ಪ್ರತಿಯೊಂದು ಹಳ್ಳಿಯಲ್ಲಿಯೂ ಒದಗಿಸಬೇಕು. ಸೂರ್ಯ ನಮಸ್ಕಾರ, ಆಸನ, ಸಾಮೂಹಿಕ ಆಟಗಳನ್ನು ಪ್ರೋತ್ಸಾಹಿಸಬೇಕು.

**ವಸತಿ:** ಆರೋಗ್ಯಕರ, ಉತ್ತಮ ಗೃಹನಿರ್ಮಾಣ ಬಹಳ ಮುಖ್ಯ ಅಂಶ. ಹಳ್ಳಿಯ ಮನೆಗಳು ಅನಾರೋಗ್ಯಕರ, ಬಹಳ ಒತ್ತು. ಯಾವ ಯೋಜನೆಯನ್ನೂ ಅನುಸರಿಸಿ ಅದನ್ನು ಕಟ್ಟಿಲ್ಲ. ಇದನ್ನು ಬದಲಿಸಿ ಆರೋಗ್ಯ–ನಿರ್ಮಾಣ ಶಾಖೆಗಳ ನೆರವಿನಿಂದ ಗ್ರಾಮಪಂಚಾಯತಿಯೇ ಒಂದು ಯೋಜನೆ ಸಿದ್ಧಪಡಿಸಬೇಕು. ಅದರಲ್ಲಿ ಈ ಅಂಶಗಳಿರಬೇಕು:

(ಅ) ಊರಿನ ವಿಸ್ತರಣಕ್ಕೆ ಸ್ಥಳ ಮಾಡಿ ಊರೊಳಗಿನ ಇರುಕನ್ನು ಕಡಮೆ ಮಾಡಬೇಕು. (ಆ) ಇನ್ನು ಮುಂದೆ ಸಹಕಾರ ಪದ್ಧತಿಯಂತೆ ಮನೆಗಳನ್ನು ಕಟ್ಟಬೇಕು. (ಇ) ಪ್ರಚಾರ ಮಾಡಿ ಇರುವ ಮನೆಗಳನ್ನು ಉತ್ತಮಪಡಿಸಬೇಕು. (ಈ) ಮನೆಗಳಿಗೂ ಓಣಿಗಳಿಗೂ ಚರಂಡಿಗಳನ್ನು ಮಾಡಬೇಕು. ಮನೆಗಳಿಗೆ ಇಂಗುಬಚ್ಚಲನ್ನು ತೋಡಬೇಕು. ಅದನ್ನು ೩–೪ ತಿಂಗಳಿಗೊಮ್ಮೆ ಚೊಕ್ಕಟ ಮಾಡಬೇಕು. ಓಣಿಗಳಿಗೆ ಕಾಲುವೆ ತೋಡಿದರೆ ಸಾಕು. ಅದನ್ನೂ ತಿಂಗಳಿಗೊಮ್ಮೆ ಸ್ವಚ್ಛ ಮಾಡಬೇಕು. ಕ್ರಿಮಿನಾಶಕಗಳನ್ನು ಬಳಸಿ ಶುಚಿ ಮಾಡಬೇಕು. ಚರಂಡಿಯ ನೀರನ್ನು ಕಾಯಿಪಲ್ಯ, ಗಿಡಗಳನ್ನು ಬೆಳೆಸಲು ಉಪಯೋಗಿಸಬೇಕು. (ಉ) ಹಳ್ಳಿಗಳಲ್ಲಿ ಮನೆಗಳು ಒತ್ತಾಗಿ ಗುಂಪಾಗಿ ಇರುವುದರಿಂದ ಹೊರಗಡೆ ಶೌಚಕೂಪಗಳನ್ನೂ, ಬಟ್ಟೆ ಒಗೆಯಲು, ಮೈ ತೊಳೆಯಲು ಸ್ಥಳಗಳನ್ನೂ ಏರ್ಪಡಿಸಬೇಕು. (ಊ) ಊರಿನಲ್ಲಿ ನೀರು ನಿಲ್ಲುವ ಗುಂಡಿ ಹೊಂಡಗಳೆಲ್ಲವನ್ನೂ ಮುಚ್ಚಬೇಕು. ಇಲ್ಲದಿದ್ದರೆ ಮಲೇರಿಯಾ ಬರುವ ಸಂಭವವಿದೆ. (ಎ) ಊರಿನಲ್ಲಿ ಬೀದಿ, ರಸ್ತೆ

ಗಳನ್ನು ಯೋಜನಾನುಸಾರ ಮಾಡುವುದು. (ಏ) ಹಳ್ಳಿಯ ಪರಿಸ್ಥಿತಿಗೆ ಹೊಂದುವ ಮಾದರಿ ಮನೆಗಳನ್ನು ಕಟ್ಟಿ ಆರೋಗ್ಯಶಾಖೆ-ನಿರ್ಮಾಣ ಶಾಖೆಗಳವರು ಪ್ರದರ್ಶಿಸಬೇಕು. (ಐ) ಗ್ರಾಮ ನೈರ್ಮಲ್ಯಕ್ಕೆ ಅವಕಾಶ ವಿಲ್ಲದ ಹಳ್ಳಿಗಳನ್ನು ಪೂರಾ ಬೇರೆ ಪ್ರದೇಶಕ್ಕೇ ಕ್ರಮವಾಗಿ ಬದಲಿಸ ಬೇಕು. (ಒ) ಮುಂದೆ ಕಟ್ಟುವ ಎಲ್ಲಾ ವಸತಿ-ಯೋಜನೆಗಳಲ್ಲೂ ಹರಿಜನರಿಗೇ ಬೇರೆ ಕೇರಿ ಕಟ್ಟುವುದನ್ನು ತಪ್ಪಿಸಬೇಕು.

**ಗ್ರಾಮ ಸಂಘಟನೆ-ಸಂಸ್ಥೆ:** ಗ್ರಾಮ ಸಂಘಟನೆಯನ್ನು ಮೂರು ಸಂಸ್ಥೆಗಳ ಮೂಲಕ ಮಾಡಬಹುದು: ೧. ಗ್ರಾಮ ಸ್ವರಾಜ್ಯದ ಪದ್ಧತಿಯಲ್ಲಿ ಗ್ರಾಮದ ಆಡಳಿತಕ್ಕಾಗಿ ಒಂದು ಗ್ರಾಮ ಪಂಚಾಯತಿ, ೨. ಗ್ರಾಮದ ಆರ್ಥಿಕ ವ್ಯವಸ್ಥೆಗಾಗಿ ಒಂದು ವಿವಿಧೋದ್ದೇಶದ ಸಮಗ್ರ ಸಹಕಾರಸಂಘ, ೩. ಗ್ರಾಮಾಭಿವೃದ್ಧಿಯ ಕಾರ್ಯವನ್ನು ಜನಶಕ್ತಿಯಿಂದ ನಡೆಸಲು ಒಂದು ಗ್ರಾಮ ಸೇವಾಸಂಘ.

**೧. ಗ್ರಾಮ ಪಂಚಾಯತಿ:** ವಯಸ್ಕರ ಮತದಾನದಿಂದ ಆರಿಸಿದ ಗ್ರಾಮ ಪಂಚಾಯತಿ ಹಳ್ಳಿಹಳ್ಳಿಯಲ್ಲೂ ಅಥವಾ ಹಳ್ಳಿಗಳ ಗುಂಪಿ ಗೊಂದರಂತೆ ಇರಬೇಕು. ಇದಕ್ಕಾಗಿ ಹಳ್ಳಿಯಲ್ಲಿ ವಿಭಾಗಗಳನ್ನು ಮಾಡ ಬಹುದು. ರಸ್ತೆ, ನೀರಿನ ವ್ಯವಸ್ಥೆ, ಶಿಕ್ಷಣ, ರೋಗಿಗಳ ಚಿಕಿತ್ಸೆ, ನೈರ್ಮಲ್ಯ, ಒಂದು ಮಿತಿಯೊಳಗೆ ನ್ಯಾಯದ ಏರ್ಪಾಟು, ದೀಪ ಮುಂತಾದ ಸೇವಾಕಾರ್ಯವೆಲ್ಲ ಪಂಚಾಯತಿಗೆ ಸೇರಿದುದೇ. ಪ್ರತಿಯೊಂದು ಹಳ್ಳಿಯಲ್ಲಿ ಈ ಸೇವಾಕಾರ್ಯ ನಡೆಯಲೇ ಬೇಕು. ಹಳ್ಳಿಯ ಕಂದಾಯದಲ್ಲಿ ಇದ ಕ್ಕಾಗಿ ತೆಗೆದಿಟ್ಟ ಹಣ ಈ ಸೇವಾಕಾರ್ಯಕ್ಕೆ ಸಾಲದಿದ್ದರೆ ಉಳಿದುದನ್ನು ಸರಕಾರ ಕೊಡಬೇಕು. ಇದರ ಜೊತೆಗೆ ಇನ್ನೊಂದು ರೀತಿಯ ಸೇವೆ- ಸ್ವಲ್ಪಭಾಗ ಸ್ಥಳದ ಜನರಿಂದ ಸ್ವಲ್ಪಭಾಗ ಸರಕಾರದಿಂದ ಹಣದ ವ್ಯವ ಸ್ಥೆಯಾಗಿ ನಡೆಯಬೇಕು. ಪುಸ್ತಕ ಭಂಡಾರ, ಗ್ರಾಮಭವನ, ಪ್ರದರ್ಶನ ಇತ್ಯಾದಿ.

ಒಂದು ಕ್ಷೇತ್ರದ ಎಲ್ಲಾ ಪಂಚಾಯತಿಗಳೂ ಸೇರಿ ಒಂದು ಕೇಂದ್ರ ಪಂಚಾಯತಿ ಇರಬೇಕು. ಗ್ರಾಮ ಪಂಚಾಯತಿಗಳ.ಈ ವಿವಿಧ ಸೇವಾ ಕಾರ್ಯಗಳನ್ನು ಪರಸ್ಪರ ಹೊಂದಿಸಿ, ಕೇಂದ್ರ ಪಂಚಾಯತಿ ಗ್ರಾಮ

ಪಂಚಾಯತಿಗಳಿಗೆ ಮಾರ್ಗದರ್ಶನ ಮಾಡುತ್ತ, ಅವುಗಳ ಲೆಕ್ಕಗಳನ್ನು ಕೆಲಸವನ್ನು ಪರಿಶೀಲಿಸಬೇಕು. ಕೇಂದ್ರ ಪಂಚಾಯತಿ ದೊಡ್ಡ ಚಿಕಿತ್ಸಾಲಯವನ್ನೂ ಉತ್ತರ ಮೂಲಶಿಕ್ಷಣ ಶಾಲೆಯನ್ನೂ ನಡೆಸಬೇಕು. ಕೇಂದ್ರ ಪಂಚಾಯತಿಗೆ ಒಬ್ಬ ಅಸಿಸ್ಟೆಂಟ್ ಇಂಜನೀಯರ್ ಇರಬೇಕು. ಅವರು ನಿರ್ಮಾಣ ಕಾರ್ಯಗಳ ಅಂದಾಜುಪಟ್ಟಿ ಮಾಡಿ ಕೆಲಸಗಳನ್ನು ನಡೆಸಬೇಕು. ಎಲ್ಲಾ ಪಂಚಾಯತಿಗಳ ಪ್ರತಿನಿಧಿಗಳು ಸೇರಿ ಕೇಂದ್ರ ಪಂಚಾಯತಿ. ಇದಕ್ಕೆ ಪಂಚಾಯತಿಗಳಿಂದ ಆದಾಯದ ಪಾಲೂ, ಸರಕಾರದ ಸಹಾಯ ಧನವೂ ಸಿಗಬೇಕು.

ವಿ. ಸೂ:-ಗ್ರಾಮ ಪಂಚಾಯತಿಗಳು ಬರೀ ಆಡಳಿತ ಸಂಸ್ಥೆಗಳಾಗಿರಬಾರದು. ಗ್ರಾಮಸ್ಥರನ್ನು ಜವಾಬದಾರರನ್ನಾಗಿ ಮಾಡಲು ಪ್ರತಿಯೊಬ್ಬ ವಯಸ್ಕರಿಗೂ ಅವನ ಹಕ್ಕು ಬಾಧ್ಯತೆಗಳನ್ನು ತಿಳಿಸಿ ತರಬೇತು ಮಾಡಬೇಕು. ಜೂಜು ಮುಂತಾದ ದುರಭ್ಯಾಸಗಳನ್ನು ಹೋಗಲಾಡಿಸಲು ಸಮಾಜದ ಅಂಧ ಸಂಪ್ರದಾಯಗಳನ್ನು ದುರಾಚಾರಗಳನ್ನು ನೀಗಲು ಅಸ್ಪೃಶ್ಯಾತಾ ನಿವಾರಣೆಮಾಡಲು ಸಮಾಜ ಸುಧಾರಣೆಯ ಕೆಲಸ ಮಾಡಬೇಕು.

ಹರಿಜನರೂ ಆದಿವಾಸಿಗಳೂ ಬಹುಕಾಲದಿಂದ ಹಿಂದುಳಿದಿದಾರೆ. ಅವರನ್ನು ಮೇಲೆತ್ತಲು ವಿಶೇಷ ಪ್ರಯತ್ನ ನಡೆಯಬೇಕು. ಹೆಂಗಸರ ದುರವಸ್ಥೆ ಇನ್ನೂ ಕಷ್ಟತರ ಸಮಸ್ಯೆ. ಒಂದು ಸಂಸ್ಥೆ, ಒಂದು ಶಾಖೆ ಇದನ್ನು ನಿರ್ವಹಿಸಲಾರದು. ಹಳೆಯ ದುರಭಿಮಾನಗಳನ್ನು ನೀಗಿ ಸಾಮಾಜಿಕ ಚೇತನವನ್ನು ಎಚ್ಚರಿಸುವ ಕೆಲಸ ಇದು. ಈ ಕೆಲಸಕ್ಕೆ ವಿಶೇಷ ಗಮನಕೊಡಬೇಕು. ವ್ಯವಹಾರಾನುಭವ, ಗೃಹವಿಜ್ಞಾನದ ಪರಿಚಯ ಇರುವ ಹೆಂಗಸರು ಈ ಕೆಲಸಕ್ಕೆ ಉಪಯುಕ್ತರು.

೨. ವಿವಿಧೋದ್ದೇಶ ಸಹಕಾರ ಸಂಘ: ರಾಜಕೀಯಕ್ಕೆ ಆಡಳಿತಕ್ಕೆ ಪಂಚಾಯತಿಯಿದ್ದಹಾಗೆ ಹಳ್ಳಿಯ ಆರ್ಥಿಕ ವ್ಯವಸ್ಥೆಗೆ ವಿವಿಧೋದ್ದೇಶ ಸಹಕಾರಸಂಘ. ಆ ಸಂಘ ಈ ಕೆಲಸಗಳನ್ನು ನಿರ್ವಹಿಸಬೇಕು: ೧. ಹಳ್ಳಿಯಲ್ಲಿ ಬೆಳೆದ ಧಾನ್ಯವನ್ನೆಲ್ಲ ಕೂಡಹಾಕಿ ತೆಗೆದಿಡುವುದು: ೨. ಆಹಾರವಸ್ತುಗಳನ್ನು ಸಿದ್ಧಮಾಡುವುದು: ೩. ಹಳ್ಳಿಯಲ್ಲಿ ಬೆಳೆದ

ಪದಾರ್ಥಗಳ, ಹೊರಗಿನಿಂದ ತರಿಸಿದ ಪದಾರ್ಥಗಳ ಯೋಗ್ಯ ವಿತರಣ: ೪. ಕೃಷಿ-ಗ್ರಾಮೋದ್ಯೋಗದ ಉಪಕರಣಗಳ ಸಂಗ್ರಹ-ಮಾರಾಟ: ೫. ಸ್ಥಳೀಯ ಉದ್ಯೋಗಗಳಿಗಾಗಿ ಹತ್ತಿ, ಉಣ್ಣೆ, ಲೋಹಗಳಂಥ ಮೂಲ ವಸ್ತುಗಳ ಸಂಗ್ರಹ, ಮಾರಾಟ: ೬. ಹಳ್ಳಿಯಲ್ಲಿ ತಯಾರಾದ ಪದಾರ್ಥಗಳ ಮಾರಾಟ: ೭. ಹಳ್ಳಿಯ ಅಗತ್ಯಗಳಿಗೆ ಆಗಿ ಮಿಕ್ಕ ಹೆಚ್ಚಿನ ಬೆಳೆಯನ್ನು ಹೊರಗಿನ ಪದಾರ್ಥಗಳನ್ನು ತರಿಸಲು ಮಾಡಿದ ವಿನಿಮಯ: ೮. ಇಡೀ ಹಳ್ಳಿಗೆ ಲಾಭಕರವಾಗುವಂತೆ ಬೇರೆ ಬೇರೆ ಗ್ರಾಮೋದ್ಯೋಗ ಸಹಕಾರ ಸಂಘಗಳ ಸಮನ್ವಯ. ಜನರೆಲ್ಲರಿಗೂ ಕೈತುಂಬಾ ಕೆಲಸವಿರುವಂತೆ ವ್ಯವಸ್ಥೆ. ಊರಿನಲ್ಲಿ ನಿರುದ್ಯೋಗ, ಅರೆಬರೆ ಉದ್ಯೋಗ ಇರಬಾರದು: ೯. ಕಲಾಶಿಕ್ಷಣ ಪಡೆದ ಹೊಸಹೊಸ ತಜ್ಞರನ್ನು ಹಳ್ಳಿಗಳಿಗೆ ಕಳಿಸಿ ಅಲ್ಲಿನ ಕಸಬುದಾರರು ತಮ್ಮ ಕೆಲಸವನ್ನು ಉತ್ತಮ ಪಡಿಸಲು ಶಿಕ್ಷಣ ಕೊಡಿಸಬೇಕು. ಆ ಶಿಕ್ಷಣದ ವೆಚ್ಚವನ್ನು ಸರಕಾರ ವಹಿಸಬೇಕು: ೧೦. ಒಂದೊಂದು ಕ್ಷೇತ್ರಕ್ಕೂ ಒಬ್ಬ ಪೂರ್ಣ ತರಬೇತಾದ ಸಹಕಾರ ಸಂಘಗಳ ಅಧಿಕಾರಿ ಇರಬೇಕು: ೧೧. ಹಳ್ಳಿಗಳಿಗೆ ಬೇಕಾದ ಜ್ಞಾನ-ವಿಚಾರದ ಪರಿಚಯ.

೩. ಗ್ರಾಮಸೇವಾ ಸಂಘಗಳು: ಗ್ರಾಮ ಪಂಚಾಯತಿ, ವಿವಿಧೋದ್ದೇಶ ಸಹಕಾರ ಸಂಘ, ಎರಡೂ ಸೇರಿ ಕೆಲಸ ಮಾಡುವಾಗ ಗ್ರಾಮ ಸೇವಾ ಸಂಘಕ್ಕೇನು ಕೆಲಸ ಎಂದು ಕೇಳಬಹುದು. ಇವೆರಡನ್ನೂ ಚುನಾಯಿತರಾದ ಕೆಲವರು ಮಾತ್ರವೇ ನಡೆಸುತ್ತಾರೆ, ಅವರನ್ನು ಚುನಾಯಿಸಿದ ಉಳಿದ ಜನರೆಲ್ಲ, ಅವರಿಗೇನಾದರೂ ರಚನಾತ್ಮಕ ಕೆಲಸವನ್ನು ಕೊಡದಿದ್ದರೆ, ಸುಮ್ಮನೆ ಪಂಚಾಯತಿ-ಸಹಕಾರ ಸಂಘಗಳ ಕೆಲಸವನ್ನು ನೋಡುತ್ತ ಕೂಡಬೇಕಾಗುತ್ತದೆ. ಅವೆರಡೂ ಸಂಸ್ಥೆಗಳು ತಮ್ಮ ಕೆಲಸವನ್ನು ನಿರ್ವಹಿಸಲು ತಕ್ಕ ಬೆಂಬಲ ಕೊಡಲು ಗ್ರಾಮಸೇವಾ ಸಂಸ್ಥೆ. ಇವು ಸ್ವತಂತ್ರ ಸಂಸ್ಥೆಗಳು. ಅವಕ್ಕೆ ಸ್ವತಂತ್ರನಿಯಮ, ಹಣಕಾಸು. ಸರಕಾರ ಅವಕ್ಕೆ ಧನ ಸಹಾಯ ಮಾಡಬಹುದು. ಆದರೆ ಅವುಗಳ ಸ್ವಾತಂತ್ರ್ಯವನ್ನು ಮೊಟಕು ಮಾಡಬಾರದು. ಗ್ರಾಮ ನೈರ್ಮಲ್ಯ ಕಾರ್ಯಕ್ಕೆ ಜಾತ್ರೆ ಪರಿಷೆಗಳ ವ್ಯವಸ್ಥೆಗೆ, ಊರಿನ ಕಾವಲಿಗೆ, ಅಂಟು

ರೋಗ-ಪ್ರವಾಹಬಾಧೆ ಮುಂತಾದುದು ಬಂದಾಗ, ಈ ಗ್ರಾಮಸೇವಾ ಸಂಘ ಸ್ವಯಂ ಸೇವಕರನ್ನು ತಯಾರು ಮಾಡುತ್ತದೆ. ಪಂಚಾಯತಿ, ಸಹಕಾರ ಸಂಘ, ಸರಕಾರಗಳಲ್ಲಿ ನೌಕರಿಮಾಡುವ ಒಬ್ಬೊಬ್ಬನಿಗೂ ಹತ್ತಾರು ಜನ ಸ್ವಯಂ ಸೇವಕರು ಬೇಕು. ಅವರನ್ನು ಒದಗಿಸುವುದು ಗ್ರಾಮ ಸೇವಾಸಂಘದ ಕೆಲಸ.

ಗ್ರಾಮ ಸಂಘಟನೆಗೆ ಮೇಲಿನ ಮೂರು ಸಂಸ್ಥೆಗಳು ಸಾಧನ ಎಂದಿದೇವೆ. ಗ್ರಾಮ ಸಂಘಟನೆಯ ಮುಖ್ಯೋದ್ದೇಶ್ಯ-ಅನ್ನ ಬಟ್ಟೆ ಮುಂತಾದವುಗಳಲ್ಲಿ ಸ್ವಾವಲಂಬನೆ, ಸ್ವಸಾಮರ್ಥ್ಯ ಸ್ವಸಂರಕ್ಷಣೆಗಳು ಗ್ರಾಮ ಜೀವನದ ತಳಹದಿಯಾಗುವಂತೆ ಕ್ರಾಂತಿಮಯ ಪ್ರಜಾತಂತ್ರ ಪದ್ಧತಿಯಿಂದ ಮಾಡುವುದು.

ಗ್ರಾಮ ಸಂಸ್ಕೃತಿ: ಇದು ಬಹಳ ದಾಸೀನ್ಯಕ್ಕೆ ಗುರಿಯಾದ ವಸ್ತು. ಗ್ರಾಮಸಂಸ್ಕೃತಿಯ ಗಾಢವಾದ ಪ್ರಭಾವವಿಲ್ಲದಿದ್ದರೆ ಗ್ರಾಮ ಸ್ವಾವಲಂಬನ, ಸ್ವಪರಿಪಾಲನೆ ಎರಡೂ ದೃಢವಾಗವು. ಅವಾಸ್ತವವಾಗುತ್ತವೆ. ಕಾಲಪುರುಷನ ಗದಾಘಾತಕ್ಕೆ ಮಣಿಯದ ದೃಢವಾದ ಗ್ರಾಮ ಸಂಸ್ಕೃತಿಯೊಂದನ್ನು ಭಾರತ ಸೃಷ್ಟಿಸಿಕೊಂಡಿದೆ. ಅದನ್ನು ಮತ್ತೆ ಸ್ಥಾಪಿಸಿ ಬೆಳೆಸಬೇಕು. ಹಳ್ಳಿಯ ಹೆಂಗಸರಲ್ಲಿ ಈ ಸಂಸ್ಕೃತಿ ಇನ್ನೂ ಜೀವಂತವಾಗಿದೆ. ಅದರಿಂದಲೇ ಗ್ರಾಮಜೀವನಕ್ಕೆ ಶಕ್ತಿಸೌಂದರ್ಯ ಬಂದಿವೆ. ಜೀವನದ ಅನುಭವ, ಜೀವನದ ಸಮಸ್ಯೆಗಳ ವ್ಯಾವಹಾರಿಕ ಜ್ಞಾನಗಳಲ್ಲಿ ಪದವೀಧರನಾದ ಮೊಮ್ಮಗನಿಗಿಂತ ಹಳ್ಳಿಯ ಅಡುಗೂಲಜ್ಜಿಯೇ ಮೇಲು ಎಂದು ಹೇಳುವುದುಂಟು. ಗ್ರಾಮ ಸಂಸ್ಕೃತಿ ವರ್ಧನಕ್ಕೆ ಈ ಸೂಚನೆಗಳು:

೧. ಗ್ರಾಮ ಸಂಪ್ರದಾಯ ರೂಢಿಗಳು, ಗ್ರಾಮ ಸಂಸ್ಥೆಗಳು, ಸ್ಥಳ ಪುರಾಣ-ಇವುಗಳ ಅಭ್ಯಾಸ.

೨. ಹಳ್ಳಿಯ ಪದಗಳು, ಹಳ್ಳಿಯ ದಂತಕಥೆಗಳು, ಹಳ್ಳಿಯ ಕಲೆ-ಇವುಗಳ ಅಧ್ಯಯನ.

೩. ಗ್ರಾಮಕಲೆ, ಗ್ರಾಮೋದ್ಯೋಗಗಳ ಪುನರುಜ್ಜೀವನ.

೪. ಭಜನೆ, ಕೀರ್ತನೆ, ಕಥೆ, ನಾಟಕಗಳ ಏರ್ಪಾಟು; ತನ್ಮೂಲಕ ಶಿಕ್ಷಣ.

೫. ಜಾತಿಭೇದಗಳಿಲ್ಲದೆ ಗ್ರಾಮದ ಐಕಮತ್ಯದ ಬೆಳವಣಿಗೆಗೆ ಹಳ್ಳಿಯ ಜಾತ್ರೆ ಪರಿಷೆ, ಹಬ್ಬ ಹರಿದಿನಗಳ ವ್ಯವಸ್ಥೆ. ಪರಸ್ಪರರ ಹಬ್ಬಗಳಲ್ಲಿ ಜಾತ್ರೆಗಳಲ್ಲಿ ಬೇರೆ ಬೇರೆ ಗುಂಪಿನ ಜನ ಭಾಗವಹಿಸುವಂತೆ ಪ್ರೋತ್ಸಾಹಿಸಬೇಕು.

೬. ಗ್ರಾಮ ಪುಸ್ತಕ ಭಂಡಾರ, ಗ್ರಾಮ ವಸ್ತು ಸಂಗ್ರಹಾಲಯ, ಗ್ರಾಮ ವ್ಯಾಸಂಗೋಷ್ಠಿಗಳ ಏರ್ಪಾಡು.

೭. ಆಟಗಳು, ನಾಟಕ, ಕೋಲಾಟ, ಯಾತ್ರೆ-ಪ್ರವಾಸಗಳಂಥ ಆರೋಗ್ಯಕರ ಮನರಂಜನೆಯ ಏರ್ಪಾಟು.

ಗ್ರಾಮ ಸಂಸ್ಕೃತಿಯ ಪುನರುಜ್ಜೀವನ ಕಾರ್ಯ ರಚನಾತ್ಮಕವಾಗಿದ್ದು, ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಹಳ್ಳಿಯವರಿಗೆ ಉನ್ನತ ಗುಣಗಳನ್ನು ಕಲಿಸುವಂಥದಾಗಿರಬೇಕು.

# ೧೧ ಪ್ರಕರಣ

## ಒಂದು ಯೋಜನೆ

ಶಾಶ್ವತ ವ್ಯವಸ್ಥೆಯನ್ನು ಏರ್ಪಡಿಸಲು ಅಗತ್ಯವಾದ ಹಲವಾರು ಅಂಶಗಳನ್ನು ಇಲ್ಲಿಯವರೆಗೆ ನೋಡಿದೇವೆ. ದೇಶವನ್ನು ಯಾವ ರೀತಿ ರಚಿಸಬೇಕೋ ಸ್ಥೂಲವಾಗಿ ಹೆಗ್ಗುರುತನ್ನು ಹೇಳಿದೇವೆ.

ಈ ಗುರಿಯನ್ನು ಸಾಧಿಸಲು ನಮಗೆ ಒಂದು ಪ್ರಯೋಗ ಕ್ಷೇತ್ರ ಬೇಕು. ಅಲ್ಲಿ ಕೆಲಸಗಾರರು ತರಬೇತಾಗುತ್ತಾರೆ. ಆದುದರಿಂದ ಕೆಲವು ಹಳ್ಳಿಗಳನ್ನು ಆರಿಸಿ, ಅಲ್ಲಿ ಸರ್ವತೋಮುಖವಾಗಿ ಇಲ್ಲಿಯವರೆಗೆ ವಿಚಾರ ಮಾಡಿದ ರೀತಿಯಲ್ಲಿ ಕೆಲಸ ನಡೆಸಬೇಕು. ಇದಕ್ಕಾಗಿ ಕೆಲವು ಸಂಸ್ಥೆಗಳನ್ನು ಸ್ಥಾಪಿಸಬೇಕು. ಪ್ರತಿಯೊಂದೂ ಸ್ವತಂತ್ರ ಪ್ರಜಾರಾಜ್ಯ ಪದ್ಧತಿಯಿಂದ ಗ್ರಾಮಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸ ಮಾಡಬೇಕು. ಒಂದು ಸಾಮಾನ್ಯ ಯೋಜನೆಯಂತೆ ಕೆಲಸ ಮಾಡುವ ಸಂಸ್ಥೆಗಳನ್ನು 'ಲೋಕ ಸೇವಕ ಸಂಘ' ಎನ್ನಬಹುದು.

ಈ ಸಂಘಗಳು ಪುಷ್ಟಿಗೊಂಡರೆ ಆಡಳಿತ ಯಾವ ರೀತಿ ನಡೆಯು ಬೇಕೆಂದು ಸರಕಾರಕ್ಕೆ ಮಾರ್ಗದರ್ಶನ ಮಾಡಬಲ್ಲವು; ಸರಕಾರಕ್ಕೆ ಅಂಕುಶ-ವಿರೋಧ ಪಕ್ಷ-ವಾಗಿ ಇರಬಲ್ಲವು.

ಸ್ಪರ್ಧಾಮಯ ಆರ್ಥಿಕ ವ್ಯವಸ್ಥೆಯಲ್ಲಿ ಸರಕಾರದ ಆಡಳಿತವನ್ನು ವಿರೋಧ ಪಕ್ಷ ತಡೆಗಟ್ಟಿ ದಾರಿಗೆ ತರುತ್ತದೆ. ಸತ್ಯ ಅಹಿಂಸೆಗಳ ಮೇಲೆ ಕಟ್ಟಿದ ಆರ್ಥಿಕ ವ್ಯವಸ್ಥೆಯಲ್ಲಿ ಅಂಥ ವಿರೋಧ ಪಕ್ಷ ಇರದು. ನಾವು ಮಾಡುವ ಕೆಲಸವನ್ನು ಸರಕಾರ ಗಮನಿಸುವಂತೆ ಅವರ ದೃಷ್ಟಿ ಸೆಳೆದು, ನಮ್ಮ ಯೋಜನೆಗಳನ್ನೆ ಅವರು ಅನುಸರಿಸುವಂತೆ ಮಾಡಬೇಕು. ಮೊದಲು ಈ ಸಂಸ್ಥೆ ಬೇರೆ ಬೇರೆ ಕೇಂದ್ರಗಳಲ್ಲಿ ಪ್ರಾರಂಭವಾದೀತು. ಕಡೆಗೆ ಎಲ್ಲವೂ ಒಟ್ಟು ಸೇರಿ ಲೋಕ ಸೇವಕ ಸಂಘ ಆದಾವು. ಆಗ

ಈ ಜನಶಕ್ತಿ ಅಜೇಯವಾಗುತ್ತದೆ. ಸರಕಾರ ಅದನ್ನು ಅಸಡ್ಡೆ ಮಾಡ ಲಾರದು. ಆಗ ರಾಷ್ಟ್ರದ ವಿಧಾನ ಸಭೆಗಳಲ್ಲಿ ಈ ಸಂಘದ ಧೋರಣೆಗೆ ಸಾಕಷ್ಟು ಮನ್ನಣೆ ದೊರೆತೀತು.

ಆ ಸಂಘಕ್ಕೆ ಒಂದು ರೂಪು ಹೀಗಿರಬಹುದು :

**ಕಾರ್ಯ ಸಮಿತಿ :** ಅಧ್ಯಕ್ಷ, ಕಾರ್ಯದರ್ಶಿಗಳ ಸಮೇತ ಒಂಬತ್ತು ಜನರದು ಒಂದು ಕಾರ್ಯ ಸಮಿತಿ. ಅಧ್ಯಕ್ಷ, ಕಾರ್ಯದರ್ಶಿಗಳಲ್ಲದ ಉಳಿದ ಸದಸ್ಯರು ಬೇರೆ ಬೇರೆ ಶಾಖೆಗಳನ್ನು ವಹಿಸಿಕೊಳ್ಳುತ್ತಾರೆ. ಅವರೇ ಶಾಖಾ ಸಂಚಾಲಕರು. ಶಾಖೆಗಳು : ೧. ಆರೋಗ್ಯ ೨. ಶಿಕ್ಷಣ ೩. ಅರ್ಥವ್ಯವಸ್ಥೆ ೪. ರಾಜಕೀಯ ೫. ಸಾಮಾಜಿಕ ೬. ಪ್ರಕಟನೆ.

**ಸಂಚಾಲಕರ ಸಭೆ :** ಕಾರ್ಯಸಮಿತಿಯಲ್ಲಿ ತಮ್ಮ ತಮ್ಮ ಶಾಖೆಯ ರೀತಿ ನೀತಿಯನ್ನು ಸಂಚಾಲಕರು ರೂಪಿಸಿಕೊಳ್ಳುತ್ತಾರೆ. ಆಯಾ ಶಾಖೆಯಲ್ಲಿ ಒಂದು ಪ್ರತ್ಯೇಕ ಸಮಿತಿ. ಅದರ ಮೂಲಕ ಸಂಚಾಲಕ ಆ ಶಾಖೆಯ ಕೆಲಸವನ್ನು ನಡಸುತ್ತಾನೆ. ಆ ಸಮಿತಿಯಲ್ಲಿ ಬೇರೆ ಬೇರೆ ಕಾರ್ಯ ವಿಭಾಗದ ತಜ್ಞರು ಇರುತ್ತಾರೆ.

ಉದಾ : ಆರೋಗ್ಯ ಸಮಿತಿಯಲ್ಲಿ ಆಹಾರ ಶಾಖೆಯ ಕಾರ್ಯದರ್ಶಿ, ಮಕ್ಕಳ ಯೋಗಕ್ಷೇಮದ ಕಾರ್ಯದರ್ಶಿ, ನೈರ್ಮಲ್ಯ ಕಾರ್ಯದರ್ಶಿ ಇತ್ಯಾದಿ ಇರುತ್ತಾರೆ. ಈ ಕಾರ್ಯದರ್ಶಿಗಳೆಲ್ಲ ಸೇರಿ ಸಂಚಾಲಕ ಸಭೆ. ಅದಕ್ಕೆ ಸಂಚಾಲಕರು ಅಧ್ಯಕ್ಷರು.

**ಕಾರ್ಯದರ್ಶಿಗಳ ಸಮಿತಿ :** ಕಾರ್ಯದರ್ಶಿಗಳ ಸಮಿತಿಗೆ ಆಧಾರ ಪ್ರಾಂತೀಯ ತಜ್ಞರ ಮಂಡಲಿಗಳು. ಆಹಾರ ಸಮಿತಿಗೆ ಆಹಾರ ಶಾಖಾ ಕಾರ್ಯದರ್ಶಿ ಅಧ್ಯಕ್ಷ. ಲೋಕಸೇವಕ ಸಂಘದ ಆಹಾರ ಶಾಸ್ತ್ರಜ್ಞರು ಸದಸ್ಯರು. ದೇಶದ ಎಲ್ಲಾ ಕಡೆಗಳಿಂದ ಅವರು ಬರುತ್ತಾರೆ. ವಿಚಾರ ವಿನಿಮಯಕ್ಕೆ ಅವಕಾಶವಾಗುತ್ತದೆ.

ಎಲ್ಲಾ ಪ್ರಾಂತಗಳಲ್ಲೂ ಇಂಥ ಮಂಡಲಿಗಳು ಕೆಲಸ ಮಾಡುತ್ತಿರು ತ್ತವೆ. ಹೀಗೆ ಇಡೀ ದೇಶಗಳಲ್ಲಿ ಈ ಸಂಸ್ಥೆಗಳು ಏಕಪ್ರಕಾರವಾಗಿ ಕೆಲಸ ಮಾಡುತ್ತಾರೆ.

**ಸಕಲ ಸಂಚಾಲಕರ ಸದಸ್ಸು:** ಲೋಕಸೇವಾ ಸಂಘದ ಕಾರ್ಯ ಸಮಿತಿ ಎಲ್ಲಾ ಪ್ರಾಂತಗಳ ಸಂಚಾಲಕರ ಸದಸ್ಸನ್ನು ನೆರೆಯಿಸುತ್ತದೆ. ಅಲ್ಲಿ ಸಾಮಾನ್ಯ ನೀತಿಯನ್ನು ನಿರ್ಧರಿಸುತ್ತಾರೆ. ಹೀಗೆಯೇ ತಜ್ಞರ ಮಂಡಲಿಗಳೂ, ಕಾರ್ಯದರ್ಶಿಗಳ ಸಭೆಗಳೂ ನಡೆದು ವಿಚಾರ ವಿನಿಮಯ ವಾಗುತ್ತದೆ.

**ಶಿಕ್ಷಣ:** ತಾಲೀಮಿ ಸಂಘಗಳು ಪೂರ್ವ ಮೂಲಶಿಕ್ಷಣ, ಮೂಲ ಶಿಕ್ಷಣಗಳನ್ನು ನಡೆಸುತ್ತವೆ. ಇನ್ನೊಂದು ಗುಂಪು ಹಿಂದುಸ್ಥಾನಿ ಪ್ರಚಾರ ನಡಸುತ್ತದೆ. ಇನ್ನೊಂದು ಗುಂಪು ಉತ್ತರ ಮೂಲಶಿಕ್ಷಣದ ವಿದ್ಯಾಪೀಠಗಳನ್ನು ನಡೆಸಿ ಉದ್ಯೋಗ-ವೃತ್ತಿ ಶಿಕ್ಷಣವನ್ನು ವಿಶ್ವವಿದ್ಯಾ ನಿಲಯದ ಮಟ್ಟದಲ್ಲಿ ಕೊಟ್ಟೀತು. ಸಂಶೋಧನೆ ನಡಸೀತು. ಈ ವಿದ್ಯಾಪೀಠಗಳು ತರುಣನನ್ನು ಯೋಗ್ಯ ರೀತಿಯಲ್ಲಿ ತರಬೇತು ಮಾಡಿ ರಚನಾತ್ಮಕ ಕಾರ್ಯದಲ್ಲಿ ಅವರನ್ನು ತೊಡಗಿಸಲು ಸಹಾಯ ಮಾಡುತ್ತವೆ. ಈ ವಿದ್ಯಾಪೀಠಗಳಿಗೆ ಆಧಾರ ತಾಲೀಮೀ ಸಂಘಗಳು.

**ಆರ್ಥಿಕ ವಿಭಾಗ:** ಆರ್ಥಿಕ ವಿಭಾಗದಲ್ಲಿ ವ್ಯವಸಾಯ ಶಾಖೆ, ಗ್ರಾಮೋದ್ಯೋಗ, ವಿವಿಧೋದ್ದೇಶ ಸಹಕಾರ ಸಂಘಗಳು, ರಾಜಕೀಯ ಶಾಖೆ, ಪ್ರಚಾರ ಶಾಖೆ-ಇರುತ್ತವೆ.

ವ್ಯವಸಾಯ ಶಾಖೆಯಲ್ಲಿ ಕೃಷಿಯ ಸ್ವಸಂಪೂರ್ಣತೆ, ವೃತ್ತಿ ಸಂಬಂಧ ಎರಡಕ್ಕೂ ಸಂಬಂಧಿಸಿದ ವಿಷಯಗಳಿವೆ. ಮೊದಲನೆಯದರಲ್ಲಿ ದಿನಬಳಕೆಯ ಬೆಳೆ, ಕಾಯಿಪಲ್ಯ, ಹಣ್ಣುಹಂಪಲು ಇತ್ಯಾದಿ. ಎರಡ ನೆಯದರಲ್ಲಿ ಹಣ ತೆಗೆವ ಬೆಳೆಗಳು.

ಪಶುಪಾಲನಾ ಶಾಖೆಯಲ್ಲಿ ಗೋಸಂವರ್ಧನ, ಕುರಿ ಸಾಕಣೆ, ಇವಕ್ಕೆ ಸಂಬಂಧಿಸಿದಂತೆ ರೇಷಿಮೆ ಕೆಲಸ, ಮೀನು ಸಾಕಣೆ. ಇದರಲ್ಲಿಯೆ ಕ್ಷಿರೋತ್ಪತ್ತಿ-ವಿಭಾಜನ. ಇದಕ್ಕೊಂದು ಉಪ-ಉತ್ಪತ್ತಿ ವಿಭಾಗ: ಕೊಂಬಿನ ಕೆಲಸ, ಚರ್ಮದ ಕೆಲಸ, ಗೋಂದು-ವಜ್ರಸರಿ ಇತ್ಯಾದಿಗಳಿ ಗಾಗಿ.

ಗ್ರಾಮೋದ್ಯೋಗಗಳಲ್ಲಿ ಮೊದಲು ವ್ಯವಸಾಯ ಶಾಖೆಗೆ ಸಂಬಂಧಿ ಸಿದ ಹಾಗೆ ಆಹಾರದ ಕೈಗಾರಿಕೆ. ಇನ್ನೊಂದು ಭಾಗ ಬಟ್ಟೆ, ಸಾಬೂನು,

ಕಾಗದ, ಗಡಿಗೆ-ಮಡಕೆ, ಚರ್ಮದ ಸಾಮಾನು ಇತ್ಯಾದಿ ದಿನಬಳಕೆಯ ಪದಾರ್ಥಗಳದು.

ವಿವಿಧೋದ್ದೇಶ ಸಹಕಾರ ಸಂಘಗಳು ಉತ್ಪತ್ತಿ ಮಾಡುವವರಿಗೂ ಬಳಸುವವರಿಗೂ ನಡುವಿನ ಸೇತುವೆ. ಹಂಚಿಕೆಯೂ ಅದರ ಕೆಲಸವೇ. ಮೂಲವಸ್ತುವನ್ನು ಉತ್ಪಾದಕರಿಗೆ ಒದಗಿಸಿ, ಅವರು ಸಿದ್ಧ ಮಾಡಿದ ಪದಾರ್ಥವನ್ನು ಸಂಗ್ರಹಿಸಿ ಮಾರಾಟ ಮಾಡಬೇಕು. ಧನ ಸಹಾಯಕ್ಕಿಂತ ಹೆಚ್ಚಾಗಿ ಪರಿಶ್ರಮ ಸಹಾಯ ಹೆಚ್ಚು ಮಾಡಬೇಕು.

ರಾಜಕೀಯ ವಿಭಾಗ ಜನರ ಆರ್ಥಿಕ ಕಾರ್ಯಕಲಾಪಗಳಿಗೂ ಸರಕಾರಕ್ಕೂ ನಡುವಿನ ಸೂತ್ರ. ಈ ಶಾಖೆಯ ಕಾರ್ಯದರ್ಶಿ ಸರಕಾರಕ್ಕೂ ಜನರಿಗೂ ಸಂಪರ್ಕ ತರುವ ಮಧ್ಯವರ್ತಿ. ಪ್ರಾಂತೀಯ, ಕೇಂದ್ರ ಸರಕಾರಗಳನ್ನು ಕಂಡು ಜನರ ಕಲ್ಯಾಣಕ್ಕಾಗಿ ಮಹೋದ್ಯೋಗಗಳೆಲ್ಲ ಸರಿಯಾಗಿ ನಿಯಂತ್ರಣವಾಗುವಂತೆ, ರಾಷ್ಟ್ರೀಯ ಆಡಳಿತದ ವರ್ಗ ಸರಿಯಾಗಿ ಕೆಲಸ ಮಾಡುವಂತೆ ಪ್ರಯತ್ನಿಸುತ್ತಾನೆ.

ಈ ಶಾಖೆಯ ಇನ್ನೊಂದು ಭಾಗ ಪ್ರಚಾರದ್ದು. ವಿದ್ಯಾಪೀಠದ ಸಂಶೋಧನ ಶಾಖೆಯವರು ಸಂಗ್ರಹಿಸಿದ ಜ್ಞಾನವನ್ನೂ ಜನರಿಗೆ ಉಪಯೋಗವಾಗುವ ಅಂಕೆ ಅಂಶಗಳನ್ನೂ ಇವರು ಪ್ರಸಾರ ಮಾಡುತ್ತಾರೆ. ಪ್ರಕಟನಾ ಶಾಖೆಯೊಂದಿಗೆ ಕೆಲಸ ನಡೆಸುತ್ತಾರೆ.

**ರಾಜಕೀಯ ವಿಭಾಗ:** ಇದರಲ್ಲಿ ಗ್ರಾಮ ಪಂಚಾಯತಿಗಳ, ಇತರ ರಾಜಕೀಯ ಸಂಸ್ಥೆಗಳ ಸಂಘಟನೆಗೆ ಒಂದು ಶಾಖೆಯಿರುತ್ತದೆ. ಇನ್ನೊಂದು ಕೇಂದ್ರ-ಪ್ರದೇಶ ಸರಕಾರಗಳ ಸಂಪರ್ಕಶಾಖೆ. ಆರ್ಥಿಕ ವಿಭಾಗದ ಸಂಪರ್ಕ ಶಾಖಾಧಿಕಾರಿಯ ಜೊತೆಗಾಡಿ ಕೆಲಸ ಮಾಡುತ್ತದೆ ಈ ಶಾಖೆ.

**ಸಾಮಾಜಿಕ ವಿಭಾಗ:** ಇದರಲ್ಲಿ ೧. ಜಾತಿಗಳ ಸೌಹಾರ್ದ, ೨. ಹರಿಜನರ, ಹಿಂದುಳಿದವರ ಉದ್ಧಾರ ೩. ಕೃಷಿ-ಕೂಲಿಕಾರರ, ಉಳಿದ ಕೆಲಸಗಾರರ ಸಂಘಟನೆ ೪. ಯುವಜನರ, ಸ್ವಯಂಸೇವಕರ ಶಿಕ್ಷಣ ೫. ಸ್ತ್ರೀಯರ ಕುಂದು ಕೊರತೆಗಳ ನಿವಾರಣೆ-ಇಷ್ಟು ಶಾಖೆಗಳು.

**ಪ್ರಕಟನೆ:** ಶಾಶ್ವತೋಪಯೋಗದ ಪುಸ್ತಕಗಳನ್ನು ಈ ಶಾಖೆ ಪ್ರಕಟಿಸುತ್ತದೆ. ಪಠ್ಯಪುಸ್ತಕ, ನಿದರ್ಶನ ಗ್ರಂಥಗಳನ್ನು ಬೇರೆ ಬೇರೆ ಕಾರ್ಯಕ್ರಮಗಳನ್ನು ಪೋಣಿಸುವ ಪತ್ರಿಕೆಗಳನ್ನೂ ಪ್ರಕಟಿಸುತ್ತದೆ.

**ಕೊನೆ ಮಾತು:** ಇದು ಬಹಳ ವಿಸ್ತಾರವಾದ ಯೋಜನೆ ಎನಿಸೀತು. ಕೃತಿಯಲ್ಲಿ ಇದು ಬಹಳ ಸುಲಭ. ಒಂದೊಂದು ಲೋಕಸೇವಕ ಸಂಘವು ೨೫-೩೦ ಸಾವಿರ ಜನವಸತಿಯ ೧೫-೨೦ ಹಳ್ಳಿಗಳನ್ನು ತನ್ನ ಕಾರ್ಯ ಕ್ಷೇತ್ರವಾಗಿ ಮಾಡಿಕೊಳ್ಳುತ್ತದೆ. ಮೇಲೆ ಹೇಳಿದ ಎಲ್ಲಾ ಕಾರ್ಯ ಕ್ರಮಗಳನ್ನೂ ಅಲ್ಲಿಮಾಡುತ್ತದೆ. ಜನರ ಪೂರ್ಣ ಸಹಕಾರದಿಂದ ಈ ಸಂಸ್ಥೆಗಳನ್ನು ನಡೆಸಿ ಪಡೆದ ಅನುಭವ ಸಾರ್ವಜನಿಕ ಕಾರ್ಯದಲ್ಲಿ ಶಿಕ್ಷಣವಾದೀತು. ಸರಕಾರಕ್ಕೂ ಒಂದು ಮಾದರಿಯಾಗಿ, ನಿಜವಾದ ಸ್ವರಾಜ್ಯವನ್ನು ಜನತೆಗೆ ಒದಗಿಸಲು ದಾರಿ ಮಾಡೀತು.

## ಲೋಕ ಸೇವಕ ಸಂಘದ ಸದಸ್ಯರ ಪ್ರತಿಜ್ಞಾಪತ್ರ

೧. ಲೋಕಸೇವಕ ಸಂಘದ ನಿಯಮಾವಳಿಯನ್ನು ಓದಿ ನಾನು ಅದರ ಸದಸ್ಯನಾಗಬಯಸುತ್ತೇನೆ. ದೈವಕೃಪೆಯಿದ್ದರೆ ಯಥಾಶಕ್ತಿ ಯಥಾಮತಿ ಸಂಘದ ಉದ್ದೇಶ್ಯ ಸಾಧನೆಗಾಗಿ, ಹಳ್ಳಿಯ ಬಡವರ ದುಃಖ ನಿವಾರಣೆ-ಸೇವೆಗಾಗಿ ದುಡಿಯುತ್ತೇನೆ.

೨. ಸಂಘದ ಧ್ಯೇಯಗಳಿಗೆ ಅನುಗುಣವಾಗಿ ನಡೆಯಲು ಸರ್ವ ಶಕ್ತಿಯಿಂದಲೂ ಯತ್ನಿಸುತ್ತೇನೆ.

೩. ಸಹಾಯ, ಸಹಕಾರ ದೊರೆತಲ್ಲೆಲ್ಲ, ರಾಜಕೀಯ ಭೇದ ಗಳನ್ನೂ ಗಮನಿಸಿದೆ, ಪಡೆದು ನನ್ನ ಕರ್ತವ್ಯವನ್ನು ನಿರ್ವಹಿಸುತ್ತೇನೆ.

೪. ಲೋಕಸೇವಕ ಸಂಘ ಅಪ್ಪಣೆ ಮಾಡಿದ ಹೊರತು ನಾನು ರಾಜಕೀಯದಲ್ಲಿ ಪ್ರವೇಶಿಸುವುದಿಲ್ಲ. ವಿಧಾನ ಸಭೆಗೆ ಸದಸ್ಯನಾಗೆಂದರೆ ಲೋಕಸೇವಕ ಸಂಘ ಕೊಡುವ ವೇತನದಲ್ಲಿ ಜೀವನವನ್ನು ನಿರ್ವಹಿಸಿ ಉಳಿದುದನ್ನು ಸಂಘಕ್ಕೆ ಕೊಡುತ್ತೇನೆ.

೫. ಸ್ವಯಂ ನೂತ ದಾರದ್ದೋ, ಚರಖಾ ಸಂಘದಿಂದ ಪ್ರಮಾ ಣಿತವಾದುದೋ, ಖಾದಿಯನ್ನೇ ಧರಿಸುತ್ತೇನೆ. ಉಳಿದ ವಸ್ತುಗಳ

ಬದಲು ಗ್ರಾಮೋದ್ಯೋಗದ ವಸ್ತುಗಳನ್ನೇ ಬಳಸುತ್ತೇನೆ. ಮದ್ಯಪಾನ ಮಾಡೆ. ಅಸ್ಪೃಶ್ಯತೆಯನ್ನು ವೈಯಕ್ತಿಕವಾಗಿ ನನ್ನ ಕುಟುಂಬದಲ್ಲಿ ತ್ಯಜಿಸುತ್ತೇನೆ. ಅಂತರ್ಜಾತೀಯ ಸೌಹಾರ್ದದಲ್ಲಿ ನನಗೆ ವಿಶ್ವಾಸವಿದೆ. ಸರ್ವಧರ್ಮಗಳಲ್ಲಿಯೂ ಆದರವಿದೆ. ಸಮಾನಾವಕಾಶ, ಜಾತಿ ಧರ್ಮ ಲಿಂಗ ಭೇದವಿಲ್ಲದೆ ಸಮಾನ ಗೌರವ ಸಿಗಬೇಕೆಂಬುದಕ್ಕೆ ನನ್ನ ಒಪ್ಪಿಗೆ.

ರುಜು—

ಹೀಗೆ ಸುವ್ಯವಸ್ಥಿತವಾದ ಲೋಕಸೇವಕ ಸಂಘಗಳು ದೇಶದಲ್ಲೆಲ್ಲಾ ಹರಡಿ ಸಾರ್ವಜನಿಕ ಜೀವನಕ್ಕೆ ಕಳೆತುಂಬುತ್ತವೆ. ರಾಷ್ಟ್ರೀಯ ಕ್ಷೇತ್ರದಲ್ಲಿ ವಿಸ್ತಾರವಾದ ಭಾರಗಳನ್ನು ಹೊರಲು ರಾಜಕಾರಣಿಗಳಿಗೆ ಇಲ್ಲಿ ತರಬೇತು ಸಿಗುತ್ತದೆ.

ಇಂಥ ಸಂಸ್ಥೆಯನ್ನು ಕಟ್ಟಿ, ಸತ್ಯ ಅಹಿಂಸೆಗಳ ಸಮಾಜವನ್ನು ರಚಿಸಲು ದೇಶ ಸಂಕಲ್ಪಿಸದಿದ್ದರೆ ನಮ್ಮ ಆರ್ಥಿಕ, ಸಾಮಾಜಿಕ, ರಾಜಕೀಯ ಜೀವನದಲ್ಲಿ ಸ್ಥಿರತೆ ಶಾಶ್ವತತೆ ಸಾಧ್ಯವಿಲ್ಲ. ಈಗಿನ ಸ್ಪರ್ಧೆ, ಕೇಂದ್ರೀಯ ಉದ್ಯೋಗಗಳ ಸಮಾಜ ಹಲಕೆಲವು ವರ್ಷಗಳಿಗೊಮ್ಮೆ ಭಯಂಕರ ಸ್ಫೋಟನೆಗಳನ್ನು ತರುತ್ತದೆ. ರಾಷ್ಟ್ರಗಳು ಒಂದು ಗುರಿಯ ಕಡೆ ಸಾಗಬೇಕೆಂದರೆ ಈ ಆಸ್ಫೋಟನೆಗಳು ನಿಲ್ಲಬೇಕು. ಆಗ ರಾಷ್ಟ್ರಗಳಲ್ಲಿ ಶಾಂತಿ, ವ್ಯಕ್ತಿಗಳಿಗೆ ಅಭಿವೃದ್ಧಿ ಸಾಧ್ಯ.

ಇಂಥ ರಾಜ್ಯದಲ್ಲಿ ಮಾತ್ರ ಪ್ರಾಮಾಣಿಕತೆ, ದುರ್ಬಲರಿಗೆ ಅಭಯ, ಸಾಮಾನ್ಯನಿಗೆ ನ್ಯಾಯ ದೊರೆತೀತು. ಅಲ್ಲಿ ಬಲವೇ ನ್ಯಾಯವಾಗದು; ಶೋಷಣೆ ವಂಚನೆಗೆ ಪ್ರೋತ್ಸಾಹವಿರದು. ಆ ಸಮಾಜದಲ್ಲಿ ಅನ್ಯಾಯಾರ್ಜಿತ ಧನದ ಹಂಬಲವಿರದು; ವಂಚಕ-ಶೋಷಕರ ಸೆಳೆತವೂ ಇರದು. ಮನುಷ್ಯನನ್ನು ಪಶುತನದಿಂದ ಮೇಲೆತ್ತಿ ಮಾನವನನ್ನಾಗಿ ಮಾಡಿ, ಸ್ಥಿರಸಂಸ್ಕೃತಿಯನ್ನು ರೂಪಿಸಿ ಊರ್ಧ್ವಗತಿಯನ್ನು ಸಾಧಿಸೀತು. ಇದಕ್ಕೆ ಆತ್ಮಸಂಯಮ, ಆತ್ಮನಿಗ್ರಹ ಬಹಳ ಬೇಕು. ಇವೆರಡೂ ಒದಗಿ ಬಂದು, ಶಾಶ್ವತ ಅರ್ಥವ್ಯವಸ್ಥೆಯಾಗುವಂತೆ ಆದೀತೆಂದು ಆಶಿಸೋಣ.





ಲೋಕಸೇವಕ ಸಂಘ
ಆರೋಗ್ಯ
ಶಿಕ್ಷಣ
ಪ್ರಕಟನೆ
ಆರ್ಥಿಕ
ರಾಜಕೀಯ
ಸಾಮಾಜಿಕ
ಆಹಾರ ಶಾಸ್ತ್ರ
ಮಕ್ಕಳ, ಸಾರ್ವಜನಿಕ ಯೋಗಕ್ಷೇಮ
ನೈರ್ಮಲ್ಯ ಆರೋಗ್ಯ
ಮೂಲ ಶಿಕ್ಷಣ
ಹಿಂದುಸ್ತಾನಿ
ಔದ್ಯೋಗಿಕ ಶಿಕ್ಷಣ
ಗ್ರಾಮ ಪಂಚಾಯತಿ
ಕೇಂದ್ರ-ಪ್ರಾಂತ ಸಹಕಾರ
ಕೃಷಿ
ಗ್ರಾಮೋದ್ಯೋಗ
ವಿ. ಸಹಕಾರ ಸಂಘ
ಮುಖ್ಯೋದ್ಯೋಗಗಳ ನಿಯಂತ್ರಣ
ಪ್ರಚಾರ
ವೃತ್ತಿ
ಸ್ವಾವಲಂಬನೆ
ಕಾಯಿ ಪಲ್ಯ
ಹಣ್ಣು
ಆಹಾರ
ಪ್ರಾಥಮಿಕ ಅಗತ್ಯ
ರಾಷ್ಟ್ರೀಯ ಸೇವಾಕಾರ್ಯಗಳ ನಿಯಂತ್ರಣ
ಜಾತಿ ಸೌಹಾರ್ದ
ಹರಿಜನ
ರೈತ ಕಾರ್ಮಿಕ
ಯುವಕ
ಹಿಂದುಳಿದವರು
ಗೃಹೋದ್ಯೋಗಿ
ಆದಿವಾಸಿಗಳು
ಸ್ತ್ರೀ ಸಮಸ್ಯೆ
ಪಶುಪಾಲನೆ
ಕ್ಷೀರೋತ್ಪತ್ತಿ
ಗೋಪಾಲನೆ
ಕುರಿ ಸಾಕಣೆ
ಮೀನಿನ ಸಾಕಣೆ
ಮೇಕೆ ಸಾಕಣೆ
ಕೋಳಿ ಸಾಕಣೆ
ಜೇನು ಸಾಕಣೆ
ರೇಷ್ಮೆ
ಸಮುದ್ರ ಮೀನಿನ ಕೈಗಾರಿಕೆ

